ಮನೋಹರ ಗ್ರಂಥಮಾಲೆಯ ೭೬—೭೭ ನೆಯ ಕುಸುಮ

# ಇಜ್ಜೋಡು

## ( ಸಾಮಾಜಿಕ ಕಾದಂಬರಿ )

ಭಾಗ ೩

ಬರೆದವರು :

**ವಿ. ಕೃ. ಗೋಕಾಕ**

ಬೆಲೆ: ೨—೦—೦

ಮನೋಹರ ಗ್ರಂಥ ಪ್ರಕಾಶನ ಸಮಿತಿ

ಧಾ ರ ವಾ ಡ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು :

ಶ್ರೀ ದ. ರಾ. ಬೇಂದ್ರೆ, ಎಂ. ಎ.

ಶ್ರೀ ವಿ. ಕೃ. ಗೋಕಾಕ, ಬಿ. ಎ (ಆಕ್ಸ್‌ಫರ್ಡ್)

ಶ್ರೀ ರಂ. ಶ್ರೀ. ಮುಗಳಿ, ಎಂ. ಎ. ಬಿ. ಟಿ.

ಸಂಪಾದಕ :

**ಜಿ. ಬಿ. ಜೋಶಿ**

ಪ್ರಕಾಶಕರು:
ಜಿ. ಬಿ. ಜೋಶಿ,
ಮನೋಹರ ಗ್ರಂಥಮಾಲಾ,
ಧಾರವಾಡ

ಮುದ್ರಕರು:
ಆರ್. ಎನ್. ಹಬ್ಬು,
ಉಷಾ ಪ್ರೆಸ್, ನೀಲಗಿರಿ ರೋಡ್
ಮೈಸೂರು

# ಪರಿವಿಡಿ

## ಪ್ರಕರಣ ೪೮

## ನರಹರಿಯ ಪ್ರವಾಸ

ನರಹರಿಯು ನಿಲ್ದಾಣೆಯನ್ನು ಮುಟ್ಟಿದಾಗ ನಸುಕು ಹರಿಯಲು ಇನ್ನೂ ಒಂದೆರಡು ತಾಸಿತ್ತು. ಅರ್ಧಘಂಟೆಯ ಮೇಲೆ ಪುಣೆಯ ಗಾಡಿ ಬರುವದಿತ್ತು. ರಾವುಗನ್ನಡಿಯ ದುಂಡನ್ನ ದೀಪವನ್ನು ಎದುರಿಗಿಟ್ಟುಕೊಂಡು ರೈಲುಗಟ್ಟೆಯ ಮೇಲೆ ಒಂದು ಮೂಲೆಯಲ್ಲಿ ಪೋರ್ಟರನು ಗೊರಕೆ ಹೊಡೆಯುತ್ತಿದ್ದ. ಗಾಡಿಯು ಹೊರಗಿನ ಸಿಗ್ನಲ್ಲಿನ ಹತ್ತಿರ ಬರುವಷ್ಟರಲ್ಲಿ ಎಚ್ಚರಾಗುವ ರೂಢಿಯಿದ್ದ ನಿದ್ರೆಯದು; ಪ್ರಜ್ಞೆಯಿದ್ದ ನಿದ್ರೆ. ಸ್ಟೇಷನ್‌ಮಾಸ್ತರರು ಹೊದ್ದುಕೊಂಡಿದ್ದ ಶಾಲನ್ನು ಅಲ್ಲಿಯೇ ಮೇಜಿನ ಮೇಲೆ ತೆಗೆದಿಟ್ಟು ಟಿಕೀಟು ಕೊಡಲು ಪ್ರಾರಂಭಿಸಿದ್ದರು. ಅವರು ತೆರೆದಿಟ್ಟ ಕಿಡಿಕೆಯೆದುರು ಪ್ರಯಾಣಿಕರ ತಂಡವೊಂದು ನೆರೆದಿತ್ತು.

ನರಹರಿಯು ಅಲ್ಲಿ ಹೋಗಿ ನಿಂತುಕೊಂಡು ತನ್ನ ಸರತಿಗಾಗಿ ಕಾಯ್ದ. ಕಿಸೆಯಲ್ಲಿ ಕೈಹಾಕಿ ನೋಡಿದಾಗ—ಅಲ್ಲಿ ಮೂರು ರೂಪಾಯಿಗಳು ಮಾತ್ರ ಕೈಗೆ ಹತ್ತಿದವು ಒಂದು ರೂಪಾಯನ್ನು ನರಹರಿಯು ಆಪದ್ಧನವೆಂದು ತೆಗೆದಿಟ್ಟ. ತನ್ನ ಪಾಳಿಯು ಬಂದಾಗ ನರಹರಿಯು ಮಾಸ್ತರರೆದುರಿಗೆ ಕಿಡಿಕೆಯಲ್ಲಿ ಎರಡು ರೂಪಾಯಿಯಿಟ್ಟು 'ಟೀಕೀಟು ಕೊಡಿರಿ' ಎಂದು ಕೇಳಿದ

"ಎಲ್ಲಿಗೆ?" ಎಂದು ಮಾಸ್ತರರು ಮೋರೆಯೆತ್ತಿ ನೋಡಿದರು ವಾಡಿಕೆಯಾಗಿ ಅವರ ವ್ಯವಹಾರ,—ಪ್ರಯಾಣಿಕರ ಕೈಯೊಡನೆ. ಏನಾದರೂ ಪ್ರಶ್ನೆಯೆದ್ದಾಗ ಮಾತ್ರ ಪ್ರಯಾಣಿಕರಿಗೆ ಮುಖಗಳೂ ಇರುವವೆಂಬುದು ಅವರಿಗೆ ಗೊತ್ತಾಗುತ್ತದೆ 'ಎಲ್ಲಿಗೆ?' ಎಂದು ಮಾಸ್ತರರು ಕೇಳಿದರು. ಹಳ್ಳಿಯವನಾಗಿದ್ದರೆ ಅವರು ನರಹರಿಯನ್ನು ಬಯ್ದು ಮುಚ್ಚುತ್ತಿದ್ದರು ಸುಸಂಸ್ಕೃತನಂತೆ ಕಂಡ; ಅದಕ್ಕೆ ಸುಮ್ಮನಿದ್ದರು.

"ಎರಡು ರೂಪಾಯಿಗೆ ಯಾವ ಊರಿನ ತನಕ ಟಿಕೀಟು ಬರುವದೋ ಆ ಊರಿಗೆ ಕೊಡಿರಿ!" ಎಂದು ನರಹರಿಯು ಶಾಂತನಾಗಿ ಕೇಳಿದ.

ಮಾಸ್ತರು ಬೆಚ್ಚಿಬಿದ್ದು ನರಹರಿಯ ಮೋರೆಯನ್ನು ಮಿಕಿಮಿಕಿ ನೋಡಿದರು. ಇವನಿಗೇನು ಹುಚ್ಚು ಹಿಡಿದಿರಲಿಕ್ಕಿಲ್ಲವಷ್ಟೆ? ಎಂಬ ಸಂಶ

ಯವು ಅವರ ಮೆದುಳನ್ನು ಪೀಡಿಸಿತು. ಇದೊಂದು ಹೊಸ ರೀತಿಯ ಪ್ರಯಾಣ ವೆಂದು ಅವರಿಗೆನಿಸಿತು

"ಎರಡು ರೂಪಾಯಿಗೆ ಯಾವ ನಿಲ್ದಾಣೆಯ ವರೆಗೆ ಮುಟ್ಟುತ್ತದೆ?" ಎಂದು ಮತ್ತೆ ನರಹರಿ ಕೇಳಿದ.

ಮಾಸ್ತರರು ತಮ್ಮ ಸ್ಮರಣಶಕ್ತಿ ಹಾಗು ಮಾಹಿತಿ ಪುಸ್ತಕವನ್ನು ತಿರುವಿ ಹಾಕಿ "ಖಾಸ್‌ಗಾಂವ್" ಎಂದು ಹೇಳಿದರು.

"ಹಾಗಾದರೆ ಖಾಸ್‌ಗಾಂವಿಗೆ ಟಿಕೀಟು ಕೊಡಿರಿ.!" ಎಂದು ನರಹರಿ ಕೇಳಿದ.

ಮಾಸ್ತರರಿಗೆ ಎರಡನೆಯ ಹಾದಿಯೇ ಉಳಿಯಲಿಲ್ಲ. ಖಾಸ್‌ಗಾಂವಿಯ ಟಿಕೀಟು ತೆಗೆದು ನರಹರಿಯ ಕೈಯ್ಯಲ್ಲಿಟ್ಟರು. ನರಹರಿಯು ಹೋದ ಮೇಲೆ ಪೋರ್ಟರನನ್ನೆಬ್ಬಿಸಿ ತಮ್ಮ ಕೋಣೆಯಲ್ಲಿ ಕರೆದು: "ಈ ಹುಚ್ಚ, ಗಾಡಿ ಹತ್ತುವನೋ ಇಲ್ಲೊ! ಅವನ ಮೇಲೆ ಕಣ್ಣಿಡು. ಆತ್ಮಹತ್ಯೆಗೆ ಹೊರಟಂತೆ ಕಾಣುತ್ತದೆ. ಏನು ಅಪಘಾತವಾದರೂ ನಮ್ಮ ಸ್ಟೇಷನ್ನಿನಲ್ಲಿ ಬೇಡ. ಮತ್ತೆ ಆ ಬಿಟ್ಟೀ ಕೆಲಸ ನಮ್ಮ ಕೊಳ್ಳಿಗೆ ಬಿದ್ದೀತು!" ಎಂದು ನರಹರಿಯನ್ನು ತೋರಿಸುತ್ತ ಮಾಸ್ತರರು ಗೊಣಗುಟ್ಟಿದರು.

ಆದರೆ ಹಾಗೇನೂ ಆಗಲಿಲ್ಲ. ನರಹರಿಯು ಎಲ್ಲರ ಹಾಗೆ ಎಲ್ಲರೊಡನೆ ಗಾಡಿ ಹತ್ತಿ ಕುಳಿತ. ಅವನಿಗೆ ಖಾಸಗಾಂವಿಯೂ ಅಷ್ಟೆ; ಬಳ್ಳಿಗಾಂವಿಯೂ ಅಷ್ಟೇ. ನಿರ್ಲಿಪ್ತನಿಗೆ ಊರು–ಕೆರೆಗಳನ್ನು ತೆಗೆದುಕೊಂಡು ಮಾಡುವದೇನು? ಇನ್ನು ಮೂಡಲಿರುವ ಬೆಳಕು ಖಾಸಗಾಂವಿಯಲ್ಲಿಯೇ ಮೂಡುವದಿದ್ದರೆ ಅದಕ್ಕೆ ನರಹರಿಯು ಏಕೆ ಬೇಡವೆನ್ನಬೇಕು? ಖಾಸಗಾಂವಿಯು ಬರುವ ಹಾದಿ ನೋಡುತ್ತ ಗಾಡಿಯಲ್ಲಿ ನರಹರಿಯು ಕುಳಿತ.

ಅದೊಂದು ಸಣ್ಣ ಡಬ್ಬಿಯಲ್ಲಿ ಆತ ಕುಳಿತಿದ್ದ. ಅದರಲ್ಲಿಯ ಒಂದು ಬೆಂಚಿನ ಮೇಲೆ ಒಬ್ಬರು ತಮ್ಮ ಹಾಸಿಗೆ ಹಾಸಿ ಗಾಡಿಯು ಮನೆಯೆಂದೇ ತಿಳಿದುಕೊಂಡು ಮಲಗಿದ್ದರು. ಇನ್ನೊಂದು ಕಡೆಗೆ ಓರ್ವ ಗರತಿಯು ಮೇಲಿಂದ ಮೇಲೆ ಕಿರಿಕಿರಿ ಮಾಡುವ ಸಣ್ಣ ಮಗುವನ್ನು ತೊಡೆಯ ಮೇಲೆ ಹಾಕಿಕೊಂಡು ಸಂತವಿಸುತ್ತ ಇದ್ದ ಬಿದ್ದ ಜೀವವನ್ನೆಲ್ಲ ತಾಯ್ತನಕ್ಕೆ ವಿಾಸ ಲಿಟ್ಟವಳಂತೆ ಶಾಂತಳಾಗಿ ಕೂತಿದ್ದಳು. ಒಬ್ಬಿಬ್ಬರು ಮುದುಕರು ಅಲ್ಲಿಲ್ಲಿ ಗೊರಕೆ

ಹೊಡೆಯುತ್ತಿದ್ದರು. ಕೆಲವರು ಮಲಗಲಿಕ್ಕೆ ಜಾಗವಿಲ್ಲದೆ ಕುಳಿತುಕೊಂಡಲ್ಲಿಯೇ ತಲೆಯನ್ನು ವಿಧವಿಧವಾಗಿ ತೂಗಿಸುತ್ತ ಬಾಯಿ ತೆರೆಯುತ್ತ ಮತ್ತೆ ಮುಚ್ಚುತ್ತ ನಿದ್ರೆಯ ಚೇಷ್ಟೆಗಳನ್ನೆಲ್ಲ ನಡೆಸಿದ್ದರು. ಇವರನ್ನೆಲ್ಲ ಯಾಂತ್ರಿಕವಾಗಿ ನೋಡುತ್ತ—ಆದರೆ ತನ್ನ ಮನಸ್ಸಿನ ಗುಂಗಿನಲ್ಲಿಯೇ ಲೀನನಾಗಿ—ನರಹರಿಯು ಕುಳಿತಿದ್ದ.

ಸಹಜವಾಗಿಯೇ ನರಹರಿಯ ಲಕ್ಷ್ಯವು ತನ್ನೆದುರಿಗೆ ಕುಳಿತ ಒಬ್ಬರೆಡೆಗೆ ನಿಕಟವಾಗಿ ಹರಿಯಿತು. ಇವರೂ ನರಹರಿಯಂತೆ—ನಿದ್ರೆಯ ತಾಳಕ್ಕೆ ದೇಹವನ್ನು ತೂಗಿಸದೆ—ಕುಳಿತಿದ್ದರು. ಒಂದು ಧೋತರವನ್ನುಟ್ಟು ಧೋತರವನ್ನು ಹೊತ್ತಿದ್ದ ಅವರ ವಯಸ್ಸು ಐವತ್ತರ ಮೇಲಾಗಿತ್ತೆನ್ನಬಹುದು. ಅವರ ಸಾಮಾನೆಂದರೆ ಹತ್ತಿರವಿದ್ದ ಒಂದು ಸಣ್ಣ ಪಂಚೆಯ ಗಂಟು. ಮೇಲಿಂದ ಮೇಲೆ ಅವರು ಕಣ್ಣು ಮುಚ್ಚಿ ತೆರೆಯುತ್ತಿದ್ದರೂ ಅದು ನಿದ್ರೆಯ ಗುಂಗಲ್ಲವೆಂಬುದು ಅವರ ಮೋರೆಯ ಮೇಲೆಯೇ ಕಾಣುತ್ತಿತ್ತು. ನರಹರಿಯು ಅವರನ್ನು ದಿಟ್ಟಿಸಿ ನೋಡತೊಡಗಿದ.

ಅವರೇ ನರಹರಿಯನ್ನು ಮಾತನಾಡಿಸಿದರು. "ನೀವು ಎಲ್ಲಿಗೆ ಹೋಗುವವರು?"

"ಖಾಸಗಾಂವಿಗೆ,—ಸದ್ಯದ ಮಟ್ಟಿಗೆ." ಎಂದು ಹೇಳಿ ನರಹರಿಯು "ನೀವು?" ಎಂದು ಕೇಳಿದ.

"ಖಾಸಗಾಂವಿಯ ಹಿಂದಿನ ನಿಲ್ಮನೆಗೇ ನಾನು ಇಳಿಯಬೇಕು." ಎಂದು ಅವರು ಹೇಳಿದರು.

"ಅಲ್ಲಿ ನಿಮ್ಮ ಊರಿದೆಯೇನು?" ಎಂದು ನರಹರಿಯು ಪ್ರಶ್ನೆ ಮಾಡಿದ. ತನ್ನ ಮನಸ್ಸಿನಲ್ಲಿ ತಾಂಡವವಾಡುತ್ತಿದ್ದ ನೂರೆಂಟು ಮಾತುಗಳನ್ನು ಹತ್ತಿಕ್ಕಿ ಸ್ಥಿರಚಿತ್ತನಾಗಲು ಸಂಭಾಷಣೆಯೂ ಒಂದು ಹಾದಿಯೆಂದು ಅವನಿಗೆನಿಸತೊಡಗಿತು.

"ನನಗೆ ನನ್ನದೆಂಬುವ ಊರೇ ಇಲ್ಲ. ಏನೋ ಪುಣ್ಯಕ್ಷೇತ್ರ. ಅಲ್ಲಿ ಒಂದು ಪವಿತ್ರ ದೇವಸ್ಥಾನವಿದೆ. ನಾಲ್ಕು ದಿನ ಅಲ್ಲಿರಲು ಹೋಗುತ್ತಿದ್ದೇನೆ" ಎಂದು ಅವರು ಹೇಳಿದರು.

"ಹಾಗಿದ್ದರೆ ಇದೊಂದು ವಿಶೇಷವೇ ಸರಿ. ಸಂಸಾರದಲ್ಲಿ ತಾವು ನಿರ್ಲಿಪ್ತರಂತೆ ಕಾಣುತ್ತೀರಿ. ಹೆಚ್ಚಿಗೆ ಪ್ರಶ್ನೆ ಮಾಡುತ್ತೇನೆಂದೆನಿಸಿದರೆ ಕ್ಷಮಿಸಿರಿ. ತಮ್ಮ ಹೆಸರೇನು?"

"ಈಗ ಸ್ವಾಮಿದಾಸ ಎಂದು ಹೇಳಿಕೊಳ್ಳುತ್ತೇನೆ ನನ್ನ ಪೂರ್ವಾಶ್ರಮದ ಹೆಸರು ಬೇರೆ. ಅದನ್ನು ಬಿಟ್ಟಿದ್ದೇನೆ." ಎಂದು ಸ್ವಾಮಿದಾಸರು ಹೇಳಿದರು.

ನರಹರಿಯು ಕುತೂಹಲವು ಹೆಚ್ಚಿತು. "ಅಂದರೆ? ಈಗ ಸನ್ಯಾಸಾಶ್ರಮವನ್ನು ಸ್ವೀಕರಿಸಿದ್ದೀರಾ? ಹಾಗೆ ಕಾಣುವುದಿಲ್ಲವಲ್ಲ!" ಎಂದು ಅವನು ಕೇಳಿದ.

"ದೀಕ್ಷೆಯಿಲ್ಲದ ಸನ್ಯಾಸಿ ನಾನು ಈಗ ಇಪ್ಪತ್ತು ವರ್ಷವಾಯಿತು. ಸಂಸಾರದಿಂದ ದೂರವಾಗಿದ್ದೇನೆ. ಯಾರಾದರೂ ತಂದು ಕೊಟ್ಟದ್ದೇ ನನ್ನ ಊಟ. ಊಟಕ್ಕೆ ಕರೆದರೆ ಒಂದು ಹೊತ್ತಿನ ಊಟವನ್ನಲ್ಲದೆ ಹೆಚ್ಚಿನದನ್ನು ನಾನು ಸ್ವೀಕರಿಸುವುದಿಲ್ಲ ಯಾರಾದರೂ ಒಂದು ದಿನ ಹಣ ಕೊಟ್ಟರೆ ಅದನ್ನು ಅವತ್ತೇ ವೆಚ್ಚಮಾಡಿಬಿಡುತ್ತೇನೆ. ಹತ್ತಿರವಿದ್ದರೆ,—ಮತ್ತೆ ಅದರ ಚಿಂತೆ ನೋಡಿರಿ! ಸಾಧ್ಯವಿದ್ದಷ್ಟು ವೇಳೆಯನ್ನು ಧ್ಯಾನದಲ್ಲಿ ಕಳೆಯುತ್ತೇನೆ. ಭಗವಂತನ ಕೃಪೆಯಿಂದ ಹೀಗೆ ಇಪ್ಪತ್ತು ವರ್ಷ ನಡೆದು ಬಂದಿದೆ" ಎಂದು ಶಾಂತವಾಗಿ ಸ್ವಾಮಿದಾಸರು ಹೇಳಿದರು.

"ಅದಕ್ಕೂ ಮೊದಲು ಏನಿದ್ದಿರಿ ತಾವು? ಸಂಸಾರದಿಂದ ಅಲಿಪ್ತರಾಗಿದ್ದು ಹೇಗೆ?" ಎಂದು ನರಹರಿ ಕೇಳಿದ.

"ಕೇಳಬಹುದು. ನಿಮಗೆ ಹೇಳಲು ಏನೂ ಅಡ್ಡಿ ಕಾಣುವದಿಲ್ಲ. ನಾನು ಒಂದು ಕಡೆ ಸ್ಟೇಶನ್‌ಮಾಸ್ತರನಾಗಿದ್ದಾಗ ಒಮ್ಮೆಲೆ ಕಾಯಿಲೆಯಾಗಿ ನನ್ನ ಮಕ್ಕಳು ತೀರಿದವು; ಹೆಂಡತಿಯೂ ತೀರಿದಳು. ನಾನಿನ್ನು ಬೇರೆ ತರಹದ ಜೀವನವನ್ನು ಪ್ರಾರಂಭಿಸಬೇಕೆಂದು ಭಗವಂತನ ಇಚ್ಛೆಯಿದೆಯೆಂದು ನನಗೆನಿಸಿತು. ಅಂದಿನಿಂದ ಹೀಗಿದ್ದೇನೆ."

ನರಹರಿಯು ಕೇಳಿ ಸುಮ್ಮನೆ ದಂಗುಬಡೆದು ಕೂತ. ಜಗತ್ತಿನಲ್ಲಿ ತನ್ನಷ್ಟೇ ಇಲ್ಲವೇ ತನಗಿಂತ ಆಳವಾಗಿ ದುಃಖಪಟ್ಟವರಿದ್ದಾರೆ; ಅಂಥವರೊಬ್ಬರ ಸಹವಾಸವು ಅವನ ದುಃಖಕ್ಕೆ ಔಷಧಿಯಾಗಿ ತೋರಿತು.

"ಇಲ್ಲಿಯೇ ಸಮೀಪದಲ್ಲಿಯೇ ಹೋದದ್ದರಿಂದ ಹೇಳುತ್ತೇನೆ. ನಾವು ಹೇಳಿದ ಘಟನೆ ಜರುಗಿದ್ದು ಮೊಗ್ಗಾವಿಯಲ್ಲಿಯೇ." ಎಂದು ಸ್ವಾಮಿದಾಸರು ಕೆಲವು ನಿಮಿಷ ಬಿಟ್ಟು ಹೇಳಿದರು.

ಅದು ನರಹರಿಯ ಅಂತಃಕರಣವನ್ನು ಇನ್ನಿಷ್ಟಾಗಿ ಭೇದಿಸಿತು.

ಸ್ವಲ್ಪ ವೇಳೆ ಸುಮ್ಮನಿದ್ದು ನರಹರಿ ಇನ್ನೊಂದು ಪ್ರಶ್ನೆ ಮಾಡಿದ: "ನೀವು ದೇವರನ್ನು ಕಂಡಿದ್ದೀರಾ ?"

"ಇಲ್ಲ." ಅಷ್ಟೇ ಸಹಜವಾಗಿ ಸ್ವಾಮಿದಾಸರು ಉತ್ತರ ಕೊಟ್ಟರು.

"ಒಮ್ಮೆಲ್ಲೊಮ್ಮೆ ಕಾಣುವ ಭರವಸೆಯಾದರೂ ಉಂಟೊ ?"

"ಉಂಟು. ಈ ಜನ್ಮದಲ್ಲಿ ಆ ಭಾಗ್ಯವಿಲ್ಲದಿದ್ದರೆ ಇದರ ಮುಂದಿನ ಜನ್ಮದಲ್ಲಿ. ಅದಿಲ್ಲದಿದ್ದರೆ ಅದರ ಮುಂದೆ........"

"ಅಂದರೆ? ಪುನರ್ಜನ್ಮದಲ್ಲಿ ನಿಮಗೆ ವಿಶ್ವಾಸವುಂಟೆ?"

"ಆ ಗೊಂದಲದಲ್ಲಿ ನಾನು ಪ್ರವೇಶಿಸಿಲ್ಲ. ಇನ್ನೊಂದು ಜನ್ಮವಿರದಿದ್ದರೆ ಇದೇ ಜನ್ಮ ಮುಗಿಯುವದರಲ್ಲಿಯೇ ಭಗವಂತನನ್ನು ಕಾಣುತ್ತೇನೆ. ಹಾಗೆ ಕಾಣದೆ ಇದ್ದರೆ,—ಇನ್ನೊಂದು ಜನ್ಮವಿದೆಯೆಂದೇ ನಾನು ಗ್ರಹಿಸುತ್ತೇನೆ. ಇಂಥ ದರ್ಶನವಿರದೆ ಜೀವನಕ್ಕೆ ಪೂರ್ಣತೆಯೆಲ್ಲಿ? ಪೂರ್ಣತೆಯಿರದ ಜೀವನಕ್ಕೆ ಮುಕ್ತಾಯವೆಲ್ಲಿ?" ಎಂದರು ಸ್ವಾಮಿದಾಸರು.

ಕೇಳುತ್ತ ಹೋದಂತೆ ಹೊಸ ಹೊಸ ಮಾತಿನ ಆಳದಲ್ಲಿ ಸಿಕ್ಕುಬೀಳುತ್ತಿದ್ದ ನರಹರಿ ಸ್ವಾಮಿದಾಸರ ಎಳೆತನವೂ ಅನುಭವಲಾಲಸೆಯೂ ಅವನ ಮನಸ್ಸನ್ನು ಹಿಡಿಯಿತು. ಇದೆಲ್ಲ ವಿಷಯವನ್ನು ಅವನು ಆಳವಾಗಿ ಮನಸ್ಸಿನಲ್ಲಿಯೇ ತೂಗಿ ನೋಡಹತ್ತಿದ.

"ಈಗ ನೀವು ಪ್ರಶ್ನೆ ಕೇಳುವದು ಮುಗಿಯಿತೇನು ?" ಎಂದು ಸ್ವಾಮಿದಾಸರು ನಗುತ್ತ ಪ್ರಶ್ನೆ ಮಾಡಿದರು.

"ಮುಗಿದಿದೆ ಸದ್ಯಕ್ಕೆ" ಎಂದು ನರಹರಿಯು ಮುಗುಳುನಗೆ ನಕ್ಕು ಉತ್ತರ ಕೊಟ್ಟ.

"ನಾನು ಒಂದೆರಡು ಪ್ರಶ್ನೆ ಕೇಳಲೆ ?" ಸ್ವಾಮಿದಾಸರೆಂದರು.

"ಆಗಬಹುದು" ನರಹರಿಯೆಂದ.

"ನೀವು ಈಗ ಖಾಸಗಾಂವಿಗೆ ಹೋಗುವದೇಕೆ ?"

"ಸುಮ್ಮನೆ; ನೀವು ಇಪ್ಪತ್ತು ವರ್ಷಗಳ ಹಿಂದೆ ಮೊಗ್ಗಾಗಿ ಬಿಟ್ಟ ಹಾಗೆ. ನನ್ನ ತಂದೆ ತೀರಿಕೊಂಡರು. ಮಲತಾಯಿಗೆ ನೆರವಾಗಲು ಕಲಿಯುವದನ್ನು ಸಹ ಬಿಟ್ಟು ಮನೆಯಲ್ಲಿ ಕೂತೆ. ಆದರೆ ಆಕೆಯ ವಿರೋಧ ವಿಪರೀತಕ್ಕೆ ಇಟ್ಟುಕೊಂಡಿತು. ಈಗ ಮನೆಮಾರು ತ್ಯಜಿಸಿ ಹೊರಟಿದ್ದೇನೆ. ಕಿಸೆಯಲ್ಲಿ ರೊಕ್ಕವಿದ್ದಷ್ಟರ ಮಟ್ಟಿಗೆ ಟಿಕೀಟು ಕೊಂಡೆ. ಅದು ಖಾಸಗಾಂವಿಗೆ ಬಂತು."

"ಮುಂಪೇನು ಮಾಡಬೇಕೆಂದಿರುವಿರಿ?"

"ಏನೋ ಗೊತ್ತಿಲ್ಲ. ದೇವರು ಏನು ಬುದ್ಧಿ ಕೊಡುತ್ತಾನೋ ನೋಡಬೇಕು. ನಾನೂ ಸನ್ಯಾಸಿಯಾಗಲಿರುವೆನೇನೋ—ಯಾರಿಗೆ ಗೊತ್ತು!" ನರಹರಿಯೆಂದ.

ಕ್ಷರುಣಪೂರಿತವಾದ ಮುಗುಳುನಗೆಯೊಂದನ್ನು ಸ್ವಾಮಿದಾಸರು ನಕ್ಕರು. ಆದರೆ ಮಾತನಾಡಲಿಲ್ಲ.

ಇಷ್ಟರಲ್ಲಿ ಬೆಳಗಾಗಿತ್ತು. ಮೆಲ್ಲನೆ ನೆಲಮುಗಿಲಿನಂಚಿನಲ್ಲಿ ಬಣ್ಣದಾಟವನ್ನಾಡಿ ಸೂರ್ಯನು ಮೋರೆಯೆತ್ತುವದರಲ್ಲಿದ್ದ. ಸಣ್ಣಪುಟ್ಟ ನಿಲ್ಮನೆಗಳಲ್ಲಿ ನಿಲ್ಲದೆ ಗಾಡಿಯು ಓಡುತ್ತಲೇ ಇತ್ತು. ನರಹರಿಯು ಕುಳಿತ ಡಬ್ಬಿಯಲ್ಲಿ ಮಲಗಿಕೊಂಡವರು ಒಬ್ಬೊಬ್ಬರಾಗಿ ಎಚ್ಚತ್ತು ಮೈಕೈ ಒಡ್ಡುಮುರಿದರು. ತೊಡೆಯ ಮೇಲೆ ಕೂಸನ್ನು ಮಲಗಿಸಿಕೊಂಡ ತಾಯಿಯು ಮಾತ್ರ ಹಾಗೆಯೇ ಕುಳಿತಿದ್ದಳು. ಇಡಿ ಒಂದು ಬೆಂಚನ್ನು ಆಕ್ರಮಿಸಿದ್ದ ಆಕೆಯ ಪತಿರಾಯ ಎದ್ದು ಕುಳಿತ. ತುಸು ಹೊತ್ತಿಗೆ ಕೂಸಿಗೂ ಎಚ್ಚರವಾಯಿತು. ಕೂಸನ್ನು ಗಂಡನು ಕರೆದುಕೊಂಡಾಗ ಆ ಹೆಣ್ಣುಮಗಳು ಎದ್ದು ಹೋಗಿ ಮೋರೆ ತೊಳೆದುಕೊಂಡು ಬಂದಳು. ಉಳಿದ ಪ್ರಯಾಣಿಕರು ಮೋರೆಯನ್ನೂ ತೊಳೆದಿರಲಿಲ್ಲ. ಅವರು ಚಹ ಸಿಗುವ ನಿಲ್ಮನೆಗಾಗಿ ದಾರಿ ಕಾಯುತ್ತಿದ್ದರು. ಮುಖಮಾರ್ಜನೆಗಿಂತ ಚಹಾರ್ಜನೆಗೆ ಅಗ್ರಸ್ಥಾನವಿದ್ದಿತು.

ಇವನ್ನೆಲ್ಲ ನರಹರಿಯು ನೋಡುತ್ತ ಕುಳಿತಿದ್ದ. ಸ್ವಾಮಿದಾಸರು ಇಷ್ಟರಲ್ಲಿ ಕಣ್ಣು ಮುಚ್ಚಿ ಧ್ಯಾನಮಗ್ನರಾಗಿದ್ದರು; ಆಗೀಗ ಕಿಟಕಿಯೊಳಗಿಂದ ಬೆಳಗನ್ನು ನೋಡುತ್ತಿದ್ದರು ಮಾತ್ರ.

ಹುಬ್ಬಳ್ಳಿ ಧಾರವಾಡಗಳು ಹೋದವು ಗಾಡಿಯು ಲೋಂಡಾದ ಅರಣ್ಯವನ್ನು ಸೇರಿತು. ನರಹರಿಯು ಮತ್ತೆ ವಿಚಾರದಲ್ಲಿ ಮುಳುಗಿದ. ಈ ವಿಶಾಲ

ಮಾದ ಜಗತ್ತಿನಲ್ಲಿ ತಾನು ಮಾಡಬೇಕಾಗಿದ್ದೇನು? ಇಲ್ಲಿ ಸ್ವಾಮಿದಾಸರ ಭೆಟ್ಟಿಯಾದದ್ದು ದೈವಸಂಕಲ್ಪವೋ ಹೇಗೆ? ಇವರ ಜೊತೆಗೆ ತಾನೂ ಇದ್ದು ಬಿಟ್ಟರೆ? ಅನಾಯಾಸವಾಗಿ ಗುರುಗಳೊಬ್ಬರು ದೊರಕಿದರಲ್ಲ! ಗುರುಗಳು! ಇದಕ್ಕೆ ನರಹರಿ ಸಿಡಿದು ಬಿದ್ದ. ಅವನಿಗೆ ಸಂಪ್ರದಾಯಶರಣನಾಗುವ ಇಚ್ಛೆ ಯಿರಲಿಲ್ಲ ದೇವನಿಗೆ ಮಿಾಸಲಿಟ್ಟ ಜೀವವನ್ನು ತನಗೆ ಗೊತ್ತಿರದ—ಆದರೆ ಬರಿ ಆದರವಿದ್ದ—ಒಬ್ಬ ವ್ಯಕ್ತಿಗೆ ಒಪ್ಪಿಸಿಬಿಡುವದೆ? ಕುಸುಮಾನಿಗೆ ಅದನ್ನು ಒಪ್ಪಿಸುವದು ಸಾವಿರ ಪಾಲು ಮೇಲು. ಕುಸುಮಾನಿಗೆ ಒಪ್ಪಿಸಿದರೆ ಅದನ್ನು ದೇವರಿಗೆ ಒಪ್ಪಿಸಿದಂತೆಯೇ ಸರಿ. ಆದರೆ ಈಗೆಲ್ಲಿಯ ಕುಸುಮಾ! ನರಹರಿಯ ದೃಷ್ಟಿಯಲ್ಲಿ ಅವಳು ದೇವರಷ್ಟೆ ದುರ್ಲಭಳಾಗಿದ್ದಳು ಇದನ್ನು ನೆನೆದು ಅವನ ಹೃದಯದಲ್ಲಿ ಸಂಕಟವಾಯಿತು.

ಮತ್ತೆ ಎದುರಿಗಿದ್ದ ಸ್ವಾಮಿದಾಸರನ್ನು ನರಹರಿಯು ನೋಡಿದ. ಅವರು 'ಗುರುತ್ವ' ವನ್ನು ಸ್ಥಾಪಿಸಲು ಬಂದಿರಲಿಲ್ಲವಲ್ಲ! ಮಿತ್ರನಂತೆ ಅವರು ನರಹರಿಯೊಡನೆ ಮಾತನಾಡಿದ್ದರು. ಇವನೇ ಅವರನ್ನು ಕೆದರಿ ಪ್ರಶ್ನೆ ಕೇಳಿದ್ದ. ಅದಕ್ಕೆ ಅವರು ಸ್ವಲ್ಪದರಲ್ಲಿಯೇ ಉತ್ತರ ಕೊಟ್ಟಿದ್ದರು. ಅವನ ವಿಷಯ ವನ್ನೂ ಕೇಳಿಕೊಂಡಿದ್ದರು. ಅವರು ಯಾವ ಸಲಹೆಯನ್ನೂ ಕೊಟ್ಟಿರಲಿಲ್ಲ; ಯಾವ ಸೂಚನೆಯನ್ನೂ ಮಾಡಿರಲಿಲ್ಲ. ಸಂಪ್ರದಾಯದ ಬಗ್ಗೆ ತನಗಿದ್ದ ಸಿಟ್ಟನ್ನು ಪಾಪ, ಇವರ ಮೇಲೆ ಹಾಯಿಸುವದೇಕೆ? ಎಂದುಕೊಂಡ ನರಹರಿ.

ಊಟದ ಹೊತ್ತಾದಾಗ ಲೋಂಡಾ ದಾಟಿ ಗಾಡಿ ಬೆಳಗಾಂವಿಯನ್ನು ಸಮಿಾಪಿಸಿತ್ತು. ನರಹರಿಗೆ ತನ್ನ ಕಿಸೆಯಲ್ಲಿರುವ ರುಪಾಯಿಯನ್ನು ಮುರಿಸುವ ಪ್ರಸಂಗವು ಬರಲಿಲ್ಲ. ಹೊತ್ತು ಏರುವ ವರೆಗೆ ಮುಸುಕು ಹಾಕಿಕೊಂಡು ಮಲ ಗಿದ ಕಾಠೇವಾಡ ಸೇಟರೊಬ್ಬರು ಆಕಳಿಸುತ್ತ ಎದ್ದು ಮುಖಮಾರ್ಜನ— ಚಹಾರ್ಜನವನ್ನು ತೀರಿಸಿಕೊಂಡು ಒಂದರ ಮೇಲೊಂದು ಸಿಗರೇಟು ಸೇದುತ್ತ ಕೂತಿದ್ದರು. ಇವರ ಅಗ್ನಿಸೇವೆಗೆ ಯಾವ 'ಪುರೋಹಿತ' ನೂ ಝುಕ್ಕಿಸಿದ ನೆಂದುಕೊಂಡ, ನರಹರಿ ಊಟದ ಹೊತ್ತಾದಾಗ ಸೇಟರು ತಮ್ಮ ಬೆಂಚಿನ ಬುಡದಿಂದ ಒಂದೊಂದೇ ಫಲಹಾರದ ಡಬ್ಬಿಯನ್ನು ತೆಗೆದು ಅವರ ಹಿಡಿಕೆ ಯನ್ನು ಸರಿಸಿದರು. ಸರಿಸಿ ಕೈಯಲ್ಲಿ ಹಿಡಿದುಕೊಂಡು ಸ್ವಾಮಿದಾಸರೆಡೆಗೆ ಹೋಗಿ "ಸ್ವಾಮಿಜಿ, ಇದರಲ್ಲಿಯ ಅಲ್ಪ ಆಹಾರವನ್ನು ತೆಗೆದುಕೊಂಡು

ನನ್ನನ್ನು ಕೃತಾರ್ಥನನ್ನಾಗಿ ಮಾಡಿರಿ" ಎಂದರು. ಸ್ವಾಮಿದಾಸರು ಭಗವಂತನ ನಾಮವನ್ನು ಉಚ್ಚರಿಸುತ್ತ ತಮಗೆ ಬೇಕಾದುದನ್ನು ಸ್ವೀಕರಿಸಿದರು. ಆ ಮೇಲೆ ಅದೇ ಬಿನ್ನಹವು ನರಹರಿಗೆ ಬಂತು. ಸೇಟರ ಮೋರೆಯ ಮೇಲಿನ ನಿರ್ವ್ಯಾಜತೆಯನ್ನು ನೋಡಿದರೆ ಇವರ ಬಿನ್ನಹವನ್ನು ಮನ್ನಿಸದಿರುವುದೇ ಅಪರಾಧವೆಂದೆನಿಸುವಹಾಗಿತ್ತು. ನರಹರಿಯೂ ಸ್ವೀಕರಿಸಿದನು. ಆಮೇಲೆ ಅದೇ ರೀತಿ ಬಿನ್ನವಿಸುತ್ತ ಸೇಟರು ಡಬ್ಬಿಯ ತುಂಬೆಲ್ಲ ತಿರುಗಾಡಿದರು. ಕೆಲವರು 'ಮಡಿವಂತಿಕೆ' ಯ ಮೂಲಕ ಅದನ್ನು ಸ್ವೀಕರಿಸಲಿಲ್ಲ. ಇನ್ನು ಕೆಲವರು ಶ್ರೀಮಂತಿಕೆಯ ಮೂಲಕ 'ನಾವೂ ತಂದಿದ್ದೇವೆ' ಎಂದು ಹೇಳಿ ತಮ್ಮ ಫಲಾಹಾರದ ಡಬ್ಬಿಯನ್ನು ತೋರಿಸಿದರು. ಅಂತೂ ಎಲ್ಲರಿಗೂ ಅರ್ಪಿಸಿ ತಾನೂ ಸ್ವಲ್ಪ ತೆಗೆದುಕೊಂಡ ಸೇಟರು ಮತ್ತೆ ತಮ್ಮ ಸ್ಥಳದಲ್ಲಿ ಕುಳಿತು ಸಿಗರೇಟಿನ ಸರಪಣಿಯನ್ನೇ ಸೇದಿ ಬೂದಿ–ಹೊಗೆಯಾಗಿಸುವದರಲ್ಲಿ ಮಗ್ನರಾದರು. ಯೋಗ್ಯ ಮನಃಸ್ಥಿತಿಯಲ್ಲಿದ್ದರೆ ನರಹರಿಯು ಸೇಟರೊಡನೆ ಸಂಭಾಷಣೆಯನ್ನು ಬೆಳಿಸುತ್ತಿದ್ದ. ಆದರೆ ಈಗ ಆ ಕೆಲಸವನ್ನು ಗಾಡಿಯಲ್ಲಿಯ ಉಳಿದ ಪ್ರಯಾಣಿಕರು 'ಪತ್ಕರಿಸಿ' ದ್ದರು.

ಹಣ್ಣು ಹಂಪಲವನ್ನೂ ಉಂಡೆಕರ್ಜಿಕಾಯಿಗಳನ್ನೂ ತಿಂದು ನರಹರಿಗೆ ಹೊಟ್ಟೆ ತುಂಬಿತು ಉಟ್ಟ ಧೋತರದಿಂದೆದ್ದು ಮನೆ ಬಿಟ್ಟು ಹೊರಬಿದ್ದಿದ್ದರೂ ದೇವರ ಕರುಣೆಯಿದ್ದರೆ ಏನೂ ಕಡಿಮೆಯಾಗದೆಂದು ನರಹರಿಯೆಂದುಕೊಂಡ. ಇನ್ನು ಮುಂದೇನು? ಸ್ವಾಮಿದಾಸರ ಜೊತೆಗೆ ಹೋಗಬೇಕೆ? ಇದು ನರಹರಿಯ ಅಭಿಮಾನಕ್ಕೆ ಒಪ್ಪದಾಯಿತು ಸ್ವತಂತ್ರವಾಗಿ ತನ್ನ ಜೀವಿತದ ಬೆಳಕನ್ನು ತಾನು ಕಾಣಲು ನರಹರಿಯು ಹಾತೊರೆದ. ಈಗ ಖಾಸಗಾಂವಿಯ ತಿಕೀಟದೆಯಲ್ಲ? ಅಲ್ಲಿ ಹೋಗಿ ಇಳಿದ ಮೇಲೆ ಮುಂದೆ ನೋಡೋಣವೆಂದ ನರಹರಿ. ಈ ವಿಚಾರದಲ್ಲಿಯೇ ಅವನು ಗೋಕಾಂವಿಯ ಘಟಪ್ರಭೆಯನ್ನು ದಾಟಿದ; ಕುಡಚಿಯ ಕೃಷ್ಣೆಯ ಸೇತುವೆಯ ಮೇಲಿಂದ ಹಾಯ್ದ. ಮುಂದೆ ಒಂದೆರಡು ತಾಸಿನಲ್ಲಿಯೇ ಸ್ವಾಮಿದಾಸರು ಇಳಿಯಬೇಕಾದ ನಿಲ್ದಾಣೆ ಬಂತು. ಆಗ ಅವರೆದ್ದು ನರಹರಿಯನ್ನೂ ಸೇಟರನ್ನೂ ಬೀಳ್ಕೊಂಡು "ನೀವು ಏನು ನಿಶ್ಚಯಿಸಿದಿರಿ?" ಎಂದು ಮಂದಸ್ಮಿತರಾಗಿ ನರಹರಿಯನ್ನು ಕೇಳಿದರು.

"ನಾನು ಖಾಸಗಾಂವಿಗೆ ಇಳಿಯುತ್ತೇನೆ." ಎಂದ ನರಹರಿ.

"ಒಳ್ಳೇದು. ಆದರೆ ಅವಶ್ಯ ಬಿದ್ದಾಗ ನಾನಿರುವೆಡೆಗೆ ಬರಲು ಮರೆಯ ಬೇಡಿರಿ. ಖಾಸಗಾಂವಿ ನಿಲ್ದಾಣೆಯಿಂದ ಏಳೆಂಟು ಮೈಲಾಗಬಹುದು ಅಷ್ಟೆ. ಕೃಷ್ಣೆಯ ದಂಡೆಗುಂಟ ನಡೆದು 'ಬ್ರಹ್ಮಗಿರಿ' ಎಂದು ಕೇಳಿದರೆ ಯಾರೂ ಹೇಳುತ್ತಾರೆ ಅಲ್ಲೊಂದು ಈಶ್ವರ ದೇವಾಲಯವಿದೆ." ಎಂದು ಹೇಳಿದರು ಸ್ವಾಮಿದಾಸರು.

"ಆಗಬಹುದು. ಬಹಳ ಉಪಕಾರವಾಯಿತು" ಎಂದು ನರಹರಿಯು ಅವರಿಗೆ ಕೈ ಮುಗಿದ ಸ್ವಾಮಿದಾಸರನ್ನು ನಿಲ್ದಾಣೆಯಲ್ಲಿ ಬಿಟ್ಟು ಗಾಡಿ ಮುಂದೆ ನಡೆಯಿತು.

ಖಾಸಗಾಂವಿಯು ನಿಲ್ದಾಣೆ ಬಂದಾಗ ಸಂಜೆಯಾಗುತ್ತ ಬಂದಿತ್ತು. ನರಹರಿಯು ತನ್ನ 'ಬ್ಯಾಗು' ತೆಗೆದುಕೊಂಡು ಕೆಳಗಿಳಿದ. ತಿಕೀಟು ಕೊಟ್ಟು ಹೊರಗೆ ಬಂದೊಡನೆ "ಟಾಂಗಾ, ರಾವಸಾಬ್!" ಎಂದು ಒದರುತ್ತ ಟಾಂಗಾವಾಲರ ಒಂದು ತಂಡವೇ ಅವನ ಬೆನ್ನುಹತ್ತಿತು. ತಲೆಯಲ್ಲಾಡಿಸಿ ನರಹರಿಯು ಬ್ಯಾಗನ್ನು ಕೈಯಲ್ಲಿ ಹಿಡಿದುಕೊಂಡು ನಡೆದ. ನಿರಾಶೆಯಿಂದ ಆ ತಂಡವು ತಿರುಗಿ ಬೇರೆ ಗಿರಾಕಿಗಳ ಬೆನ್ನು ಹತ್ತಿತು. ನರಹರಿಯು ಕೆಲವು ಹೆಜ್ಜೆ ಮುಂದೆ ನಡೆದು ಒಂದು ಗಂಟನ್ನು ಹೊತ್ತುಕೊಂಡು ಹೋಗುತ್ತಿದ್ದ ಹಳ್ಳಿಯವನನ್ನು ಕೂಡಿಕೊಂಡ. ಅವನಿಗೆ ನರಹರಿ ಕೇಳಿದ: "ಇಲ್ಲಿ ಹತ್ತಿರ ದೇವಾಲಯವಿದೆಯೆ?"

"ಎರಡು ಮೂರು ಮೈಲಿನಾಚೆ ಕೃಷ್ಣೆಯ ದಂಡೆಯ ಮೇಲೆ ದತ್ತಾತ್ರಯ ದೇವಾಲಯವಿದೆ" ಎಂದ ಹಳ್ಳಿಗ. "ಅದು ಖಾಸಗಾಂವಿಯಿಂದ ಎಷ್ಟು ದೂರ?" ನರಹರಿ ಕೇಳಿದ.

"ಆಗಬಹುದು ನಾಲ್ಕೈದು ಮೈಲು" ಎಂದು ಉತ್ತರ ಬಂತು. ನರಹರಿಯು ಆ ದೇವಾಲಯದ ಹಾದಿಯನ್ನು ಕೇಳಿಕೊಂಡು ತನ್ನ ಕೃತಜ್ಞತೆಯನ್ನು ಸೂಚಿಸಿ ಮುಂದೆ ನಡೆದ ಆ ದೇವಾಲಯಕ್ಕೇ ಹೋಗಿ ತನ್ನ ಭವಿತವ್ಯವನ್ನು ಕಂಡುಕೊಳ್ಳುವ ನಿರ್ಧಾರಕ್ಕೆ ಅವನು ಬಂದಿದ್ದ.

---

## ಪ್ರಕರಣ ೪೯

# ನರಹರಿಯ ಯೋಗಪ್ರಯೋಗ

ನರಹರಿಯು ದೇವಾಲಯವನ್ನು ಮುಟ್ಟಿದಾಗ ಸಂಜೆಯಾಗಿಹೋಗಿತ್ತು. ಸುತ್ತಲೆಲ್ಲ ಕತ್ತಲೆಯು ಪಸರಿಸಿತ್ತು. ಆದರೆ ಜೀವನಯಾತ್ರೆಯನ್ನೇ ಮುಗಿಸಲು ಹೊರಟು ದೈವೀ ಪ್ರೇರಣೆಯಿಂದ ಅದನ್ನು ಮುಂದುವರಿಸಿದ ನರಹರಿಗೆ ಭೀತಿಯೆಲ್ಲಿ? ಆ ಕತ್ತಲೆಗೆ ಆವನು ಕದಲಲಿಲ್ಲ.

ಮೇಲಾಗಿ ದೇವಾಲಯವನ್ನು ಪ್ರವೇಶಿಸಿದಾಗ,—ಅಲ್ಲಿಯೂ ಗರ್ಭಗುಡಿಯಲ್ಲಿ ದೀಪವೊಂದು ಹೊತ್ತಿತ್ತು. ಹದಿನಾರು-ಹದಿನೆಂಟು ವರ್ಷದ ವೈದಿಕ ಹುಡುಗನೊಬ್ಬ ಗರ್ಭಗುಡಿಯಲ್ಲಿ ದೀಪ ಹಚ್ಚಿ ಅದಕ್ಕೆ ಬೀಗಹಾಕಿ ಇನ್ನು ಊರೆಡೆಗೆ ಹೊರಡುವದರಲ್ಲಿದ್ದ. ನರಹರಿಯು ಕಟ್ಟೆಯ ಮೇಲೆ ಬ್ಯಾಗ್ ಇರಿಸಿ ಉಸ್ಸೆಂದು ಕೂಡುವದಕ್ಕೂ ಆ ಹುಡುಗ ದೀಪ ಹಚ್ಚಿ ಹೊರಗೆ ಬರುವದಕ್ಕೂ ಗಂಟೇ ಬಿದ್ದಿತು.

ಆ ಹುಡುಗನಿಗೆ ನರಹರಿಯು ಹೆದರುವದಕ್ಕಿಂತ ನರಹರಿಗೆ ಆ ಹುಡುಗನು ಹೆದರಿದ: "ನೀವು ಯಾರು?" ಎಂದು ಅಧೈರ್ಯದಿಂದ ಕೇಳಿದ.

"ನಾನೊಬ್ಬ ಬಡ ಮನುಷ್ಯ. ಕೆಲವು ದಿನಗಳನ್ನು ಈ ಗುಡಿಯಲ್ಲಿ ಕಳೆಯಬೇಕೆಂದಿದ್ದೇನೆ" ಎಂದು ಹೇಳಿದ ನರಹರಿ. ಇಲ್ಲಿ ಬಂದೊಡನೆ ಪ್ರಶ್ನೆಗೆ ಸುರುವಾಯಿತಲ್ಲ!

"ಇದು ಪಂಡಿತ ದೇಶಮುಖರ ಗುಡಿ. ಪರವಾನಿಗೆಯಿಲ್ಲದೆ ಇಲ್ಲಿ ಇರಲಾಗುವದಿಲ್ಲ" ಎಂದು ಆ ಹುಡುಗ ಹೇಳಿದ. ಅಭ್ಯಾಸವಾಗಿಲ್ಲ—ಪರೀಕ್ಷೆಯಲ್ಲಿ ನಪಾಸಾಗುವ ವಿದ್ಯಾರ್ಥಿ—ಆತ್ಮಹತ್ಯೆ—ಹೀಗೆ ಏನೇನೋ ಕಲ್ಪನೆಗಳು ಅವನ ಮನಸ್ಸಿನೆದುರು ಹಾಯ್ದುಹೋದವು

"ಪರವಾನಿಗೆಯ ವಿಷಯ ಮುಂದೆ. ಇಂದು ರಾತ್ರಿಯಂತೂ ಇಲ್ಲಿ ಇರುವದು ನಿಶ್ಚಯ" ಎಂದು ನರಹರಿ ಹೇಳಿದ.

ಇದಕ್ಕೆ ನಿರುತ್ತರನಾಗಿ ಎಣ್ಣೆಯ ಪಾತ್ರೆಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಹುಡುಗನು ಊರ ಕಡೆ ನಡೆದ.

ನರಹರಿಯು ಎದ್ದು ದೇವರೆದುರು ಸಾಷ್ಟಾಂಗ ಹಾಕಿ ಬ್ಯಾಗನ್ನು ಒಂದು ಮೂಲೆಯಲ್ಲಿಟ್ಟು ಕಟ್ಟೆಯ ಮೇಲೆ ಕುಳಿತುಕೊಂಡ. 'ಸಂಜೆಯ ಊಟ?' ಎಂಬ ವಿಚಾರವು ಅವನ ತಲೆಯಲ್ಲಿ ಸುಳಿದುಹೋಯಿತು. ಊಟವಿಲ್ಲ, ಈ ರಾತ್ರಿ ನಿರಾಹಾರವೆಂದ.

ಒಂದು ಗುಡಿಯಲ್ಲಿ ಮಲಗಲು ಎಷ್ಟು ನಿರ್ಬಂಧ! ಇಂದಿನ ಜಗತ್ತಿನಲ್ಲಿ ಭಕ್ತಿಗೂ ಧ್ಯಾನಕ್ಕೂ ಸರಳಜೀವನಕ್ಕೂ ಸ್ಥಾನವೇ ಇಲ್ಲ! ಉಂಡುಟ್ಟು ಪಶುಗಳಂತೆ ದಿನ ಕಳೆಯಬೇಕು; ಇಲ್ಲವೆ ಸಿದ್ಧಾಂತಗಳ ಹೆಸರಿನಲ್ಲಿ ಸ್ವಾರ್ಥಕ್ಕಾಗಿ ಹೋರಾಡಬೇಕು; ಪಶುಗಳು ಒಂದನ್ನೊಂದು ಹರಿದು ತಿನ್ನುವಂತೆ ಒಂದು ಜನಾಂಗವು ಇನ್ನೊಂದು ಜನಾಂಗವನ್ನು ಹರಿದು ತಿನ್ನಬೇಕು! ನಡೆದಿರುವ ಮಹಾ ಯುದ್ಧದ ಸಾರವೇನು? ಇದೇ ಅಲ್ಲವೆ? ಅಂತೇ ನಮ್ಮ ತಪಸ್ವಿಗಳು ಹಿಮಾಲಯದ ಗವಿಗಳನ್ನು ಸೇರಿದ್ದಾರೆ. ಅವರಿಗೆ ಸಮಾಜದಲ್ಲಿ ಸ್ಥಾನವೇ ಇಲ್ಲ! ಪಟ್ಟಣಗಳ ಹತ್ತಿರವಿದ್ದ ತಪೋವನಗಳೆಲ್ಲ ಕ್ರೀಡಾವನಗಳಾಗತೊಡಗಿವೆ. ಮನುಷ್ಯನ ವೃತ್ತಿಯೇ ಪಲ್ಲಟಗೊಂಡಿದೆ. ಹಿಂದಕ್ಕೆ ಪಟ್ಟಣಗಳ ಸಮೀಪದಲ್ಲಿದ್ದುಕೊಂಡೇ ಋಷಿಗಳು ತಮ್ಮ ತಪಸ್ಸನ್ನು ಸಾಗಿಸಬಹುದಾಗಿತ್ತು. ಎಲೆಮನೆಯಲ್ಲಿ ಓರ್ವ ಗೃಹಿಣಿಯೊಡನೆ ಸಂಸಾರವನ್ನು ನಡಿಸಿಯೂ ನಿರ್ಲಿಪ್ತರಾಗಬಹುದಾಗಿತ್ತು. ಈಗಿನ ಬದಲು ಆ ಕಾಲದಲ್ಲಿಯೇ ಹುಟ್ಟಿ ತಾನೂ ಒಬ್ಬ ತಪಸ್ವಿಯಾಗಿದ್ದರೆ? ಕುಸುಮಾನನ್ನು ತನ್ನ ಸಹಧರ್ಮಿಣಿಯಾಗಿ ಮಾಡಿ ವಸಿಷ್ಠ–ಅರುಂಧತಿಯರಂತೆ ಬಾಳಿದ್ದರೆ? ಕುಸುಮಾ! ಎಂದು ವಿಚಾರಿಸಿದೊಡನೆ ವಸ್ತುಸ್ಥಿತಿಯು ಮತ್ತೆ ಅವನ ನಿದರ್ಶನಕ್ಕೆ ಬಂದಿತು. ಯಾವ ಧ್ಯಾನದ ದಾರಿಯೂ ಮತ್ತೆ ಅವನನ್ನು ಕುಸುಮಾನೆದುರಿಗೇ ಒಯ್ದು ನಿಲ್ಲಿಸುತ್ತಿತ್ತು. ಇನ್ನು ಕುಸುಮಾನನ್ನು ಮರೆತು ಹೊಸ ಜೀವನವನ್ನು ಪ್ರಾರಂಭಿಸಬೇಕೆಂದ ನರಹರಿ.

ಹೊಸ ಜೀವನವೆಂದರೇನು? ಅದು ಹೀಗೆ: ತಾನೊಬ್ಬ ಮಾನವ, ಜನನ-ಮರಣಗಳ ನಡುವಿನ ದಾರಿಯನ್ನು ತುಳಿಯುವ ಪಾಂಥಸ್ಥ. ತನ್ನ ಮನಸ್ಸಿಗೆ ಶಾಂತಿಯಿಲ್ಲವೇಕೆ? ತನಗಾದ—ತನ್ನ ಅಕ್ಕನಿಗಾದ—ಜಗತ್ತಿನಲ್ಲಿ ಅನೇಕರಿಗೆ ದಿನಾಲು ಆಗುತ್ತಿರುವ–ಅನ್ಯಾಯಗಳನ್ನು ನೆನೆದು,–ಜಗತ್ತಿನಲ್ಲಿ ಪುಣ್ಯಕ್ಕೆ ಬೆಲೆಯಿಲ್ಲ; ಪಾಪಕ್ಕೆ ಮಿತಿಯಿಲ್ಲ. ಇದು ಹೇಗೆ? ಇದರ

ರಹಸ್ಯವನ್ನು ತಿಳಿಯಬೇಕು ಮನಸ್ಸು ಸುಖಕ್ಕೆರಳುವದು ; ದುಃಖಕ್ಕೆ ನರಳುವದು. ಈ ಸುಖದುಃಖಗಳನ್ನು ಮೀರಿದ ಆನಂದವೊಂದಿದೆಯೆಂದು ಹೇಳುತ್ತಾರೆ. ಅದನ್ನು ಪಡೆಯಬೇಕು. ಅದೇ ಅಮೃತ ಅದನ್ನು ಪಡೆದ ಮೇಲೆ ಜೀವನಕ್ಕೆ ಕೊರತೆಯೆಲ್ಲಿ ?

ಆದರೆ ಈ ಜ್ಞಾನ-ಆನಂದಗಳನ್ನು ಪಡೆಯುವದು ಹೇಗೆ? ಧ್ಯಾನದಿಂದ. ಮನಸ್ಸಿನ ಸಮುದ್ರದಲ್ಲಿ ಮುಗ್ಗಿ ಒಳಗಿಂದ ಈ ಮುತ್ತುಗಳನ್ನು ತರಬೇಕು. ಧ್ಯಾನವಿಲ್ಲದಿದ್ದರೆ ಮನುಷ್ಯನ ಜೀವನವು ಬರಿ ಯಾಂತ್ರಿಕವಾಗುವದು. ಈ ಜ್ಞಾನ-ಆನಂದಗಳ ನೆಲೆ ಹತ್ತುವ ತನಕ ಜೀವನವನ್ನು ಧ್ಯಾನದಲ್ಲಿಯೇ ಸವೆಸಬೇಕೆಂದು ನರಹರಿಯು ಸಂಕಲ್ಪಿಸಿದ. ಇದಕ್ಕಾಗಿ ನಸುಕಿನಲ್ಲಿಯೇ ಅನುಷ್ಠಾನವನ್ನು ಪ್ರಾರಂಭಿಸಬೇಕೆಂದ.

ಇವೇ ಮೊದಲಾದ ವಿಚಾರಗಳಲ್ಲಿ ನರಹರಿಯು ನಿದ್ದೆ ಹೋದ ತಾನೇ ಚಿಟ್ಟನೆ ಚೀರಿದಾಗ ಅವನಿಗೆ ಎಚ್ಚರಾಯಿತು. ಚೀರಿದ್ದು ಒಂದು ಕನಸಿನ ಕಾರಣದಿಂದ ಅವನಿಗೊಂದು ಕನಸು ಬಿದ್ದಿತ್ತು. ಎಲ್ಲೆಡೆಗೆ ಬೆಳುದಿಂಗಳು. ದತ್ತಾತ್ರಯನ ದೇವಾಲಯದ ಸುತ್ತಣ ಹೊಲಗಳೆಲ್ಲ ಆ ಜೊನ್ನದ ಹೊನ್ನ ಹಬ್ಬದಲ್ಲಿ ಕುಲುಕುಲು ನಗುತ್ತಿದ್ದವು. ಗುಡಿಯೆದುರು ನಿಂತ ಭಕ್ತರ ಗುಂಪೊಂದು ಭಜನೆಯಲ್ಲಿ ಮಗ್ನವಾಗಿತ್ತು. ಒಬ್ಬರು ಏಕತಾರೆಯನ್ನು ಹಿಡಿದಿದ್ದರು. ಇನ್ನೊಬ್ಬರು ತಾಳ ಹಾಕುತ್ತಿದ್ದರು. ಮತ್ತೊಬ್ಬರು ಶಂಖವನ್ನು ಊದುತ್ತಿದ್ದರು. ಮುಗುದೊಬ್ಬರು ವೀಣಾಪಾಣಿಗಳಾಗಿದ್ದರು. ಇವರೆಲ್ಲರ ಕಂಠದಿಂದ ಹೊರಟ ಭಕ್ತಿಸ್ವರಕ್ಕೆ ಸುತ್ತಣ ಭೂಮ್ಯಾಕಾಶಗಳು ತುಂಬಿ ಹೋಗಿದ್ದವು.

ನರಹರಿಯೂ ಇವರಲ್ಲೊಬ್ಬನಾಗಿ ಸೇರಿದ್ದ. ಆ ದಿವ್ಯ ಮೇಳಕ್ಕೆ ತನ್ನ ದನಿಯನ್ನೂ ಕೂಡಿಸಿದ್ದ. ಭಕ್ತಿಭಾವದಿಂದ ದೇಗುಲವನ್ನು ದಿಟ್ಟಿಸುತ್ತಿರಲು ಚಕ್ಕನೆ ಬೆಳಕಿನ ಚಕ್ರವೊಂದು ಗುಡಿಯ ಕಳಸದ ಮೇಲೆ ಉದ್ಭವಿಸಿ ಗರಗರ ತಿರುಗಹತ್ತಿತು. ಅದರ ನಡುವೆ ದತ್ತಾತ್ರಯನ ಮೂರ್ತಿಯು ಕಂಗೊಳಿಸಿತು. ಆ ಮೂರ್ತಿಯ ಮಧ್ಯಮುಖವು ಶ್ರೀಕೃಷ್ಣನದಾಗಿತ್ತು. ಅದರ ಸೌಂದರ್ಯಕ್ಕೆ ಮೋಹಿಸಿ ಭಕ್ತಿಪರವಶನಾಗಿ ನರಹರಿಯು ಆ ತೇಜೋಮೂರ್ತಿಯನ್ನು ನೋಡಹತ್ತಿದ. ನೋಡುತ್ತ ನಿಂತ ಹಾಗೆ ಗುಡಿಯ

ಹಾಗು ಅವನ ನಡುವೆ ಭೂತವೊಂದು ಹೇಗೋ ಎಲ್ಲಿಂದಲೋ ಆಕಾರ ತಳೆದು ನರಹರಿಯೆಡೆಗೆ ಅಡಿಯಿಕ್ಕಿತು. ಅದರ ಗತಿಯನ್ನು ನಿರೀಕ್ಷಿಸುವದರಲ್ಲಿ ಅವನಿಗೆ ದತ್ತಮೂರ್ತಿಯನ್ನು ದಿಟ್ಟಿಸುವದು ಸಾಧ್ಯವಾಗದಾಯಿತು. ಭೂತವು ತೀರ ಸಮೀಪ ಬಂದಾಗ ನರಹರಿಯು ಅಧೀರನಾದ ಏನು ಮಾಡುತ್ತೇನೆಂಬುದರ ಅರಿವಿಲ್ಲದೆ ಚೀರಿದ. ಅವನಿಗೆ ಎಚ್ಚರವಾಗಿದ್ದು ಹೀಗೆ

ನರಹರಿಯು ಕಟ್ಟೆಯ ಮೇಲೆ ಎದ್ದು ಕೂತು ಧೇನಿಸಿದ. ಚುಮು ಚುಮು ನಸುಕಾಗಿತ್ತು. ತಾನು ಮಲಗುವ ಹೊತ್ತಿನಲ್ಲಿ ಕೇಳಿದ ಗೂಗೆಯ ಅಳುದನಿಯ ಬದಲು ಎಲ್ಲ ಹಕ್ಕಿಗಳ ಚಿಲಿಪಿಲಿಗೆ ಮೊದಲಾಗಿತ್ತು. “ದೇವಾ! ಎಲ್ಲ ಹಿಂಸೆಯಿಂದ ಎಲ್ಲ ಅಶುಭದಿಂದ ನೀನೇ ಕಾಪಾಡು!” ಎಂಬ ಕನಸನ್ನು ಮನಸ್ಸಿನಲ್ಲಿಯೇ ಅರ್ಧಮರ್ದ ತೂಗಿದ ನರಹರಿಯೆಂದುಕೊಂಡ ತನ್ನ ಅನುಷ್ಠಾನಕ್ಕೆ ಹೊತ್ತಾಯಿತೆಂದವನೆ ಹೊದ್ದುಕೊಂಡ ಧೋತರವನ್ನು ಕೈಯಲ್ಲಿ ಹಿಡಿದುಕೊಂಡು ಸ್ನಾನ ಮಾಡಲೆಂದು ನದಿಗೆ ನಡೆದ ಅಲ್ಲಿಯ ದೃಶ್ಯವು ನಿಜವಾಗಿ ರಮಣೀಯವಾಗಿತ್ತು ಮಳಲಿನ ಬಯಲಿನ ಮಧ್ಯೆ ಸಣ್ಣದೊಂದು ಪಾತ್ರವನ್ನು ರಚಿಸಿಕೊಂಡು ಕೃಷ್ಣೆಯು ತನ್ನ ಸಲಿಲಸೌಂದರ್ಯದಲ್ಲಿಯೇ ಲೀನಳಾಗಿ ಮುಂದೆ ಸಾಗಿದ್ದಳು. ಎರಡೂ ದಂಡೆಗಳ ಮೇಲೆ ಹೊಲಗಳ ಪಟ್ಟೆಗಳ ನಡುವೆ ಒಂದೆರಡು ತೋಟಗಳು ಕಾಣಿಸಿಕೊಳ್ಳುತ್ತಿದ್ದವು ಅನೇಕ ಜೀವನಗಳನ್ನು ಪಾವನವಾಗಿಸಿದ ಕೃಷ್ಣೆ ತನ್ನನ್ನೂ ನೋಡಿಕೊಳ್ಳದೆ ಇರಳು. ಎಂಬ ಭಾವನೆಯು ಮನವನ್ನು ಕಂಪಿಸುತ್ತಿರಲು ನರಹರಿಯು ಕೃಷ್ಣೆಯಲ್ಲಿ ಸ್ವಚ್ಛಂದವಾಗಿ ಈಸಿ ತನ್ನದೊಂದು ಧೋತರವನ್ನು ಒಗೆದುಕೊಂಡು ತುಸು ದೂರ ಹೋಗಿ ಒಂದು ದೊಡ್ಡ ಮರದ ಮೇಲೆ ಧೋತರವನ್ನು ಒಣ ಹಾಕಿ ಸೂರ್ಯನನ್ನೆದುರಿಸಿ ಆ ಮರದ ನೆಳಲಿನಲ್ಲಿಯೇ ಕೂತ. ಕೂತು ಅದೇ ಮೇಲಕ್ಕೆ ಬರುತ್ತಿರುವ ಸೂರ್ಯಮಂಡಲವನ್ನು ದಿಟ್ಟಿಸಹತ್ತಿದ.

ನರಹರಿಯ ಮನಸ್ಸು ನೂರುಕಡೆ ಹೊಯ್ದಾಡಹತ್ತಿತು. ಏಕಚಿತ್ತನಾಗಲು ಬೇಕಾದುದೇನು? ಕ್ರತುಶಕ್ತಿಯ ಪ್ರಭಾವ. ಆ ಕ್ರತುಶಕ್ತಿಯು ತನ್ನಲ್ಲಿ ಎಷ್ಟರ ಮಟ್ಟಿಗಿದೆಯೆಂಬುದನ್ನು ನರಹರಿಯು ಮೊದಲು ಪರೀಕ್ಷಿಸಬೇಕೆಂದ. ಅವನು ಕುಳಿತಲ್ಲಿಂದ ಸುಮಾರು ಅರ್ಧ ಫರ್ಲಾಂಗು ದೂರದಲ್ಲಿ ಆಕಳವೊಂದು ಎಳೆಬಿಸಿಲಿನಲ್ಲಿ ಮೇಯುತ್ತಿತ್ತು. ನನ್ನಲ್ಲಿ ಕ್ರತುಶಕ್ತಿಯು ಇದ್ದದ್ದೇ

ಆದರೆ—ನಾನು ಅದನ್ನು ಉಪಯೋಗಿಸಿದ್ದೇ ಆದರೆ—ಈ ಗೋವು ಬಂದು ನನ್ನನ್ನು ಮುಟ್ಟಿ ಹೋಗಬಾರದೇಕೆ? ಇದೊಂದು ಒಳ್ಳೆಯ ಪರೀಕ್ಷೆಯೆನಿಸಿತು ನರಹರಿಗೆ. ಅದರ ಮೇಲೆ ಅವನು ತನ್ನ ಮನಸ್ಸಿನಲ್ಲಿಯ ಎಲ್ಲ ಶಕ್ತಿಗಳನ್ನೂ ಕೇಂದ್ರೀಕರಿಸಿದ. ಕೆಲವು ನಿಮಿಷ ಹೀಗೆಯೇ ನಡೆಯಿತು. ಮುಂದೊಮ್ಮೆ—ಮೇಯುವಾಗ ಸಹಜ ಮೇಲೆ ನೋಡುವಂತೆ—ಆ ಗೋವು ಕತ್ತೆತ್ತಿ ನರಹರಿಯನ್ನು ನೋಡಿತು. ಆಗ ಮೈಯೆಲ್ಲ ರೋಮಾಂಚವೆದ್ದಂತಾಗಲು, ಇದು ನನ್ನ ಆಹ್ವಾನಕ್ಕೆ ಬಹುಶಃ ಉತ್ತರವಿರಬಹುದು! ಎಂದುಕೊಂಡ ನರಹರಿ. ಹಾಗೆಯೇ ತನ್ನ ಕ್ರತುವಿನ ಸಾಮರ್ಥ್ಯವನ್ನೆಲ್ಲ ಅದರ ಮೇಲೆ ಆರೋಪಿಸಿದ. ಕ್ರಮೇಣ ಆ ಗೋವು ನರಹರಿಯನ್ನು ಒಂದೇ ಸಮನೆ ದೃಷ್ಟಿಸಹತ್ತಿತು. ದೃಷ್ಟಿಸಿ ಒಂದೊಂದೇ ಹೆಜ್ಜೆಯನ್ನು ನರಹರಿಯೆಡೆಗೆ ಇಡಹತ್ತಿತು. ತನ್ನ ಶ್ರದ್ಧೆ-ವಿಶ್ವಾಸ-ಶಕ್ತಿಗಳ ಪರೀಕ್ಷಾಸಮಯವಿದೆಂದು ತಿಳಿದಿದ್ದ ನರಹರಿಯು ತನ್ನ ಏಕಾಗ್ರತೆಯನ್ನು ಇನ್ನಿಷ್ಟು ಉತ್ಕಟವಾಗಿಸಲು ಹವಣಿಸಿದನು. ಮೆಲ್ಲನೆ ಅವನ ಕಡೆಗೇ ಬರುತ್ತಿದ್ದ ಗೋವು ತೀರ ಹತ್ತಿರ ಬಂದು ಅವನ ಧ್ಯಾನದ ಫಲವೇನೋ ಎಂಬಂತೆ ನರಹರಿಯ ಪಾದಗಳನ್ನು ಮೂಸಿ ನೋಡಿ ಹೋಯಿತು.

ಈಗ ನರಹರಿಯು ಜಯಶೀಲನಾದ! ಅವನಿಗೆ ಮಿತಿಮೀರಿ ಆನಂದವಾಯಿತು. ಇದೇ ರೀತಿಯಾಗಿ ಪರಮಾತ್ಮನನ್ನು ನೆನೆಸಿ ಏಕಾಗ್ರಚಿತ್ತನಾದರೆ ತನಗೆ ಬೇಕಾಗಿದ್ದ ಜ್ಞಾನ-ಆನಂದಗಳು ದೊರೆಯುವದು ದುಸ್ತರವಲ್ಲವೆಂದು ನರಹರಿಗೆನಿಸಿತು. ನರಹರಿಯು ಮತ್ತೆ ಧ್ಯಾನಸ್ಥನಾಗಲು ಪ್ರಯತ್ನಿಸಿದ. ಒಮ್ಮೆ ನೊಗದಿಂದ ಹೊರಕ್ಕೆ ಬಂದ ಮನಸ್ಸು ಮತ್ತೆ ನೊಗವನ್ನು ಹೊರಲು ಒಪ್ಪದಾಯಿತು. ಅನೇಕ ವಿಷಯಗಳು ಅವನ ಧ್ಯಾನವನ್ನು ಭಂಗಿಸಿದವು. ಮೊಗ್ಗಾವಿ—ಕುಸುಮಾ—ಈ ವರ್ಷ ಕಾಲೇಜಿಗೇ ಹೋಗಿ ಬಿಟ್ಟಿದ್ದರೆ!—ಗುಡಿಯಲ್ಲಿಯ ನನ್ನ ಬ್ಯಾಗು ಹಾಗೆಯೇ ಇದೆಯಷ್ಟೆ!—ಸ್ವಾಮಿದಾಸರು ಏನು ಮಾಡುತ್ತಿರಬಹುದು?—ಗುಡಿಯ ಮಾಲಕರಿಗೆ ಏನೆಂದು ಹೇಳಿ ಅಲ್ಲಿರಬೇಕು?—ನಿನ್ನೆ ರಾತ್ರಿ ಕಳೆದು ಗೂಟಕ್ಕಿಟ್ಟ ಕೋಟಿಗೆ ಧಕ್ಕೆಯಿಲ್ಲವಷ್ಟೆ! ಹೀಗೆ ಒಂದಲ್ಲ ಎರಡಲ್ಲ, ಅನೇಕ ವಿಚಾರಗಳು ಅವನನ್ನು ಕೆಣಕಿದವು. ಮೇಲಾಗಿ ಬಿಸಿಲೇರಹತ್ತಿದಂತೆ ನರಹರಿಯ ಹೊಟ್ಟೆಯಲ್ಲಿಹಸಿವೆಯೂ ತಾಂಡವ

ಮಾಡಹತ್ತಿತು. ಮೊದಲಿನ ರಾತ್ರಿ ನಿರಾಹಾರವಾಗಿತ್ತು. ಇವತ್ತೂ ಆಹಾರ ವಿಲ್ಲದೆ ಧ್ಯಾನವು ಸಾಧ್ಯವಾಗಬಹುದೆ? ಸರ್ಪಗಳಂತೆ—ಕಥೆಗಳಲ್ಲಿಯ ಋಷಿ ಗಳಂತೆ—ತನಗೂ ಗಾಳಿಯನ್ನು ತಿಂದಿರುವ ಶಕ್ತಿ ಬರಬಾರದೇಕೆ? ಎಂದು ನರಹರಿಯು ಚಡಪಡಿಸಿದ.

ಆದರೆ ಹೊಟ್ಟೆಯ ಕೂಗು ಬರಬರುತ್ತ ಗಟ್ಟಿಯಾಯಿತು. ಅದನ್ನು ಅಲಕ್ಷಿಸುವದು ಸಾಧ್ಯವಿರಲಿಲ್ಲ. ಮೊದಲು ಇಂದಿನ ಅನ್ನಸಮಸ್ಯೆಯನ್ನು ಬಿಡಿ ಸಿದ ಮೇಲೆ ಇಂದಿನ ಆನಂದಕ್ಕೆ ದಾರಿಯೆಂದು ನರಹರಿಯು ಗುಡಿಯ ಕಡೆಗೆ ನಡೆದ. ಗುಡಿಯನ್ನು ಪ್ರವೇಶಿಸಿ ನೋಡುತ್ತಾನೆ,—ಗೂಟಕ್ಕೆ ತೂಗು ಹಾಕಿದ ಕೋಟು ಅದೃಶ್ಯವಾಗಿತ್ತು! ಆ ಕೋಟಿನ ಕಿಸೆಯೊಳಗಿರುವ ರುಪಾಯಿಯ ಮೇಲೆಯೇ ನರಹರಿಯು ಕಣ್ಣಿಟ್ಟುಕೊಂಡು—ತನ್ನ ಹೊಟ್ಟೆಯಿಟ್ಟುಕೊಂಡು ಬಂದಿದ್ದ ಕೋಟಿನ ಜೊತೆಗೆ ಆ ರುಪಾಯಿಯೂ ಅದೃಶ್ಯವಾಯಿತೆಂದು ಬೇರೆ ಹೇಳಬೇಕೆ? ನರಹರಿಯು ಅಧೀರನಾಗಿ ಬ್ಯಾಗ್ ಇಟ್ಟ ಮೂಲೆಯ ಕಡೆಗೆ ನೋಡಿದ. ಅಲ್ಲಿ ಬ್ಯಾಗ್ ಇತ್ತು. ಆದರೆ ಅದರ ಕೀಲಿ ಮುರಿದು ಸಾಮಾನುಗಳು ಅಸ್ತವ್ಯಸ್ತವಾಗಿ ಬಿದ್ದಿದ್ದವು. ಅದರಲ್ಲಿದ್ದ ಅರಿವೆ-ಅಂಚಡಿ ಗಳೆಲ್ಲ ಹೋಗಿ ಅವನು ತಂದ ಪುಸ್ತಕಗಳೂ ನೋಟುಬುಕ್ಕುಗಳೂ ಒಂದೆ ರಡು ಹರುಕು ಶರ್ಟು-ಕೋಟುಗಳು ಮಾತ್ರ ಅಲ್ಲಿಲ್ಲಿ ಬಿದ್ದಿದ್ದವು. ಈ ಸಾರ ಸ್ವತ ಪ್ರಪಂಚವನ್ನೂ ಬ್ಯಾಗನ್ನೂ ಬಿಟ್ಟರೆ ನರಹರಿಗೆ ಈಗ ಜಗತ್ತಿನಲ್ಲಿ ಉಳಿದ ಸ್ಥಾವರ-ಜಂಗಮವೆಂದರೆ,—ಅವನು ಉಟ್ಟ ಧೋತರ ಹಾಗು ತೊಟ್ಟ ಶರ್ಟು! ಮರದ ಮೇಲೆ ಒಣಹಾಕಿದ ಧೋತರವೇನಾಗಿದೆಯೆಂದು ನರಹ ರಿಯು ಹೊರಗೆ ಹೋಗಿ ನೋಡಿದ. ಪುಣ್ಯಕ್ಕೆ ಅದು ಅಲ್ಲಿಯೇ ಇತ್ತು. ನರ ಹರಿಯು ಹೋಗಿ ಅದನ್ನು ತೆಗೆದುಕೊಂಡು ಬಂದ.

ಇಲ್ಲಿ ಕಳ್ಳರು ಎಲ್ಲಿಂದ ಬಂದಿರಬಹುದು? ಈ ಪ್ರಶ್ನೆಗೆ ಈಗ ನರಹರಿಯ ಮನಸ್ಸಿನಲ್ಲಿ ಜಾಗವೇ ಉಳಿಯಲಿಲ್ಲ. ನಿರಾಶೆಗೊಂಡ ಅವನ ಉದರಾಗ್ನಿಯು ಮತ್ತಿಷ್ಟು ಪ್ರಖರವಾಗಿ ಪ್ರಜ್ವಲಿಸಿತು. ಮೊದಲು ಅವನು ಹಸಿವೆ ಹಾಕಿದ ಪ್ರಶ್ನೆಗೆ ಉತ್ತರ ಕೊಡಬೇಕು. ಹತ್ತಿರವಿದ್ದ ಹಳ್ಳಿಗಾಗಲಿ ಖಾಸ್‌ಗಾಂವಿ ಗಾಗಲಿ ಹೋಗಿ ಭಿಕ್ಷಾಂ ದೇಹಿ! ಎಂದು ನಿಲ್ಲಬೇಕೆಂಬ ಒಂದು ವಿಚಾರವು ಸುಳಿಯಿತು. ಆದರೆ ಇವನಂಥ ಸಶಕ್ತ, ಸುಸಂಸ್ಕೃತ ತರುಣನು ಭಿಕ್ಷೆಗೆ

ನಿಂತರೆ ಹಾಕುವವರಾರು? ತಾನು ಸಾಧಕನೆಂದು ಹೇಳಿದರೆ ನಂಬುವವರಾದರೂ ಯಾರು? ಪೋಲಿಯೆಂದೆನಿಸಿಕೊಂಡು ಅನ್ನ ದೊರಕಿಸುವದು ಅವನಿಗೆ ಬೇಡವಾಯಿತು. ಇನ್ನು ಯಾರ ಮನೆಗಾದರೂ ಹೋಗಿ ತನ್ನ ಕಥೆ ಹೇಳಿಕೊಂಡು ಊಟಮಾಡಬೇಕು. ಆದರೆ ಹೀಗೆ ಮಾಡಿದರೆ,—ತನ್ನ ಸಾಧನೆಯೆಲ್ಲಿ, ಸಂಕಲ್ಪವೆಲ್ಲಿ, ಧ್ಯಾನವೆಲ್ಲಿ? ಅದಕ್ಕಿಂತ ಮಾಲತಾಯಿಯೊಡನೆ ವಾದಿಸಿ ಆಸ್ತಿಯಲ್ಲಿ ಅರ್ಧ ಪಾಲನ್ನು ಪಡೆಯುವದು ಒಳಿತಲ್ಲವೆ? ಇನ್ನೊಬ್ಬರ ಮನೆಗೆ ಅಳುಮೋರೆ ಮಾಡಿಕೊಂಡು ಹೋಗುವದಕ್ಕಿಂತ ನದಿಯಲ್ಲಿ ಮುಳುಗಿ ಸಾಯುವದು ಲೇಸೆಂದು ನರಹರಿಗೆನಿಸಿತು. ಆದರೆ ಸಾಯುವದಿದ್ದರೆ,—ಕೇಶವದೇವರ ಗುಡಿಯ ಬಾವಿಯಲ್ಲಿ ಜಿಗಿಯುವದನ್ನು ಬಿಟ್ಟು ಅವನು ಇಲ್ಲಿಯವರೆಗೇಕೆ ಬರುತ್ತಿದ್ದ?

ಹೀಗೆ ವಿಚಾರಮಾಡುವಾಗ ನದಿಯ ಈಚೆಯ ದಂಡೆಯ ಮೇಲಿರುವ ತೋಟವು ಅವನ ಕಣ್ಣಿಗೆ ಬಿದ್ದಿತು. ಅಲ್ಲಿ ಒಂದೆರಡು ಹಣ್ಣಾದರೂ ದೊರೆಯಬಹುದಲ್ಲ? ಹೆಚ್ಚಿಗೆ ವಿಚಾರಮಾಡಲು ಆಸ್ಪದವೇ ಇರಲಿಲ್ಲ. ಕಳ್ಳರು ತ್ಯಜಿಸಿದ ಬ್ಯಾಗು–ಪುಸ್ತಕಗಳನ್ನು ಮತ್ತೆ ಗುಡಿಯ ಮೂಲೆಯಲ್ಲಿರಿಸಿ ನರಹರಿಯು ತೋಟದ ಕಡೆಗೆ ಹೊರಟ. ಸೂರ್ಯನು ನಡುನೆತ್ತಿಯ ಮೇಲೆ ಬಂದಿದ್ದ. ಅವನ ತೇಜವನ್ನು ತನ್ನ ಸಲಿಲದಲ್ಲಿ ಗ್ರಹಿಸಿ ಕಣ್ಣನ್ನು ಕತ್ತಲೆಗೂಡಿಸುವಂಥ ಬೆಳಕನ್ನು ಕೃಷ್ಣೆಯು ಚೆಲ್ಲುತ್ತಿದ್ದಳು. ನೆಟ್ಟಗೆ ತೋಟಕ್ಕೆ ಗುರಿಯಿಟ್ಟು ನರಹರಿ ಸಾಗಿದ.

ತೋಟವನ್ನು ಮುಟ್ಟಿ ಒಳಸೇರಿದಾಗ, ನರಹರಿಯ ಆಶಾಂಕುರವು ಮತ್ತೆ ಕೊನರಿತು. ಹಸಿದು ಬಿಸಿಲಲ್ಲಿ ನಡೆದು ಬಂದವರಿಗೆ,—ತಣ್ಣುಸಿರನ್ನು ಬೀರುವ ಈ ತೋಟವು ಸ್ವರ್ಗ! ಅದರ ನಿಡಿದಾದ ನೆಳಲುಗಳು ಕೈ ಚಾಚಿ ನರಹರಿಯನ್ನು ಕರೆದವು. ತೋಟದಲ್ಲಿ ಶೋಭಿಸಿದ್ದ ಮಾವು–ತೆಂಗುಗಳು,—ನಿನ್ನ ಆಗಮನ ನಮಗೆ ಒಪ್ಪಿಗೆಯಿದೆ! ಎಂದು ತಲೆಯಲ್ಲಾಡಿಸಿದವು. ವೀಳ್ಯದೆಲೆಗಳು ಫಲಾಹಾರಕ್ಕೆ ವೀಳ್ಯವಿತ್ತವು. ಅಲ್ಲಿ ಜನರ ಸದ್ದಿರಲಿಲ್ಲ; ಯಾರ ದೊಂದಣಿಯೂ ಇರಲಿಲ್ಲ. ಇದು ನಿಸರ್ಗದೇವತೆಯು ಕರುಣಿಸಿ ತನಗಾಗಿ ರಚಿಸಿದ ಉಪವನವೆಂಬಂತೆ ತೋಟವು ನರಹರಿಯನ್ನು ಶಾಂತಗೊಳಿಸಿತು.

ನರಹರಿಗೆ ಮಿಡಿಮಾವು ಬೇಕಿರಲಿಲ್ಲ; ಬಾಳೆಕಾಯಿ ಗೊನೆಯಿಂದ ಪ್ರಯೋಜನವಿರಲಿಲ್ಲ. ಅಲ್ಲಿಯೇ ಮೋಸಂಬಿ ಗಿಡಗಳ ಸಾಲೊಂದಿತ್ತು. ಒಂದೊಂದು ಗಿಡವೂ ತುದಿ-ಮೊದಲಾಗಿ ಹಣ್ಣು-ಕಾಯಿಗಳಿಂದ ಮುಚ್ಚಿ ಹೋಗಿತ್ತು. ಹಸಿದವನಿಗೆ ಏನೂ ಸಿಗದಾಗ,—ಈ ಹಣ್ಣಿನ ರಸ ಎಂತಹ ಅಮೃತ! ಅಲ್ಲಿಯೇ ಕೈಗೆ ಸಿಲುಕಿದ ಒಂದೆರಡು ಹಣ್ಣುಗಳನ್ನು ಹರಿದು ಒಂದು ಮರದ ನೆಳಲಿನಲ್ಲಿ ಕುಳಿತು ನರಹರಿಯು ಆ ಹಣ್ಣಿನ ಸಿಪ್ಪೆ ಸುಲಿಯ ಹತ್ತಿದ ಸುಲಿದು ಇನ್ನು ಮೇಲೆ ಹಣ್ಣಿನ ತೊಳೆಯನ್ನು ಬಾಯಿಯಲ್ಲಿಡುವವ; ಅಷ್ಟರಲ್ಲಿ ವಜ್ರಕಠಿಣವಾದ ಧ್ವನಿಯೊಂದು ಮರಗಳ ಗುಂಪಿನೊಳಗಿಂದ ಬಂತು! "ಯಾರವ ಕಳ್ಳ, ಇನ್ನೊಬ್ಬರ ತೋಟದ ಹಣ್ಣು ಹರಿದು ಹಲ್ಲು ಮುರಿಸಿಕೊಂಡು ಹೋಗಬೇಕೆಂದವ!"

ಈ ಶಬ್ದಗಳು ನರಹರಿಯ ಮರ್ಮವನ್ನು ಭೇದಿಸಿದವು. ಕುಳಿತಲ್ಲಿಯೇ ಅವನು ಎದ್ದು ನಿಂತ. ಮರದ ಗುಂಪಿನೊಳಗಿಂದ ಬಾರುಕೋಲನ್ನು ಹೆಗಲ ಮೇಲೆ ಹಾಕಿದ ವ್ಯಕ್ತಿಯೊಂದು ಅವನೆಡೆಗೆ ನುಸುಳಿ ಬಂತು ವ್ಯಕ್ತಿಯು ಮರಾಠಿಯಲ್ಲಿಯೇ ಮಾತನಾಡಿತ್ತು. ಮರಾಠಿಯಲ್ಲಿಯೇ ಅದರ ಮಾತು ಮುಂದುವರಿಯಿತು: "ಈ ತೋಟವೇನು ಧರ್ಮಶಾಲೆಯೆಂದು ತಿಳಿದಿದ್ದೀರಾ? ಇವೇನು ನಿಮ್ಮ ಅಜ್ಜ ಹಚ್ಚಿದ ಮರಗಳ ಹಣ್ಣೇನು? ಹಗಲಿರುಳೂ ಧಣಿಯರ ತೋಟವನ್ನು ನಾನು ಕಾಯಬೇಕು; ಮತ್ತೆ ಹಣ್ಣು ಹೋಗಿವೆಯೆಂದು ಬಡತ-ಹಿಂಬಡತಿ ತಿನ್ನಬೇಕು ಇಂದು ತಿಳಿಯಿತು ಇಲ್ಲಿಯ ಗುನ್ಹೇಗಾರ್ ಯಾರೆಂದು! ನಿಮ್ಮನ್ನೆಲ್ಲಿ ಬಿಡುತ್ತೇನೆ!" ಎಂದು ಆ ವ್ಯಕ್ತಿಯು ಗರ್ಜಿಸಿತು.

ನರಹರಿಗೆ ಮರಾಠಿ ತಿಳಿಯುತ್ತಿತ್ತು. ಆದರೆ ಮಾತನಾಡಲು ಬರುತ್ತಿರಲಿಲ್ಲ. ವ್ಯಕ್ತಿಯ ಗರ್ಜನೆಯ ಅರ್ಥವನ್ನು ಅವನು ಮಾಡಿಕೊಂಡಿದ್ದ. ಇಂಥ ಹಸಿವೆಯಲ್ಲಿಯೂ ಅವನಿಗೆ ಸಿಟ್ಟು ಬಂತು: "ಅಂದರೆ? ನಿಮ್ಮ ಯಜಮಾನರು ಪ್ರತಿಯೊಂದು ಮರದ ಮೇಲಿನ ಹಣ್ಣು-ಕಾಯನ್ನು ಎಣಿಸಿರುತ್ತಾರೇನು?" ಎಂದು ತನಗೆ ಬಂದ ಹರಕು-ಮುರುಕು ಮರಾಠಿಯಲ್ಲಿಯೇ ನರಹರಿ ಕೇಳಿದ.

"ಮತ್ತೆ? ಬರಿ ಹಣ್ಣು-ಕಾಯೇಕೆ? ಎಲೆಗಳನ್ನೂ ಸಹ ಎಣಿಸಿರುತ್ತಾರೆ! ಆದರೆ ಅದನ್ನೆಲ್ಲ ತೆಗೆದುಕೊಂಡು ನಿಮಗೇನು ಮಾಡುವದು? ಥೇಡ್‌ಗುದುರಿ ಕಾನಡಿ!" ಎಂದು ತಪ್ಪು, ತಪ್ಪು ಮರಾಠಿಯನ್ನಾಡಿದ ನರಹರಿಯನ್ನು ಆ ವ್ಯಕ್ತಿಯು ನಗೆಯಾಡಿತು.

"ಅದೇನೇ ಇರಲಿ. ನನಗೆ ಹಸಿವೆಯಾಗಿದೆ ನಿನ್ನೆಯಿಂದ ಊಟವಿಲ್ಲ. ಇವೆರಡು ಹಣ್ಣು ಹರಿದಿದ್ದೇನೆ. ಇವನ್ನು ಒಯ್ಯಗೊಡಿರಿ ಇನ್ನು ತಿರುಗಿ ಈ ತೋಟದಲ್ಲಿ ಕಾಲಿಕ್ಕುವದಿಲ್ಲ" ಎಂದ ನರಹರಿ

"ಹೇಳಿದ ಮಾತಿನ ಅರ್ಥವಾಯಿತೋ ಇಲ್ಲೋ! ಆ ಹಣ್ಣನ್ನು ಸುಮ್ಮನೆ ಇಲ್ಲಿಟ್ಟು ಹೋಗಿರಿ. ಇಲ್ಲದಿದ್ದರೆ ನಿಮ್ಮನ್ನು ಪೋಲೀಸರ ಕೈಯ್ಯಲ್ಲಿ ಕೊಡಬೇಕಾದೀತು!" ಎಂದು ಆ ವ್ಯಕ್ತಿಯು ಆರ್ಭಟಿಸಿ ಬಾರುಕೋಲನ್ನು ಚಮಕಿಸಿತು ನರಹರಿಯ ಬೆನ್ನಿನ ಮೇಲೆ ಪೆಟ್ಟು ತಗಲಿ ಉದ್ದಕ್ಕೆ ಆ ಬಾರುಕೋಲಿನ ಬಾರು ಮೂಡಿತು.

ಇನ್ನು ಈ ರಾಕ್ಷಸನೊಡನೆ ಗುದುಮುರಿಗೆಯೆಲ್ಲಿ? ಪೆಟ್ಟನ್ನು ತಾಳಿ ಆದ ಅಪಮಾನವನ್ನು ಸಹಿಸಿಕೊಂಡು ಹಣ್ಣನ್ನು ಕೆಳಗಿರಿಸಿ ಪಿಟ್ಟೆಂದು ಮರು ಮಾತಾಡದೆ ನರಹರಿಯು ತೋಟದಿಂದ ಹೊರಕ್ಕೆ ನಡೆದ. ಅವನು ಹಿಂದೆ ತಿರುಗಿದಾಗ ವ್ಯಕ್ತಿಯು ಗಹಗಹಿಸಿ ನಕ್ಕಿತು; ಚಪ್ಪಾಳೆಯಿಕ್ಕಿತು. ಇಷ್ಟೆಲ್ಲ ಸಹಿಸಿದ ನರಹರಿಗೆ ಈ ಚಪ್ಪಾಳೆಯಿಂದೇನಾಗಬೇಕಾಗಿದೆ? ಅವನು ಸುಮ್ಮನೆ ಮುಂದೆ ನಡೆದ

ಹೇಗಿದೆ ಜಗತ್ತಿನ ವ್ಯವಹಾರ! ಈ ವ್ಯಕ್ತಿಯೇ ತನ್ನ ಸಾಮಾನುಗಳನ್ನು ಕದ್ದಿರಬಹುದು. ಮುಂಜಾವಿನಿಂದ ಅಲ್ಲಿ ಸುತ್ತಲೆಲ್ಲ ಮತ್ತಾರೂ ಸುಳಿದಿರಲಿಲ್ಲ. ಆದರೆ ಒಂದೆರಡು ಹಣ್ಣು ಹರಿದದ್ದಕ್ಕೆ ಅದೇ ವ್ಯಕ್ತಿಯು ಈಗ ನರಹರಿಯನ್ನು ಕ್ರೂರವಾಗಿ ಶಿಕ್ಷಿಸಿದ್ದನು. ಅನ್ನದ ಪ್ರಶ್ನೆಯು ಮಾನವನಿಗೆ ಪಶುಗಳಿಗಿಂತ ಕಠಿಣವಾಯಿತಲ್ಲವೆ? ಮನುಷ್ಯನೂ ಆಕಳು-ಎಮ್ಮೆಗಳಂತೆ ಹುಲ್ಲನ್ನು ನಿರಾಯಾಸವಾಗಿ ಮೇಯ್ದು ಜೀವಿಸಿದ್ದರೆ? ಆಗ ಜೀವಿತವು ಎಷ್ಟು ಸುಲಭವಾಗುತ್ತಿತ್ತು! ನದಿಯ ದಂಡೆಯ ಮೇಲೆ ಒಂದು ಮರದ ನೆಳಲಿನಲ್ಲಿ ಕುಳಿತ ನರಹರಿಯು ಅಲ್ಲಿ ಪಸರಿಸಿದ ಹಸಿರು ಹುಲ್ಲನ್ನು ಆಕಳಂತೆ ಹೂಸಿ ನೋಡಿದ. ಅದನ್ನು ತಿನ್ನಲಿಲ್ಲ ಮಾತ್ರ.

ಅನ್ನದ ಸಮಸ್ಯೆ! ಹೊಟ್ಟೆಗಾಗಿ—ಗೇಣು ಬಟ್ಟೆಗಾಗಿ—ಮನುಷ್ಯನು ತನ್ನ ಆತ್ಮವನ್ನು ಮಾರಬೇಕು. ಆಜನ್ಮ ದುಡಿದು ಬೆಮರುಹನಿಗೊಂದು ಕಾಳಂತೆ ಧಾನ್ಯವನ್ನು ಪಡೆಯಬೇಕು ಹೊಟ್ಟೆಗಾಗಿ ಕೈಯ್ಯೊಡ್ಡಬೇಕು, ಕಣ್ಣೊರಿಸಬೇಕು, ಮೂಗು ತಿಕ್ಕಬೇಕು, ಜ್ಞಾನಾನಂದಗಳ ಹಾದಿಯನ್ನೇ ಬಿಡಬೇಕು! ದೇವಜನಿತ ಸೃಷ್ಟಿಯಲ್ಲಿ ಇದೆಂತಹ ಆಸುರೀ ನಿಯಮ! ಎಂದು ನರಹರಿಯು ಕಳವಳಗೊಂಡ. ನಾಗರಿಕತೆಯ ಮಧ್ಯದಲ್ಲಿಯೂ ಇಂಥ ಯಾತನೆಯನ್ನು ಸಹಿಸಬೇಕಾಗಬಹುದೆಂದು ನರಹರಿಗೆ ಹೊಳೆದಿರಲಿಲ್ಲ.

ವಿಚಾರ ಮಾಡಿದ ಹಾಗೆ ಇದು ತಳವಿಲ್ಲದ ತಗ್ಗೆಂದು ನರಹರಿಗೆ ಮನವರಿಕೆಯಾಯಿತು ಯಾಕೆ? ಎಂದು ಪ್ರಶ್ನಿಸಿ ಪ್ರಯೋಜನವಿಲ್ಲ. ಹೀಗಿದೆ; ಇದನ್ನು ಗೆದ್ದು ಮಾತ್ರ ಮುಂದೆ ಸಾಗಬಹುದು; ಇದರ ಪರಿಹಾರ ಹೇಗೆ? ಎಂಬ ವಿಚಾರಕ್ಕೆ ಈಗ ನರಹರಿ ತೊಡಗಿದ ಮನುಷ್ಯನ ಸತ್ವ ಪರೀಕ್ಷೆಗಾಗಿ ದೇವರು ಈ ಪ್ರಶ್ನೆಯನ್ನು ತಂದೊಡ್ಡಿರಬಹುದಲ್ಲ? ಆತ್ಮ ಬೋಧದ ಹಾದಿಯಲ್ಲಿ ಮಾನವನ ಪೌರುಷವು ಬೆಳೆಯಲೆಂದು ದೇವರು ಈ ನಿಯಮವನ್ನು ಹಾಕಿರಬಹುದಲ್ಲ? ಸಾಧಕನಿಗೆ ಮೊದಲನೆಯ ನಿಯಮ ವಿದು,—ನಿನ್ನ ಅನ್ನಸಮಸ್ಯೆಯನ್ನು ಬಿಡಿಸು; ನಿನ್ನ ಆರ್ಥಿಕ ಸ್ವಾತಂತ್ರ್ಯ ವನ್ನು ಕಾಪಾಡಿಕೊ; ಇಲ್ಲವೆ ಈ ಸ್ವಾತಂತ್ರ್ಯವು ಮಾನವನಿಗೆ ಸಹಜಸಿದ್ಧ ವಾಗುವ ಹಾಗೆ ನೀನಿರುವ ಸಮಾಜವನ್ನು ರಕ್ಷಿಸು! ಇದು ಸಾಧಕನಿಗೆ ದೇವನಿತ್ತ ಮೊದಲನೆಯ ಸಂದೇಶ. ಇದರ ಬಗ್ಗೆ ನರಹರಿಗೆ ಸಂದೇಹವೆ ಉಳಿಯಲಿಲ್ಲ. ಕಠೋರ ಅನುಭವದಿಂದ ಅವನು ಈ ಅರಿವನ್ನು ಪಡೆದಿದ್ದ.

ಈ ನಿರ್ಧಾರಕ್ಕೆ ಬಂದಾಗ ನರಹರಿಯ ಹಸಿವೆ ಕಡಿಮೆಯಾಗದಿದ್ದರೂ ಅವನಿಗೆ ಸಮಾಧಾನವಾಯಿತು. ಮುಂದೇನು ಮಾಡಬೇಕೆಂಬುದು ಅವನಿಗೆ ನಿಚ್ಚಳವಾಗಿ ಹೊಳೆಯಿತು. ಸ್ವಾಮಿದಾಸರ ಹೇಳಿಕೆಯ ಸತ್ಯಾಂಶವು ಅವನಿಗೆ ಮನದಟ್ಟಾಯಿತು. ಇನ್ನು ಹೋಗುವದೆಲ್ಲಿಗೆ? ಮೇಲೆಯೇ ಕಾಣುತ್ತದೆ. ಸ್ವಾಮಿದಾಸರೆಡೆಗೆ! ನರಹರಿಯು ಅಲ್ಲಿಂದೆದ್ದು ಗುಡಿಯೆಡೆಗೆ ನಡೆದ. ಅಲ್ಲಿ ತನ್ನ ಬ್ಯಾಗನ್ನು ಸರಿಪಡಿಸಿಕೊಂಡು ಚಿಲಕದ ಬದಲು ಅದಕ್ಕೆ ದೋತರದೊಂದು ಗಂಟು ಹಾಕಿ ಕೈಯ್ಯಲ್ಲಿ ಹಿಡಿದುಕೊಂಡು ತಲೆಯ ಮೇಲೆ ಒಗೆದಿದ್ದ ದೋತರವನ್ನು ಹೊದ್ದುಕೊಂಡು ನದಿಯ ದಂಡೆಗುಂಟ

ಬ್ರಹ್ಮಪುರಿಯ ಹಾದಿಯನ್ನು ಹಿಡಿದು ನರಹರಿ ಹೊರಟ. ಆಗ ಇಳಿ ಹೊತ್ತಾಗಿತ್ತು. ಹಸಿವೆಯು ಕಂಗೆಡಿಸಿದ್ದರೂ ಮನಸ್ಸಿಗಾದ ಸಮಾಧಾನವು ಕಾಲಿಗೆ ಶಕ್ತಿಯನ್ನು ಕೊಟ್ಟಿತ್ತು. ಮೆಲ್ಲನೆ ನಡೆದು ಅವರಿವರನ್ನು ನಿರ್ವಿಣ್ಣ ನಾಗಿ ಕೇಳಿ ಬ್ರಹ್ಮಪುರಿಯನ್ನು ನರಹರಿಯು ಮುಟ್ಟಬೇಕಾದರೆ ಅಂದು ದೀಪ ಹಚ್ಚುವ ಹೊತ್ತಾಗಿಹೋಗಿತ್ತು.

---

## ಪ್ರಕರಣ ೫೦

## ಜೀವನದ ಐದು ಸೂತ್ರಗಳು

ನರಹರಿಯ ಸ್ವಾಗತಕ್ಕೋ ಏನೋ ಎಂಬುವಂತೆ ಸ್ವಾಮಿದಾಸರು ಅವನು ಬರುವ ಹೊತ್ತಿಗೆ ಈಶ್ವರಾಲಯದ ಹೊರಗಿನ ಅರಳಿಕಟ್ಟೆಯ ಮೇಲೆ ವಿಶ್ರಮಿಸಿದ್ದರು. ಅವನು ಬಂದೊಡನೆ ಅವನಿಗೆ ಕೈಕಾಲು ತೊಳೆಯಲು ನೀರು ಕೊಟ್ಟು ತಮ್ಮೊಡೆಗೆ ಪ್ರಸಾದವೆಂದು ಒಂದಿದ್ದ ಆಹಾರದಿಂದ ನರಹರಿ ಯನ್ನು ಸಂತವಿಸಿದರು. ಮೊದಲು ಮೊದಲು ಸಂಕೋಚಪಟ್ಟುಕೊಂಡಿದ್ದರೂ ನರಹರಿಯು ಮುಕ್ತಮನಸ್ಸಿನಿಂದ ತನಗೆ ಬೇಕಾದುದನ್ನು ಸ್ವೀಕರಿಸಿದ್ದ. ಸ್ವಲ್ಪದರಲ್ಲಿಯೇ ಆವನು ತನ್ನ ಕಥೆಯನ್ನು ಸ್ವಾಮಿದಾಸರಿಗೆ ಹೇಳಿದ. ಸಹಾನುಭೂತಿಯಿಂದ ಅವರು ಅದನ್ನೆಲ್ಲ ಕೇಳಿಕೊಂಡಿದ್ದರು.

ರಾತ್ರಿಗೆ ಸ್ವಾಮಿದಾಸರಿಗೆ ಊಟವಾಗಲಿ ಫಲಾಹಾರವಾಗಲಿ ಇರಲಿಲ್ಲ. ದಿನಕ್ಕೊಂದು ಸಲ ಊಟಮಾಡುವ ಪದ್ಧತಿಯು ಅವರದಾಗಿತ್ತು. ನರಹರಿಯ ಊಟವಾದ ಮೇಲೆ—ಸ್ವಾಮಿದಾಸರ ಆಹ್ನೀಕ-ಧ್ಯಾನಗಳು ಮುಗಿದನಂತರ ಇಬ್ಬರೂ ಅರಳಿಕಟ್ಟೆಯ ಮೇಲೆ ಕುಳಿತುಕೊಂಡರು. ಹತ್ತಿರ ದಲ್ಲಿಯೇ ಪ್ರತಿಬಿಂಬಿತ ನಕ್ಷತ್ರಗಳ ಮೊನೆಯನ್ನು ಮೊಂಡಾಗಿಸಿ ಕೃಷ್ಣೆಯು ಹರಿಯುತ್ತಿದ್ದಳು. ಇದೊಂದು ರಮ್ಯಸ್ಥಾನ, ಸ್ವಾಮಿದಾಸರಿಗೆ ತಕ್ಕುದಾದ ಸ್ಥಾನ, ಎಂದು ನರಹರಿಯು ಮನಸ್ಸಿನಲ್ಲಿಯೇ ಅಂದುಕೊಂಡ.

"ಸಮಾಜವು ಇಷ್ಟು ಶ್ರೀಮಂತವಾಗಿದ್ದರೂ ಅಲ್ಲಿ ನನಗೆ ಅನ್ನವು ದೊರೆಯಲಿಲ್ಲ. ಅದಕ್ಕಾಗಿ ನಿರ್ಲಿಪ್ತರಾದ ನಿಮ್ಮೆಡೆಗೆ ಬರಬೇಕಾಯಿತು!

ಸಾಧನೆ–ಧ್ಯಾನಕ್ಕಾಗಿ ಸಮಾಜದಲ್ಲಿ ಸ್ಥಾನವೇ ಇಲ್ಲ. ಅಲ್ಲಿ ನಡೆಯುವದು ಮದುವೆ–ಮುಂಜ್ವಿ–ಪಕ್ಷ–ಶ್ರಾದ್ಧ. ಆದರ್ಶಸಮಾಜವೆಂದರೆ ನಿಮ್ಮಂತಿರಬೇಕು; ಮಾನವನು ತನಗೆ ಬೇಕಾದ ಸಿದ್ಧಿಯನ್ನು ಮುಟ್ಟಲು ಆದು ಅನುಕೂಲವನ್ನು ಕಲ್ಪಿಸಿಕೊಡಬೇಕು." ಎಂದ ನರಹರಿ.

"ಇಂಥ ಆದರ್ಶಸಮಾಜವು ಅಸ್ತಿತ್ವದಲ್ಲಿ ಬರುವದು ದೇವರ ಸಂಕಲ್ಪವಿದೆಯೋ ಇಲ್ಲವೋ ಹೇಳಲಾರೆ. ಆದರೂ ಸಮಾಜವನ್ನು ಆದಷ್ಟು ಉನ್ನತಿಗೊಳಿಸಲು ಪ್ರಯತ್ನಿಸಬೇಕೆಂಬುವದರಲ್ಲಿ ಸಂಶಯವಿಲ್ಲ" ಎಂದು ಸ್ವಾಮಿ-ದಾಸರು ಹೇಳಿದರು.

"ನೀವು ಈ ಪ್ರಶ್ನೆಯನ್ನು ಚೆನ್ನಾಗಿ ಬಿಡಿಸಿದ್ದೀರಿ. ನಿರ್ಲಿಪ್ತರಾದವರನ್ನು ಪೂರ್ಣತೆಯು ತಾನಾಗಿಯೇ ಬೆನ್ನುಹತ್ತುತ್ತದೆ. ನೀವು ಕುಳಿತಲ್ಲಿಂದ ಕದಲುವದಿಲ್ಲ. ಆದರೆ ಕುಳಿತಲ್ಲಿಯೇ ನಿಮ್ಮ ಆಹಾರವು ಸಿದ್ಧವಾಗಿರುತ್ತದೆ!" ಎಂದ ನರಹರಿ.

"ಹಾಗೇನೂ ಹೇಳಲು ಬರುವದಿಲ್ಲ. ಸಮುನ್ವ್ಯಾಪೂರ್ತಿಯಾದರೆ,— ಅದು ದಿನವೂ ಭಗವಂತನ ಕೃಪೆ. ನಾನೇನೋ ನಿರ್ಧಾರಮಾಡಿದ್ದೇನೆ,— ಅನ್ನದ ವಿಷಯದಲ್ಲಿ ನಾನು ಯಾರನ್ನೂ ಕೇಳುವದಿಲ್ಲ; ದೇವರ ಸೇವೆಯಿಂದ ಅಷ್ಟು ವೇಳೆಯನ್ನು ಭಂಗಪಡಿಸಲು ಇಚ್ಛಿಸುವದಿಲ್ಲ, ಎಂದು. ಇದಕ್ಕಾಗಿ ನಾನು ಅನೇಕ ಕಷ್ಟಗಳನ್ನು ಅನುಭವಿಸಿದ್ದೇನೆ ಆಹಾರವಿಲ್ಲದೆ ಅನೇಕ ದಿನಗಳನ್ನು ಕಳೆದಿದ್ದೇನೆ. ಆದರೆ ಅದಕ್ಕೆ ನಾನೆಂದೂ ಅಸಹ್ಯಪಟ್ಟುಕೊಂಡಿಲ್ಲ. ನಾನು ತನ್ನ ಸೇವೆಯಲ್ಲಿ ನಿರಾಹಾರಿಯಾಗಿಯೇ ಈ ಜಡ ದೇಹವನ್ನು ಬಿಡಬೇಕೆಂದು ಭಗವಂತನ ಇಚ್ಛೆಯಿದ್ದರೆ ಹಾಗೇ ಆಗಲಿ,—ಎಂದುಕೊಂಡಿದ್ದೇನೆ. ನನಗೆ ಜೀವನದಲ್ಲಿ ಉಳಿದ ಯಾವ ವಾಸನೆಗಳೂ ಇಲ್ಲ, ನೋಡಿರಿ." ಸ್ವಾಮಿದಾಸರೆಂದರು.

ಈಗ ನರಹರಿಯ ನಿಯಮ ದರ್ಶನವು ತತ್ತರಿಸಹತ್ತಿತು. ಇವರು ಅನ್ನಕ್ಕಾಗಿ ದುಡಿಯುವದಿಲ್ಲ ಆ ಪ್ರಶ್ನೆಯನ್ನು ದೇವರಿಗೇ ಬಿಟ್ಟುಬಿಟ್ಟಿದ್ದಾರೆ. ಆದರೆ ಹೀಗೆ ಬಿಡುವಾಗ ಸಹಿಸಬೇಕಾದ ಎಲ್ಲ ಯಾತನೆಗಳನ್ನೂ ಸಹಿಸಲು ಇವರು ಸಿದ್ಧರಿದ್ದಾರೆ. ತೊಡಕಾಗಿದ್ದರೂ ಇದೂ ಒಂದು ಪ್ರಶ್ನೆ ಬಿಡಿಸುವ ರೀತಿಯೆನ್ನಿಸಿತು ನರಹರಿಗೆ. ಅವರು ಹೇಳುವದನ್ನೆಲ್ಲ ನರಹರಿಯು ಉತ್ಸು

ಕತೆಯಿಂದ ಕೇಳಿದ. ಸ್ವಾಮಿದಾಸರು ಮತ್ತೆ ಮುಂದುವರಿಸಿದರು: "ಆದರೆ ಭಗವಂತನ ಕೃಪೆಯು ಅಪಾರವಾಗಿದೆ. ಆಗೀಗ ನಮ್ಮನ್ನು ಪರೀಕ್ಷಿಸಲು ಅವನು ಕಠಿಣ ಪ್ರಸಂಗಗಳನ್ನು ತರಬಹುದೇ ವಿನಾ ಉಳಿದ ವೇಳೆಯಲ್ಲೆಲ್ಲ ನಮ್ಮನ್ನು ಆತನು ಪ್ರೀತಿಯಿಂದ ಸಲಹುತ್ತಾನೆ ನನ್ನ ಉದಾಹರಣೆಯನ್ನೇ ತೆಗೆದುಕೊಳ್ಳಿರಿ ಅರಣ್ಯದಲ್ಲಿ ನನಗೆ ರಾಜವೈಭವ ದೊರೆತಿದೆ. ಅನಿರೀಕ್ಷಿತ ಸ್ಥಳದಲ್ಲಿ ಸೌಕರ್ಯಗಳು ನನಗಾಗಿ ಕಾದುಕೊಂಡಿರುವವು. ಭಗವಂತನು ಈ ಇಪ್ಪತ್ತು ವರ್ಷ ಒಟ್ಟಿನ ಮೇಲೆ ಗರ್ಭಶ್ರೀಮಂತರ ರೀವಿಯಲ್ಲಿ ನನ್ನನ್ನು ಇಟ್ಟಿದ್ದಾನೆಂದು ನನಗೆನಿಸುತ್ತದೆ.

ಅವರ ಮಾತು ಕೇಳಿದಷ್ಟೂ, ನರಹರಿಯಲ್ಲಿ ಅವರ ಬಗ್ಗೆ ಗೌರವ ಹೆಚ್ಚಿತು. ಒಂದು ದಿನದ ಅನ್ನಕ್ಕಾಗಿ ಪೇಚಾಡಿದ ನರಹರಿಯೆಲ್ಲಿ; ಜೀವಮಾನದಲ್ಲೆಲ್ಲ ಅನ್ನಸಮಸ್ಯೆಯನ್ನು ಬಿಡಿಸುವದಿಲ್ಲ, ಅದನ್ನು ಮೀರಿ ನಿಲ್ಲುತ್ತೇನೆಂದು ಸಂಕಲ್ಪಿಸಿ ಅದರಂತೆ ನಡೆದ ಸ್ವಾಮಿದಾಸರೆಲ್ಲಿ? ನರಹರಿಗೆ ನಾಚಿಕೆಯಾಯಿತು. ತನ್ನಲ್ಲಿದ್ದ ವಿಚಾರಶ್ರೀಮಂತಿಕೆಗೆ ಆಚಾರಶ್ರೀಮಂತಿಕೆಯು ಜೊತೆಯಾಗದೆ ಜೀವನವು ಹಿಗ್ಗುವದು ಸಾಧ್ಯವಿಲ್ಲೆಂದುಕೊಂಡ ನರಹರಿ.

"ಇಲ್ಲಿ ನಾನು ಕೆಲವು ದಿನಗಳ ವರೆಗೆ ಇರಬಹುದಲ್ಲ?" ಎಂದು ಸಾಶಂಕಿತನಾಗಿ ನರಹರಿ ಕೇಳಿದ.

"ಅಗತ್ಯವಾಗಿ. ಇಲ್ಲಿ ನಿಮ್ಮಂತೆ ನಾನೂ ಅತಿಥಿ ನಾವಿಬ್ಬರೂ ದೇವನ ಅತಿಥಿಗಳು!" ಎಂದು ಸ್ವಾಮಿದಾಸರು ಮುಗುಳ್ನಗೆ ನಕ್ಕರು. "ನನ್ನ ಜೊತೆಯಲ್ಲಿ ನೀವೂ ಕೆಲವು ದಿನ ಇಲ್ಲಿರಬೇಕೆಂಬುದು ಈಶ್ವರೇಚ್ಛೆಯೆಂದು ಕಾಣುತ್ತದೆ ಅದರಲ್ಲಿ ನನಗೆ ಸಂತೋಷವಿದೆ."

ಈಗ ನರಹರಿಗೆ ಒಂದು ಬಗೆಯ ಅನುಪಮ ಸಮಾಧಾನವಾಯಿತು. ಅವನು ತನ್ನನ್ನು ಬಾಧಿಸುತ್ತಿದ್ದ ಇನ್ನೊಂದು ಪ್ರಶ್ನೆಯನ್ನು ಕೇಳಿದ: "ನನ್ನಲ್ಲಿ ಏನಾದರೂ ಸಂಶಯಗಳಿದ್ದರೆ ಅವನ್ನು ಆಗೀಗ ನಾನು ತಮ್ಮೆದುರಿಗೆ ಇಡಬಹುದಷ್ಟೆ?"

"ಇಡಬಹುದು. ನನಗೆ ತಿಳಿದಿದ್ದನ್ನು ನಾನು ಹೇಳುವೆ. ನಾನೇನು ಪಂಡಿತನಲ್ಲ, ಶಾಸ್ತ್ರಾಭ್ಯಾಸವನ್ನು ಮಾಡಿಲ್ಲ" ಎಂದು ಸ್ವಾಮಿದಾಸರು

ನಸುನಗುತ್ತ ಹೇಳಿದರು. "ದಿನಾಲು ನಿಮಗೆ ಪ್ರೇರಣೆಯಾದ ಹಾಗೆ ನೀವು ಇಲ್ಲಿ ಇದ್ದುಬಿಡಿರಿ. ರಾತ್ರಿಯಲ್ಲಿ ಇಲ್ಲಿ ಕಟ್ಟೆಯ ಮೇಲೆ ಕೂತಾಗ ಮಾತನಾಡೋಣ."

ಬಳಿಕ ಹೊತ್ತಾಗಿದ್ದರಿಂದ ದೇವಾಲಯದ ಎದುರಿಗಿದ್ದ ಕೋಣೆಯೊಂದನ್ನು ಸ್ವಾಮಿದಾಸರು ಪ್ರವೇಶಿಸಿದರು ಅದರ ಬದಿಯಲ್ಲಿದ್ದ ಇನ್ನೊಂದು ಕೋಣೆಯಲ್ಲಿ ನರಹರಿಯು ಸಂಗಡ ತಂದಿದ್ದ ದೋತರವನ್ನು ಹಾಸಿದ. ಶ್ರೀಮಂತ ಭಾವಿಕರು ಗುಡಿಗೆ ಬರುವ ಸದ್ಭಕ್ತರ ಸಲುವಾಗಿ ಕಟ್ಟಿಸಿದ ಕೋಣೆಗಳವು.

ಕೃಷ್ಣೆಯು ಮೊದಲಿನಂತೆ ಮೆಲ್ಲನೆ ಹರಿದಳು. ಅವಳಿಗೆ ನಿದ್ದೆಯೇ ಇಲ್ಲ. ಪಂಚಮಹಾಭೂತಗಳಲ್ಲಿ ಒಂದಾದ ಸಲಿಲಚೈತನ್ಯವೇ ಆಕೆ. ಸದಾ ಜಾಗ್ರತಳು.

ಮರುದಿನ ನಸುಕಿನಲ್ಲಿ ನರಹರಿಯು ಎದ್ದು ನೋಡಿದಾಗ ಸ್ವಾಮಿದಾಸರು ಆಗಲೆ ಅದೃಶ್ಯರಾಗಿದ್ದರು ನದಿಯಲ್ಲಿ ಸ್ನಾನ ಮುಗಿಸಿಕೊಂಡು ಆಹ್ನೀಕ ಧ್ಯಾನಗಳಿಗಾಗಿ ಅವರು ಆಚೆಯ ದಡವನ್ನು ಸೇರಿ ತಮ್ಮದೇ ಆದ ಒಂದು ಸ್ಥಾನವನ್ನು ಹುಡುಕಿಕೊಂಡು ಕುಳಿತಿದ್ದರು. ನರಹರಿಯು ಎದ್ದು ಸ್ನಾನಕ್ಕೆಂದು ನದಿಗೆ ನಡೆದ ಸ್ವಾಮಿದಾಸರ ಅಂತಃಕರಣದ ಅನುಭವವನ್ನು ಪಡೆದ ಅವನ ಮನೋವೃತ್ತಿಯು ಈಗ ತುಸುವಾದರೂ ಉಲ್ಲಸಿತವಾಗಿತ್ತು. ನದಿಯಲ್ಲಿ ಈಸಿ ದೋತರವನ್ನು ಒಗೆದುಕೊಂಡು ಗುಡಿಯಲ್ಲಿ ದೇವದರ್ಶನವಾದ ಮೇಲೆ ನರಹರಿಯು ತನ್ನ ಕೋಣೆಯಲ್ಲಿ ಧ್ಯಾನಕ್ಕೆ ಕುಳಿತ. ಹರಿದು ಹೋಗುವ ಹೊನಲಿಗೆ ಒಡ್ಡುಕಟ್ಟುವ ಪ್ರಯತ್ನವದು ಒಂದೇಮನೆ ನರಹರಿಯ ಅಂತರಂಗದಲ್ಲಿ ನಡೆದೇ ಇತ್ತು. ಸೂಕ್ಷ್ಮವಾದ ಭಾವನೆಗಳನ್ನೆಲ್ಲ ಗೆದ್ದು ತಾನು ಏಕಾಗ್ರಚಿತ್ತನಾದೆನೆನ್ನುವಷ್ಟರಲ್ಲಿಯೇ ಸೂಕ್ಷ್ಮತರವಾದ ಇನ್ನೊಂದು ರೂಪವನ್ನು ಧರಿಸಿ ಅದು ಅವನನ್ನು ಪೀಡಿಸುತ್ತಿತ್ತು. ಮನಸ್ಸಿಗೂ ಮಾಯೆಗೂ ಭೇದವೆಲ್ಲಿ?

ಈ ಒಳತೋಟಿಯಲ್ಲಿ ಅನೇಕ ಗಂಟೆಗಳು ಕಳೆದುಹೋಗಿರಬಹುದೆಂದು ನರಹರಿಗೆನಿಸಿತು. ಆದರೆ ಅವನು ಕಣ್ಣು ತೆರೆದು ನೋಡಿದಾಗ,—ಇನ್ನೂ ಅರ್ಧಗಂಟೆಯಷ್ಟು ಹೊತ್ತು ಕೂಡ ಕಳೆದಿರಲಿಲ್ಲ! ನರಹರಿಯು ಮತ್ತೆ

ಕಣ್ಣು ಮುಚ್ಚಿದ; ಮತ್ತೆ ತೆರೆದ. ಈ ವಿಧಾನವು ಹೀಗೆಯೇ ಸೂರ್ಯನು ನಡುನೆತ್ತಿಗೇರುವವರೆಗೆ ಸಾಗಿತು ಒಳಗೊಳಗೇ ರೋಗದಿಂದ ಬಳಲುವ ಗರಡಿ ಸಾಧಕನಂತೆ ತನ್ನ ಮನಸ್ಸಿನ ಚಂಚಲತೆಯಿಂದ ಆತನು ಹಣ್ಣಾದ. ಆದರೇನು, ಪರಿಪಕ್ವತೆಯು ಬರುವ ಕಾಲಕ್ಕೆ ಮಾತ್ರ ಬರುವದುಂಟಲ್ಲವೆ ?

ಭೋಜನಕ್ಕೆ ಮಾತ್ರ ನರಹರಿಯು ಬಹಳ ಹೊತ್ತು ಕಾಯಬೇಕಾಗಿರಲಿಲ್ಲ. ಸಮೀಪದ ಹಳ್ಳಿಯವರು ಒಂದು ಗುಡಿಯಲ್ಲಿ ದೇವರಿಗಾಗಿ ಅಭಿಷೇಕ ಮಾಡಿಸಿದ್ದರು. ಪೂಜೆ—ಅಭಿಷೇಕಗಳಾದ ಮೇಲೆ ಹತ್ತಿರದಲ್ಲಿ ಒಂದು ಮಾವಿನಮರದ ಬುಡದಲ್ಲಿಯೇ ಅಣಿಗೊಂಡ ಅಡಿಗೆಯಿಂದ ಎರಡು ಎಲೆಗಳನ್ನು ಬಡಿಸಿಕೊಂಡು ಆ ಮನೆತನದ ಮುಖ್ಯಸ್ಥನು ಸ್ವಾಮಿದಾಸರನ್ನು ಹುಡುಕುತ್ತ ಬಂದನು ಸ್ವಾಮಿದಾಸರ ಕೋಣೆಯಲ್ಲಿ ನೋಡಿದಾಗ ಅವರು ಅಲ್ಲಿರಲಿಲ್ಲ ಆಗ ಯಜಮಾನನು ನರಹರಿಯ ಕೋಣೆಯನ್ನು ಪ್ರವೇಶಿಸಿದನು. ಅವನೆದುರಿಗೆ ಅಡಿಗೆಯವನ ಕಡೆಯಿಂದ ಎಲೆಯನ್ನಿಡಿಸಿ "ಸ್ವಾಮಿಜಿಯವರೆಲ್ಲಿ ?" ಎಂದು ಮುರಾರಿಯಲ್ಲಿ ಕೇಳಿದನು ಅವರೀಗ ಬರಲಿರುವರೆಂದು ನರಹರಿಯಿಂದ ಉತ್ತರ ಬಂತು ಅಷ್ಟರಲ್ಲಿ ಸ್ವಾಮಿದಾಸರು ಬಂದೇಬಿಟ್ಟರು. "ನಮೋ ಭಗವತೇ ವಾಸುದೇವಾಯ" ಎಂಬ ಅವರ ಘೋಷಣೆಯನ್ನು ಯಜಮಾನನು ಕೇಳಿದೊಡನೆ ಅವನು ಭಯಭಕ್ತಿಯಿಂದ ನಮಸ್ಕರಿಸಿ "ಸ್ವಾಮಿಜಿ, ಇಂದು ನಮ್ಮಲ್ಲಿ ಅಭಿಷೇಕವಿದೆ ದೈವಾನುಗ್ರಹದಿಂದ ತಮ್ಮ ಸಾನ್ನಿಧ್ಯವು ನಮಗಿಲ್ಲಿ ದೊರತಿದೆ. ನಮ್ಮಿಂದ ಈ ಸೇವೆಯನ್ನು ಸ್ವೀಕರಿಸಿದರೆ ಕೃತಾರ್ಥರಾಗುವೆವು" ಎಂದನು.

"ಆಗಬಹುದು, ಸಂತೋಷ. ಅನ್ನದಾತಾ ಸುಖೀಭವ." ಎಂದು ಹಸನ್ಮುಖರಾಗಿ ತಲೆಯಲ್ಲಾಡಿಸಿ ಸ್ವಾಮಿದಾಸರು ಆಶೀರ್ವದಿಸಿದರು.

ಊಟ–ಉಡಿಗೆಗಳನ್ನು ಮುಗಿಸಿಕೊಂಡು ಆ ಅಭಿಷೇಕದ ಪರಿವಾರವು ತಿರುಗಿ ತಮ್ಮ ಹಳ್ಳಿಗೆ ತೆರಳಿತು. ಹೊತ್ತೇರಿಸಿಕೊಂಡು. ಸ್ವಾಮಿದಾಸರು ಹಾಗಿಯೇ ಕೆಲವು ಕಾಲ ತಮ್ಮ ಕೋಣೆಯಲ್ಲಿ ವಿಶ್ರಮಿಸಿದ್ದರು. ನರಹರಿಯು ತುಸು ಹೊತ್ತು ಅರಳಿಕಟ್ಟೆಯ ಮೇಲೆ ಒರಗಿಕೊಂಡಿದ್ದನು. ಸಂಜೆಯಾಗಿ ನದಿಯ ಆಚೆಯ ದಡದ ಮೇಲಿನ ಮರಗಳ ಗುಂಪಿನಲ್ಲಿ ರವಿಯು ಮರೆಯಾಗುವುದನ್ನು ನೋಡಿ ಅವನೆದ್ದು ತನ್ನ ಸಂಧ್ಯೆಯನ್ನೂ ಧ್ಯಾನವನ್ನೂ

ಮುಗಿಸಿದ; ಸ್ವಾಮಿದಾಸರೂ ಮುಗಿಸಿದರು. ರಾತ್ರಿಯಾಗಿ ಸ್ವಾಮಿದಾಸರು ಅರಳಿಕಟ್ಟೆಗೆ ಬಂದು ಕುಳಿತ ಮೇಲೆ ಮಾತಿಗೆ ಪ್ರಾರಂಭವಾಯಿತು. ಕುಶಲ ಪ್ರಶ್ನೆಗಳಾದ ಮೇಲೆ ನರಹರಿಯಿಂದ: "ತಾವು ತಪ್ಪುತಿಳಿಯದಿದ್ದರೆ ನಾನೊಂದು ಮಾತನ್ನು ಕೇಳಬೇಕೆಂದಿದ್ದೇನೆ."

"ಆಗಬಹುದು; ಅವಶ್ಯವಾಗಿ" ಎಂದು ಸ್ವಾಮಿದಾಸರು ಮುಗುಳು ನಗೆ ನಕ್ಕರು.

"ಈಗ ನಾನೊಬ್ಬ ಯುವತಿಯನ್ನು ಪ್ರೀತಿಸಿದ್ದೇನೆಂದು ತಿಳಿಯೋಣ. ಆಕೆ ನನಗೆ ಪಂಚಪ್ರಾಣವಾಗಿದ್ದಾಳೆ. ನನ್ನ ಪ್ರೀತಿಯು ದೈಹಿಕವಲ್ಲ. ಖರಿ ಕಾಮವಲ್ಲ ಪ್ರೇಮದ ಅಮರತೆಯೂ ಪಾವಿತ್ರ್ಯವೂ ಅದರಲ್ಲಿ ಒಡಮೂಡಿದೆ; ಒಂದು ವಿಧದಿಂದ ಅನಂತದ ದರ್ಶನವೇ ಅದು. ಇಂಥ ಪ್ರೀತಿಯಿಂದ ಮಾತ್ರ ನನ್ನ ಜೀವನವು ಪೂರ್ಣವಾದೀತೆಂದು ನನಗೆನಿಸುತ್ತದೆ ಇದು ನನಗೆ ದುರ್ಲಭ ವಾದರೆ ನಾನೇನು ಮಾಡಬೇಕು? ನನ್ನ ಬಾಳುವೆಯನ್ನು ಹೇಗೆ ಅಳವಡಿಸ ಬೇಕು?" ನರಹರಿಯು ಪ್ರಶ್ನೆಯನ್ನು ಅಂಜುತ್ತಂಜುತ್ತ ಕೇಳಿದ. ನಿರ್ಲಿಪ್ತ ರಾದ ಸ್ವಾಮಿದಾಸರು ಈ ಬಗೆಯ ಸಂಸಾರಸಾರೋದಯಕ್ಕೆ ಏನೆನ್ನುವರೋ ಎಂದು ಅವನು ಅಧೀರನಾಗಿದ್ದ.

ಪ್ರಶ್ನೆಯನ್ನು ಕೇಳಿ ಸ್ವಾಮಿದಾಸರು ತಮ್ಮ ಸಹಜರಮ್ಯವಾದ ನಗೆ ಯನ್ನು ನಕ್ಕರು. "ನನಗೆ ತುಸು ಗೂಢವಾದ ಪ್ರಶ್ನೆಯನ್ನೇ ನೀವು ಪ್ರಸ್ತಾಪಿ ಸಿದ್ದೀರಿ. ನಾನು ಪರಂಪರೆಯಲ್ಲಿ ಬೆಳೆದವ ಹಳೆಯ ರೀತಿಯಲ್ಲಿ ಮದುವೆ ಮಾಡಿಕೊಂಡು ಸಂಸಾರಮಾಡಿದವ ಆದರೂ ತಿಳಿದ ಮಟ್ಟಿಗೆ ಹೇಳುತ್ತೇನೆ. ಪ್ರೀತಿಗೆ ಎರಡು ಪರಿಗಳಿವೆಯೆಂಬುದನ್ನು ನೀವು ಒಪ್ಪುತ್ತೀರಾ? ಒಂದು ಕ್ಷಣಭಂಗುರ, ಇನ್ನೊಂದು ಅನಂತ; ಒಂದು ಮೋಹ, ಇನ್ನೊಂದು ನೇಹ; ಒಂದು ಕಾಮ, ಇನ್ನೊಂದು ಪ್ರೇಮ; ಒಂದು ದೇಹ, ಇನ್ನೊಂದು ಆತ್ಮ; ಇದು ನಿಮಗೆ ಒಪ್ಪಿಗೆಯೇ?"

"ಒಪ್ಪುತ್ತೇನೆ," ನರಹರಿ ಹೇಳಿದ.

ಪ್ರೀತಿಯನ್ನು ಇದೇ ದೃಷ್ಟಿಯಿಂದ ಎರಡುತೆರನಾಗಿ ಅವನೂ ವಿಂಗಡಿಸಿದ್ದ.

"ಒಳ್ಳೆಯದು ಹಾಗಿದ್ದರೆ ಈ ಪ್ರಶ್ನೆಯನ್ನು ಬಿಡಿಸುವುದು ಸುಲಭ" ಎಂದು ಸ್ವಾಮಿದಾಸರು ಮುಂದುವರಿದರು.

"ಮೊದಲು ಮೋಹದ ದೃಷ್ಟಿಯಿಂದ ವಿಚಾರಿಸೋಣ; ಈ ಮಾಯೆಯ ಬಲೆಯಲ್ಲಿ ಸಿಗದ ಮನುಜನಿಲ್ಲ. ಕ್ಷಣಭಂಗುರತೆಯನ್ನೇ ಅಮರವಾಗಿ ಮಾಡಬೇಕೆಂಬ ಹವ್ಯಾಸ ಇದು. ನಮ್ಮ ತಾರುಣ್ಯ ಕೊನೇವರೆಗೆ ಬಾಳಬೇಕು; ನಮ್ಮ ನಮ್ಮವರಿಗೆ ಮರಣ ಬರಲೇಬಾರದು; ನಾವು ಸುಖದಲ್ಲಿ ಲೋಲಾಡಬೇಕು; ಇದು ಈ ಮಾಯೆಯ ಮೂಲಮಂತ್ರ. ಆದರೆ ನೀವೇ ಹೇಳಿರಿ! ಬುದ್ಧಿಯಿಂದ ಈ ಮೋಹವನ್ನು ತಡೆಗಟ್ಟಬಾರದೇ? ನಮ್ಮ ನಮ್ಮವರಿರುವನಕ ಮೋಹವುಮತೆಯಿರಲಿ, ಆದರೆ ಪ್ರಜ್ಞೆಯಿಂದರಲಿ; ಇಲ್ಲದಾಗ ಮಾತ್ರ ಮರೆಯಬೇಕಲ್ಲವೆ? ಈ ವಿಷಯದಲ್ಲಿ ಆಗು–ಹೋಗುಗಳು ನಮ್ಮ ಕರ್ಮದ ಫಲ, ದೈವಸಂಕಲ್ಪದ ಫಲ. ಈ ದೈವಸಂಕಲ್ಪವನ್ನು ಮೀರಿಯೂ, ನಮ್ಮ ಮೋಹವನ್ನು ನಾವು ಹರಿಬಿಡಬೇಕೆ? ಹಾಗೆ ಹರಿಬಿಟ್ಟರೆ ಮೋಹವೇ ಭ್ರಾಂತಿ. ಇಂಥ ಭ್ರಾಂತಿಯ ಉನ್ಮಾದದಲ್ಲಿ ಎಷ್ಟು ಜನ ಸದ್ಗುಣಿಗಳು ಆತ್ಮಹತ್ಯ ಮಾಡಿಕೊಂಡಿಲ್ಲ, ಇಲ್ಲವೆ ತಮ್ಮ ಜೀವನವನ್ನು ಕಹಿಯಾಗಿಸಿಲ್ಲ? ಮೋಹದ ಈ ಪರಾತ್ಪರತೆಯನ್ನು ನೀವು ಒಪ್ಪುತ್ತೀರಾ?

"ಇಲ್ಲ. ಒಪ್ಪುವುದಿಲ್ಲ. ಆದರೆ ಮೋಹದ ವಸ್ತು ಹತ್ತಿರವಿದ್ದೂ ಸಿಗದಂತಾದರೆ?" ಎಂದು ನರಹರಿ ಕೇಳಿದ. ಅವನ ಮೊಗದಲ್ಲಿ ದೈನ್ಯವಿತ್ತು.

ಸ್ವಾಮಿದಾಸರು ತುಸು ನಕ್ಕರು. "ಆ ವಸ್ತು ಇಲ್ಲದಾಗುವ ಅನೇಕ ರೀತಿಗಳಲ್ಲಿ ಇದೂ ಒಂದು. ದೈವವು ತನ್ನ ಶಾಸನವನ್ನು ಸೃಷ್ಟಿನಿಯಮದ ಮೂಲಕ ವಿಧಿಸುತ್ತದೆ. ಇಲ್ಲವೆ ಸಮಾಜದ ಮುಖದಿಂದ ಅದನ್ನು ಹೊರಪಡಿಸುತ್ತದೆ. ಏನಿದ್ದರೂ ವಸ್ತುಸ್ಥಿತಿಯು ಒಂದೇ ಆಯಿತಲ್ಲ,—ವಸ್ತು ಕಣ್ಮರೆಯಾದಾಗ ಅದರ ವಿಷಯದಲ್ಲಿಯ ಮೋಹವನ್ನು ಹರಿಬಿಡಬೇಕೋ ಇಲ್ಲವೇ ಮರೆಯಬೇಕೋ ಎಂಬುದು?" ಎಂದು ಅವರು ಕೇಳಿದರು.

"ಹೌದು" ಎಂದು ನರಹರಿಯು ಪ್ರಯಾಸದಿಂದ ಉತ್ತರಕೊಟ್ಟ.

"ಇನ್ನು ಪ್ರೇಮದ ದೃಷ್ಟಿಯಿಂದ ನೋಡೋಣ!" ಸ್ವಾಮಿದಾಸರು ಹೇಳಿದರು. "ಪ್ರೇಮಕ್ಕೆ ಅನಂತದ ದರ್ಶನವಾಗುತ್ತದೆ. ಈ ವಸ್ತುವೆಂದರೆ ಪ್ರೇಮದ ಕಣ್ಣಿನಲ್ಲಿ ಅನಂತದ ಒಂದು ತುಣುಕು, ಪ್ರತೀಕ. ಅದು ನಿಮಗಿತ್ತ ಅನಂತದ ಅನುಭವದಿಂದ ತನ್ನ ಕೆಲಸವನ್ನು ಪೂರೈಸಿದಂತೆಯೇ ಸರಿ. ಅದರೊಡನೆ ಐಕ್ಯವನ್ನೂ ಸಾಮರಸ್ಯವನ್ನೂ ಹೊಂದುವ ಸಂದರ್ಭ

ಬಂದರೆ ಸರಿಯೇ ಸರಿ. ಹಾಗೇ ಹೊಂದಬೇಕು. ಆದರೆ ನಿಮ್ಮಲ್ಲಿ ಅನಂತದ ಹರಿವೆಯನ್ನು ಹುಟ್ಟಿಸಿ ನಿಮ್ಮ ನಿಲುಕಿನಾಚೆ ಆ ವಸ್ತುವು ಹೋಯಿತೆಂದು ತಿಳಿಯುವಾ. ಅದೆಲ್ಲಿ ಹೋಗುತ್ತದೆ? ಅನಂತದ ಒಂದು ಭಾಗವಾಗಿ ಇದ್ದೇ ಇರುತ್ತದೆ ಅನಂತವನ್ನು ನೆನೆದಾಗೆಲ್ಲ ನೀವು ಅದನ್ನೂ ನೆನೆಯುತ್ತೀರಿ. ಅದರಿಂದ ಪಡೆದ ಚೈತನ್ಯದಿಂದ ಪುನೀತರಾಗಿ ಅನಂತದ ಇನ್ನೊಂದು ಕಿಡಿಯೊಡನೆ ನೀವು ಸಾಮರಸ್ಯವನ್ನು ಸಾಧಿಸಬಹುದಲ್ಲ? ಒಂದು ಸುಂದರ ವಸ್ತುವು ಆನಂದದ ಶಾಶ್ವತ ನೆಲೆಯೆಂದು ನಿಮ್ಮ ಕೀಟ್ಸ್ ಕವಿ ಹೇಳಿದ್ದಾನಲ್ಲ! ಅದರ ಸಾಮೀಪ್ಯವನ್ನು ಕುರಿತು ಅವನು ಈ ಮಾತನ್ನು ಹೇಳಲಿಲ್ಲ; ಅದರಲ್ಲಿ ಅಡಕವಾಗಿದ್ದ ಅನಂತ ತತ್ವವನ್ನು ಕುರಿತು ಹೇಳಿದ. ಒಂದು ವಸ್ತುವಿನೊಡನೆ ಸಾಮರಸ್ಯವನ್ನು ನೀವು ಕಲಿಯುತ್ತೀರಿ ಅದು ಇಂಥದೇ ವಸ್ತುವಿನಿಂದ ಆಗಬೇಕೆಂದು ಹಟಹಿಡಿದರೆ ಪ್ರೇಮದಲ್ಲಿ ನೀನು ಅಧಿಕತರ ರೂಪವಾದ ಭ್ರಾಂತಿಯನ್ನು ಕೂಡಿಸಿದಂತಾಗಲಿಲ್ಲವೆ?"

ಅವರ ಮಾತಿನ ಸತ್ಯತೆಯು ನರಹರಿಗೆ ಹೊಳೆಯಿತು. "ದೇವರು ನನಗೆ ತಾವು ಹೇಳಿದ ಸತ್ಯವನ್ನು ಅರಗಿಸಲು ಸಾಮರ್ಥ್ಯವನ್ನು ಕೊಡಲಿ!" ಎಂದು ಅವನು ಮಾತು ಮುಗಿಸಿದ, ಅಂದು ರಾತ್ರಿಯೆಲ್ಲ ಅವನು ಸಮಾಧಾನದಿಂದ ನಿದ್ರೆಹೋದ ಅವನಲ್ಲಿ ನಟ್ಟ ದುಃಖದ ಸಸಿಯನ್ನು ಸ್ವಾಮಿದಾಸರು ಬೇರುಸಹಿತವಾಗಿ ಅಲ್ಲಾಡಿಸಿದ್ದರು.

ಎರಡನೆಯ ದಿನ ನಸುಕಿನಲ್ಲಿದ್ದ ನರಹರಿಯು ಮತ್ತೆ ತನ್ನ ಅನುಕ್ರಮವನ್ನು ತೀಡಿದ ಮೊದಲಿನ ದಿನಕ್ಕಿಂತ ಇಂದು ಧ್ಯಾನವು ಹಿತವಾಗಿತ್ತು ಅಲ್ಲಲ್ಲಿ ಶುಭಜ್ಯೋತಿಯ ಚಿಕ್ಕೆಗಳು ಅವನ ಕಣ್ಣೆದುರಿಗೆ ಕಟ್ಟಿದ ಕತ್ತಲೆಯ ಪರದೆಯನ್ನು ಭೇದಿಸುತ್ತಿದ್ದವು. ಮನಸ್ಸು ಇನ್ನೂ ಹೆಚ್ಚಾಗಿ ಹದಕ್ಕೆ ಬಂದಿತ್ತು. ಆದರೆ ಈ ಕತ್ತಲೆಯ ತೆರೆಯು ಎತ್ತಲಿಲ್ಲ. ಹಾಗೆಯೇ ದಟ್ಟವಾಗಿ ಬಿದ್ದುಕೊಂಡಿತ್ತು.

ಇಂದಿನ ಊಟದ ಪ್ರಶ್ನೆಯೂ ಸುಲಭವಾಗಿ ಬಿಟ್ಟಿತು. ಸ್ವಾಮಿದಾಸರು ಗುಡಿಯಲ್ಲಿ ಇಳಿದುಕೊಂಡಿದ್ದ ಸುದ್ದಿಯನ್ನು ಪೂಜಾರಿಯು ಹಳ್ಳಿಯಲ್ಲೆಲ್ಲ ಹರವಿದ್ದ. ಭಾವಿಕರೊಬ್ಬರು ಅಲ್ಲಿಗೆ ಬಂದು ಎರಡೆಲೆಗಳನ್ನು ಬಡಿಸಿಕೊಟ್ಟು ಹೋಗಿದ್ದರು.

ದಿನವೆಲ್ಲ ತನ್ನೊಳಗೇ ತಟಿಯುತ್ತಿರುವ ಇನ್ನೊಂದು ಪ್ರಶ್ನೆಯನ್ನು ನರಹರಿಯು ಅಂದು ರಾತ್ರಿ ಸ್ವಾಮಿದಾಸರೆದುರು ಮಂಡಿಸಿದ. "ಧ್ಯಾನದಲ್ಲಿ ಏಕಾಗ್ರತೆಯನ್ನು ಕಾಯುವದು ಹೇಗೆ? ಮನಸ್ಸಿನ ಮಂಗರೀತಿಗೆ ಕೊನೆಯೇ ಇಲ್ಲವಲ್ಲ? ಈ ವಿಷಯದಲ್ಲಿ ತಾವು ಅನುಸರಿಸಿರುವ ರೀತಿಯನ್ನು ತಿಳಿಸಬಲ್ಲಿರಾ? ದುಡುಕಿ ತಮಗೆ ರುಚಿಸದ ಪ್ರಶ್ನೆಯನ್ನು ಕೇಳಿದ್ದರೆ ಕ್ಷಮಿಸಿರಿ!" ಎಂದ ನರಹರಿ

"ಅದರಲ್ಲೇನು? ಹೇಳುತ್ತೇನೆ? ಮನಸ್ಸಿನ ಮೇಲೆ ನಮ್ಮ ಪ್ರಭುತ್ವವನ್ನು ಕೂಡಿಸುವದೆಂದರೆ ಗಾಳಿಯೊಡನೆ ಗುದ್ದಾಡಿದಂತೆ. ಈ ಇಪ್ಪತ್ತು ವರ್ಷ ಇದೇ ಸಾಧನೆಯಲ್ಲಿ ನಾನಿದ್ದೇನೆ. ಇಲ್ಲಿ ನೋಡಿರಿ!" ಎಂದು ತಮ್ಮ ಹಸಿಬೆಯೊಳಗಿದ್ದ ಓಂಕಾರಾಂತರ್ಗತ ಶ್ರೀವಿಷ್ಣುವಿನ ಚಿತ್ರವೊಂದನ್ನು ಸ್ವಾಮಿದಾಸರು ತೆಗೆದು ತೋರಿಸಿದರು. "ನಾನು ನಂಬಿದ್ದು ಈ ಸ್ವಾಮಿಯನ್ನು. ತಮತಮಗೆ ಪ್ರಿಯವಾದ ವಸ್ತುವನ್ನು ಭಕ್ತರು ಆರಾಧಿಸುತ್ತಾರೆ. ನಾನು ಈ ಪ್ರತೀತವನ್ನು ಆರಾಧಿಸಿದ್ದೇನೆ ದಿನಾಲು ಅನೇಕ ಗಂಟೆಗಳ ವರೆಗೆ ಈ ಚಿತ್ರವನ್ನು ಕೈಯಲ್ಲಿ ಹಿಡಿದುಕೊಂಡು ಅದನ್ನು ದಿಟ್ಟಿಸುತ್ತ ಕಾಲ ಕಳೆದಿದ್ದೇನೆ. ಹಾಗೆ ದೃಷ್ಟಿಸುವದರಲ್ಲಿ ಮನಸ್ಸಿನ ಎಲ್ಲ ಶಕ್ತಿಯನ್ನು ಕೇಂದ್ರೀಕರಿಸಿದ್ದೇನೆ. ಈಗ........ಈಗ"—ಇಲ್ಲಿ ಸ್ವಾಮಿದಾಸರ ದನಿಯು ಕಂಪಿಸಿತು—"ನನಗೆ ಚಿತ್ರದ ಆವಶ್ಯಕತೆಯಿಲ್ಲ ಕಣ್ಣು ಮುಚ್ಚಿದರೂ ಅಷ್ಟೆ; ತೆರೆದರೂ ಅಷ್ಟೆ. ಸ್ವಾಮಿಯನ್ನು ಎಲ್ಲೆಡೆಗೆ ಕಾಣುತ್ತಿದ್ದೇನೆ." ಎಂದು ಸ್ವಾಮಿದಾಸರು ಹೇಳಿದರು.

"ಹಾಗಿದ್ದರೆ ತಮಗೆ ಸಾಕ್ಷಾತ್ಕಾರವಾಗಿದೆಯಲ್ಲ?" ಎಂದ ನರಹರಿ

"ಅಲ್ಲ. ಇದನ್ನು ಸಾಕ್ಷಾತ್ಕಾರವೆಂದು ಹೇಳಲಾಗುವದಿಲ್ಲ. ಈಗ ತಾನೆ ನಾನು ಆತ್ಮದ ರಾಜ್ಯದಲ್ಲಿ ಕಾಲಿಡಹತ್ತಿದ್ದೇನೆ. ಸ್ವಾಮಿಯು ಕೃಪೆ ಮಾಡಿದರೆ ಆ ಕಾಲವೂ ಬರಬಹುದು" ಎಂದು ಸ್ವಾಮಿದಾಸರು ಹೇಳಿದರು.

"ನನ್ನೊಡನೆ ತಾವು ಎಷ್ಟು ಮುಕ್ತ ಮನಸ್ಸಿನಿಂದ ಮಾತಾಡುತ್ತಿದ್ದೀರಿ! ಎಲ್ಲ ಸಾಧಕರೂ ಹೀಗೆ ಮಾಡಿದರೆ ಸಮಾಜವು ಕ್ಷಣಮಾತ್ರದಲ್ಲಿ ಸುಧಾರಿಸೀತು!" ಎಂದು ನರಹರಿ ಉದ್ಗಾರ ತೆಗೆದ.

"ಆದರೆ ಸಮಾಜದಲ್ಲಿ ಎಲ್ಲರೂ ನಿಮ್ಮಂತೆ ಮುಮುಕ್ಷುಗಳಾಗಿರಬೇಕಲ್ಲ!" ಎಂದು ಸ್ವಾಮಿದಾಸರು ಮೆಲು ನಗೆ ನಕ್ಕರು.

"ಆ ಚಿತ್ರವನ್ನು ನನಗೆ ತಾವು ದಯಪಾಲಿಸಬಹುದೆ?" ಎಂದು ಕೇಳಿದ ನರಹರಿ.

ಸ್ವಾಮಿದಾಸರೆಂದರು: "ಅವಶ್ಯವಾಗಿ. ಆದರೆ ಅಂಧಾನುಕರಣವು ಬೇಡ ನಿಮಗೆ ಪ್ರೀತಿಯಿದ್ದ ಪ್ರತೀಕವನ್ನು ನೀವು ಆರಿಸಿರಿ. ನಾನು ವಿಧಾನವನ್ನು ಹೇಳಿದೆ. ಅಷ್ಟೆ." ಎಂದು ಆ ಚಿತ್ರವನ್ನು ಸ್ವಾಮಿದಾಸರು ನರಹರಿಯ ಕೈಯ್ಯಲ್ಲಿಟ್ಟರು.

ಅಂದು ರಾತ್ರಿಯಲ್ಲೆಲ್ಲ ನರಹರಿಯು ಓಂಕಾರ ವಿಷ್ಣುವನ್ನೇ ಕನಸಿನಲ್ಲಿ ಕಂಡ.

ಮೂರನೆಯ ದಿನವು ಬೆಳಗಾದಾಗ ನರಹರಿಯು ಮನಸ್ಸಿನಲ್ಲಿ ಉತ್ಸಾಹವು ತುಂಬಿ ತುಳುಕುತ್ತಿತ್ತು. ಅವನ ಶೋಧನಕ್ಕೆ ಈಗ ಒಂದು ಗುರಿಯು ನಿಲುಕಿದಂತಾಗಿತ್ತು. ಅಂದು ಮುಂಜಾನೆ ಅವನು ಧ್ಯಾನಕ್ಕೆ ಕುಳಿತಾಗ ಶ್ರೀ ವಿಷ್ಣುವಿನ ಚಿತ್ರವು ಅವನ ಕೈಯ್ಯಲ್ಲಿತ್ತು ಅದನ್ನು ಕುರಿತು ಅವನು ಧೇನಿಸ ಹತ್ತಿದ. ಈಗ ಒಂದು ಕಟ್ಟುನಿಟ್ಟನ್ನು ಹಿಡಿದು ತನ್ನ ಧ್ಯಾನವು ಸಾಗುತ್ತಿರುವುದರಿಂದ ಇಂದಿಲ್ಲ ನಾಳೆ ತನ್ನ ಗುರಿಯು ಸಫಲವಾಗಬಹುದೆಂದು ನರಹರಿಗೆ ಎನಿಸಿತು.

ಅಂದು ರಾತ್ರಿ ಸ್ವಾಮಿದಾಸರೊಡನೆ ಕಟ್ಟೆಯ ಮೇಲೆ ಕುಳಿತಾಗ ನರಹರಿಯು ಇನ್ನೊಂದು ಪ್ರಶ್ನೆ ಮಾಡಿದ. "ನಮ್ಮ ಕನಸಿನ ತುಣುಕುಮಿಣುಕುಗಳನ್ನು ಪರೀಕ್ಷಿಸಿದರೆ ನಮ್ಮೊಳಗೇ ಇನ್ನೊಂದು ರಾಜ್ಯವಿದೆಯೆಂದು ಭಾಸವಾಗುತ್ತಿದೆ. ಅದರಲ್ಲಿ ಕಾಲಿಡುವುದು ಹೇಗೆ?"

"ಈ ಪ್ರಶ್ನೆಗೆ ಒಂದಿಲ್ಲೊಂದು ದಿನ ಎಲ್ಲರೂ ಬರಬೇಕಾಗುತ್ತದೆ" ಸ್ವಾಮಿದಾಸರು ಹೇಳಿದರು "ಪ್ರತಿಯೊಬ್ಬ ವ್ಯಕ್ತಿಯಲ್ಲಿ ಉನ್ಮನದ ರಾಜ್ಯವೊಂದಿರುತ್ತದೆ. ಐಂದ್ರಿಯಕ ಜೀವನವನ್ನೂ ಪ್ರಾಣಗಳನ್ನೂ ಮನಸ್ಸನ್ನೂ ದಾಟಿ ಇದರ ಸೀಮಾರೇಖೆಯು ಕಾಣತೊಡಗುತ್ತದೆ. ಕಾವ್ಯ, ಲಲಿತಕಲೆ, ವಿಜ್ಞಾನ, ಕರ್ಮಕುಶಲತೆ, ಅನುಭಾವ,—ಇವೆಲ್ಲ ಈ ರಾಜ್ಯದ ಸೊತ್ತು.

ಆ ಮಹಾಜ್ಯೋತಿಯ ಕಣಗಳು ಮಾತ್ರ ಮಾನವ ನಿರ್ಮಿತ ಕಲೆಗಳಲ್ಲಿ ಕಾಣಿಸಿಕೊಳ್ಳುತ್ತವೆ. ಈ ಜ್ಯೋತಿಯ ನಾಡನ್ನು ಸೇರಲು ಧ್ಯಾನವೊಂದೇ ದಾರಿ. ಅದಕ್ಕನುರೂಪವಾದ ಜೀವಿತವಂತೂ ಮೊದಲಿಗೆ ಇದ್ದೇ ಇರಬೇಕು"

ಅಂದು ರಾತ್ರಿ ಸ್ವಾಮಿದಾಸರು ತಮ್ಮ ಕೋಣೆಗೆ ಹೋಗಿ ವಿಶ್ರಮಿಸಿದರೂ ನರಹರಿಯು ಕಟ್ಟೆಯ ಮೇಲೆ ಕುಳಿತೇ ಇದ್ದ. ಈ ಉನ್ಮನದ ರಾಜ್ಯವನ್ನು ಕುರಿತು ಯೋಚಿಸುತ್ತಿದ್ದ. ಅಕಸ್ಮಾತ್ತಾಗಿ ಮೋಡಗವಿದು ಆಗ ಒಂದು ಅಡ್ಡಮಳೆಗೆ ಆರಂಭವಾಯಿತು. ಕೋಲ್ಮಿಂಚಿನ ಥಳಕಿಗೂ ಗುಡುಗಿನ ಗರ್ಜನೆಗೂ ಪ್ರಾರಂಭವಾಯಿತು. ನರಹರಿಯು ನೋಡುತ್ತಿದ್ದ ಹಾಗೆ ಗುಡಿಯ ಕಳಸದ ತುದಿಗೆ ವರ್ತುಳಾಕಾರದ ಜ್ಯೋತಿಯೊಂದು ಹೊಳೆದು ಅಲ್ಲಿಯೇ ನಿಂತಿತು. ನರಹರಿಯು ವಿಸ್ಮಿತನಾಗಿ ಅದನ್ನು ದಿಟ್ಟಿಸಿ ನೋಡಿದ. ಅವನು ಖಾಸಗಾಂವಿಯ ಹತ್ತಿರದ ಗುಡಿಯಲ್ಲಿಳಿದಾಗ ಇದೇ ಬಗೆಯ ಜ್ಯೋತಿಯು ಅವನ ಕನಸಿನಲ್ಲಿ ಸುಳಿದು ದತ್ತಾತ್ರೇಯನ ಮೂರ್ತಿಯನ್ನು ಸುತ್ತುಗಟ್ಟಿತು. ಆದರೆ ಅದು ಇಂದು ಭೌತಿಕರೂಪವನ್ನು ತಳೆದಿರುವುದು ಹೇಗೆ? ನರಹರಿಗೆ ಇದೊಂದು ಒಡೆಯದ ಒಗಟವಾಯಿತು ಆ ಜ್ಯೋತಿಯು ಕಳಸದ ಮೇಲಿರುವವರೆಗೆ ಸ್ತಂಭಿತನಾಗಿ ನರಹರಿಯು ಅದನ್ನು ಎವೆಯಿಕ್ಕದೆ ನೋಡಿದ ಐದಾರು ನಿಮಿಷಗಳ ವರೆಗೆ ಹಾಗೆಯೇ ಹೊಳೆದು ಮಾಯವಾಯಿತು ಮುಂದೆ ಮಿಂಚೂ ಮಳೆಯೂ ಕ್ರಮೇಣ ಕಡಮೆಯಾದವು. ಈ ವಿಷಯವನ್ನು ಸ್ವಾಮಿದಾಸರಲ್ಲಿ ಅರಿಕೆ ಮಾಡಬೇಕೆಂಬ ಲವಲವಿಕೆಯು ನರಹರಿಯಲ್ಲಿ ಹೆಚ್ಚಾಯಿತು ಅವನು ಮೆಲ್ಲನೆ ಹೋಗಿ ಸ್ವಾಮಿದಾಸರನ್ನೆಬ್ಬಿಸಿ ವಿನಯದಿಂದ ಅವರ ಕ್ಷಮೆ ಬೇಡಿ ನಡೆದ ಸಂಗತಿಯನ್ನೆಲ್ಲ ವಿವರಿಸಿದನು. ತನ್ನ ಕನಸಿನಲ್ಲಿ ಕಂಡ ಬದುಕಿಗೂ ಇದಕ್ಕೂ ಇರುವ ಸಾಮ್ಯವನ್ನು ತಿಳಿಯಪಡಿಸಿ ಇದು ಹೇಗೆ? ಎಂದು ಪ್ರಶ್ನೆ ಕೇಳಿದನು

ತಮ್ಮ ಹಾಸಿಗೆಯ ಮೇಲೆ ಶಾಂತಚಿತ್ತರಾಗಿ ಎದ್ದು ಕುಳಿತ ಸ್ವಾಮಿದಾಸರು ಹೇಳಿದರು: "ಇದೊಂದು ಭೌತಿಕ ಸೃಷ್ಟಿಯಲ್ಲಿಯ ಚಮತ್ಕೃತಿ. ಇದರ ವಿವರಗಳನ್ನು ವಿಜ್ಞಾನಿಗಳು ಕಂಡುಹಿಡಿಯಬೇಕು. ಇದಕ್ಕೂ ನೀನು ಕನಸಿನಲ್ಲಿ ಕಂಡ ಜ್ಯೋತಿಗೂ ಇರುವ ಸಂಬಂಧ ಅಷ್ಟೇನೂ ನಿಕಟವಲ್ಲ. ಅದು ತೋರಿಕೆಯ ಸಂಬಂಧ ಮಾತ್ರ. ಆದರೂ ಇದರಲ್ಲಿ ಒಂದು ಮಾತಿದೆ.

ಪ್ರತಿಸಲ ಮಳೆ ಬಿದ್ದು ನಿಂತಿದಾಗ ಹೀಗೆ ಜ್ಯೋತಿ ದರ್ಶನವಾಗುವುದಿಲ್ಲ. ಇದೇ ಸಲ ಅದೇಕೆ ಸಂಭವಿಸಬೇಕು? ಈ ಘಟನೆಯಲ್ಲಿ ನಿನ್ನ ನಿಮಿತ್ತವೂ ಸಮಾವೇಶವಾಗಿದೆಯೆಂದು ನಾವೇಕೆ ತಿಳಿಯಬಾರದು?" ಎಂದು ಸ್ವಾಮಿದಾಸರು ಕೇಳಿದರು. ಅವರ ಮಾತಿನ ತಿರುಳನ್ನು ನರಹರಿಯು ಮನಸ್ಸಿನಲ್ಲಿ ತೂಗುತ್ತ ತನ್ನ ಕೋಣೆಯಲ್ಲಿ ಮಲಗಿಕೊಂಡ. ನಾಲ್ಕನೆಯ ದಿನವು ಬೆಳಗಾಯಿತು. ಅಂದು ಮಾತ್ರ ಸ್ವಾಮಿದಾಸರಿಗೂ ತನಗೂ ಉಪವಾಸವೇನೋ ಎಂದು ನರಹರಿಯು ತವಕಗೊಂಡ. ಮಧ್ಯಾಹ್ನದ ಒಂದು ಗಂಟೆಯಾದರೂ ಗುಡಿಯ ಕಡೆಗೆ ಯಾರೂ ಸುಳಿಯಲಿಲ್ಲ. ಪೂಜಾರಿಯು ತನ್ನ ಕೆಲಸವನ್ನು ಮುಗಿಸಿಕೊಂಡು ಅದಾವಾಗಲೋ ಹೋಗಿಬಿಟ್ಟಿದ್ದ. ತಮ್ಮ ಆಹ್ನಿಕವನ್ನು ಮುಗಿಸಿಕೊಂಡು ತಿರುಗಿ ಬಂದಿದ್ದ ಸ್ವಾಮಿದಾಸರು ತಮ್ಮ ಕೋಣೆಯಲ್ಲಿ ವಿಶ್ರಮಿಸಿದರು. ಊಟ ದೊರೆಯಬಹುದೋ ಇಲ್ಲವೋ ಎಂಬಾವ ಮಾತೂ ಅವರನ್ನು ಬಾಧಿಸಲಿಲ್ಲ. ನರಹರಿಯು ತನ್ನ ಕೋಣೆಯಲ್ಲಿ ಕುಳಿತ. ಮುಂದೆ ಇಳಿಹೊತ್ತಾದಾಗ ಕಟ್ಟೆಯ ಮುಂದೆ ತಿರುಗಾಡುತ್ತಿದ್ದ ಸ್ವಾಮಿದಾಸರು ನಗುತ್ತ ನರಹರಿಯನ್ನು ಕರೆದರು. "ಇಲ್ಲಿ ನೋಡಿರಿ! ನೀವು ಹೊರಗೆ ಹಾಕಿಸಿಕೊಂಡ ತೋಟದಿಂದ ಇಂದು ನಮಗೆ ಹಣ್ಣುಹಂಪಲು ಬರುವ ಹಾಗೆ ಕಾಣುತ್ತದೆ! ಸ್ವಾಮಿಯು ಇಂದು ನಮಗೆ ಫಲಾಹಾರ ಮಾಡಿಸಬೇಕೆಂದಿದ್ದಾನೆ!"

ನರಹರಿಯು ಹೊರಗೆ ಬಂದು ನೋಡಿದ—ಅವನನ್ನು ಬಾರುಕೋಲಿನಿಂದ ಹೊಡೆದ ಆ "ವ್ಯಕ್ತಿ"ಯು ಕೆಲವು ಹಣ್ಣುಗಳನ್ನು ಧೋತರದಲ್ಲಿ ಕಟ್ಟಿಕೊಂಡು ಇನ್ನೂ ಕೆಲವನ್ನು ಕೈಯಲ್ಲಿ ಹಿಡಿದು ಗುಡಿಯ ಕಡೆಗೆ ಬರುತ್ತಿತ್ತು. ಹಿಂದಕ್ಕೊಮ್ಮೆ ಹೊತ್ತ ಹರಕೆಯನ್ನು ಪೂರೈಸಲು ಮೂರನೆಯ (ಆ 'ವ್ಯಕ್ತಿ'ಯು) ಇಂದು ಈಶ್ವರಾಲಯಕ್ಕೆ ಬಂದಿದ್ದ. ಗುಡಿಯಲ್ಲಿ ಹೋಗಿ ಗರ್ಭಗುಡಿಗೆ ಬೀಗ ಹಾಕಿದ್ದರೂ ಕಿಂಡಿಯೊಳಗಿಂದ ದೇವ ದರ್ಶನವನ್ನು ತೆಗೆದುಕೊಂಡು ಸಾಷ್ಟಾಂಗ ಹಾಕಿ—ಹೊರಗೆ ಬಂದು ಸ್ವಾಮಿದಾಸರನ್ನು ವಂದಿಸಿ "ಮಹಾರಾಜ್, ಫಲಗಳನ್ನು ತಂದಿದ್ದೇನೆ. ಸ್ವೀಕರಿಸಬೇಕು" ಎಂದು ಬಿನ್ನವಿಸಿಕೊಂಡ. ಸ್ವಾಮಿಯ ನಾಮವನ್ನು ನೆನಸುತ್ತ ಮಾರುತಿಯನ್ನು ಆಶೀರ್ವದಿಸಿ ಸ್ವಾಮಿದಾಸರು ಅವುಗಳನ್ನು ಸ್ವೀಕರಿಸಿದರು. ನರಹರಿಯನ್ನು ನೋಡಿದೊಡನೆ ಮಾರುತಿಯು ಗಾಬರಿಯಾದ. ನೆಲಕ್ಕೆ ನಟ್ಟ ಅವನ

ದೃಷ್ಟಿಯೇ ಮೇಲಕ್ಕೇಳದಾಯಿತು ಕೊನೆಗೆ ಅತಿಪ್ರಯಾಸದಿಂದ “ತಾವು ಈ ಹಣ್ಣುಗಳನ್ನು ಸ್ವೀಕರಿಸಬೇಕು” ಎಂದು ಹೇಳಿದ ಮಾರುತಿ. “ಸ್ವಾಮಿಜಿಯವರಿಗೆ ಮುಟ್ಟಿದ ಮೇಲೆ ನನಗೂ ಬಂದ ಹಾಗಾಯಿತು” ಎಂದು ನರಹರಿಯು ಅವನನ್ನು ನಗುತ್ತ ಕಳಿಸಿಕೊಟ್ಟ ಸ್ವಾಮಿದಾಸರೂ ನರಹರಿಯೂ ಅಂದು ಆ ಹಣ್ಣುಗಳನ್ನು ಸೇವಿಸಿದಾಗ ಸಂಜೆಯಾಗುತ್ತ ಬಂದಿತು.

ಅಂದು ರಾತ್ರಿ ನರಹರಿಯು ಕೇಳಬೇಕೆಂದರೆ ಒಂದೇ ಪ್ರಶ್ನೆಯುಳಿದಿತ್ತು. ಆವನು ಅದನ್ನು ಕೇಳಿಬಿಟ್ಟ. “ಲೋಕದಲ್ಲಿ ಪಾಪ, ಅನ್ಯಾಯ, ನೀಚತನಗಳೂ ದೇವಜನಿತವೆಂದು ತಿಳಿಯಬೇಕೆ? ಪರಮಾತ್ಮನು ಈ ಕೆಡುಕಿನ ತತ್ವಗಳನ್ನು ಹುಟ್ಟಿಸಿದ್ದರೆ ಅದರ ರಹಸ್ಯವೇನು? ಮಾನವೀಯ ಸುಖ–ದುಃಖಗಳನ್ನು ಮೀರಿ ಒಂದು ಮಹದಾನಂದವಿದೆಯೆಂದು ಕೇಳುತ್ತೇನೆ ಅದರ ಅಸ್ತಿತ್ವವನ್ನು ಒಪ್ಪಿಕೊಳ್ಳುತ್ತೀರಾ? ಇದ್ದರೆ ಅದನ್ನು ಪಡೆಯುವ ಬಗೆ ಯಾವುದು?”

“ಈಗ ನೀವು ಮುಖ್ಯ ವಿಷಯಕ್ಕೆ ಬಂದ ಹಾಗಾಯಿತು!” ಎಂದು ಮಂದಸ್ಮಿತರಾಗಿ ಸ್ವಾಮಿದಾಸರು ಹೇಳಿದರು. “ಅನ್ಯಾಯ—ಪಾಪಗಳ ರಚನೆಯು ಮಾನವನ ವ್ಯಕ್ತಿತ್ವಕ್ಕೆ ಒರೆಗಲ್ಲಾಗಿ ಪರಿಣಮಿಸುತ್ತದೆ. ದೇವರ ಈ ವಿಶ್ವಲೀಲೆಯಲ್ಲಿ ಅನುಕೂಲತೆಗಳಿದ್ದಂತೆ ಆತಂಕಕ್ಕೂ ಒಂದು ಸ್ಥಾನವಿದೆ—ಇಲ್ಲದಿದ್ದರೆ ಲೀಲೆಯೆಲ್ಲಿಂದ ಬಂತು? ಬೆಳಕಿನ ಸ್ವರ್ಲೋಕದಿಂದ ಕತ್ತಲೆಯ ರಸಾತಳಕ್ಕಿಳಿದ ಚೈತನ್ಯವು ಮತ್ತೆ ಬೆಳಕಿನ ಸೀಮೆಗೆ ಏರಬೇಕಾಗಿದೆ. ಒಂದು ಧಾತು ಶುದ್ಧವಾಗುವಾಗ ತೊಳೆದು ಹೋಗುವ ಕಿಲ್ಮಷಗಳಂತೆ ಮನುಷ್ಯನ ಪಾಪಗಳೂ ನೀಚವೃತ್ತಿಯೂ ಕ್ರಮೇಣ ಕಳೆದುಹೋಗಬೇಕು. ಮಾನವಜಾತಿಯ ಪ್ರಗತಿಯು ಕಟ್ಟಿಟ್ಟದ್ದು. ಅದರಂತೆ ಪ್ರತಿಯೊಬ್ಬ ಮಾನವನ ಮುಕ್ತಿಯು ಜನ್ಮಸಿದ್ಧವಾಗಿದೆ. ಇದನ್ನು ತಿಳಿದು ಜೀವನದಲ್ಲಿ ಅಧೀರನಾಗದೆ, ಮನಸ್ಸನ್ನು ಕಹಿಗೊಳಿಸದೆ ವಿಮಲಾಂತಃಕರಣದಿಂದ ಇಟ್ಟ ಗುರಿಯೆಡೆಗೆ ಸಾಗುವವನೇ ಆತ್ಮವೀರ.”

“ಇನ್ನು ಆನಂದದ ವಿಷಯ?” ಎಂದು ನರಹರಿ ಕೇಳಿದ.

“ಹೇಳುತ್ತೇನೆ” ಎಂದು ಸ್ವಾಮಿದಾಸರು ಮುಂದುವರಿದರು: “ಈ ಆನಂದವೇ ಸ್ವಾಮಿಯ ಮೂಲ ಸ್ವರೂಪವೆಂಬುವದರಲ್ಲಿ ಸಂಶಯವಿಲ್ಲ. ಆದರೆ

ಅದನ್ನು ನಾನಿನ್ನೂ ಪಡೆಯಬೇಕಾಗಿದೆ. ನನಗೆ ಅದು ದೊರೆತಿದ್ದರೆ ಇಷ್ಟ ರಲ್ಲಿ ಅದರ ಅನುಭವವನ್ನು ನಿಮಗೆ ಕೊಡುತ್ತಿದ್ದೆ. ಆದರೆ ಇಂದಿಲ್ಲ ನಾಳೆ ದೊರೆಯುವುದೆಂಬ ಶ್ರದ್ಧೆಯಿಂದ ನನ್ನ ಬಾಳನ್ನು ಮುಂದೆ ಸಾಗಿಸಿದ್ದೇನೆ."

ಒಂದು ಕ್ಷಣಹೊತ್ತು ಸ್ವಾಮಿದಾಸರು ಮೌನದಿಂದಿದ್ದರು ಅವರ ಜೀವನದ ಅಪೂರ್ಣತೆಯು ಒಂದು ವಿಷಾದದ ತಂತಿಯನ್ನು ಅವರಲ್ಲಿ ಮೀಟು ತ್ತಿತ್ತು. ಅದನ್ನು ಇನ್ನಿಷ್ಟು ಜಾಗ್ರತಗೊಳಿಸದಿರುವುದೇ ವಿಹಿತವೆಂದು ತಿಳಿದು ನರಹರಿಯು ಸುಮ್ಮನಾದ. ತಾನು ಊರು ಬಿಟ್ಟ ಮೇಲಿನ ಈ ಐದು ದಿನ ಗಳಲ್ಲಿ ನರಹರಿಯ ಜೀವನದಲ್ಲಿ ಎಷ್ಟೊಂದು ಪ್ರಗತಿಯಾಗುತ್ತಿತ್ತು. ಜೀವನದ ಐದು ಸೂತ್ರಗಳನ್ನು ಅವನು ಐದು ದಿನಗಳಲ್ಲಿ ಕಂಡುಕೊಂಡಿದ್ದ. ಅನ್ನ, ರಾಗ, ಧ್ಯಾನ, ವಿಜ್ಞಾನ, ಆನಂದ,—ಜೀವನದ ಸೋಪಾನಕ್ಕೆ ಈ ಐದು ಮೆಟ್ಟಿಲುಗಳಿದ್ದವು ಅನ್ನದ ಸಮಸ್ಯೆಯನ್ನು ಬಿಡಿಸಿದವ ರಾಗರಸಿಕನಾಗಬಲ್ಲ; ರಾಗ ರಸಿಕನಾದವ ಧ್ಯಾನಿಯಾಗಬಲ್ಲ; ಧ್ಯಾನಿಯಾದವ ಅನುಭಾವಿಯಾಗ ಬಲ್ಲ; ಅನುಭಾವಿಯಾದವ ಶರಣನಾಗಬಲ್ಲ; ಅರುಣನು ಏಳು ಕುದುರೆಗಳನ್ನು ತನ್ನ ಅಂಕಿತದಲ್ಲಿರಿಸಿಕೊಂಡಂತೆ ಮಾನವನು ಈ ಐದು ತತ್ತ್ವಗಳನ್ನು ಗೆದ್ದಾಗ ಅವನ ಮಂಗಳೋದಯವಾಗುವುದರಲ್ಲಿ ಸಂಶಯವಿಲ್ಲ ಇಂಥ ಮಂಗಲ ಪ್ರಭಾ ತವು ತನ್ನದಾಗಲಿಯೆಂದು ನರಹರಿ ಎಂದುಕೊಂಡ. ಇವೇ ಮೊದಲಾದ ವಿಚಾರ ಗಳಲ್ಲಿ ಅಂದು ರಾತ್ರಿ ಅವನಿಗೆ ನಿದ್ದೆಯೇ ಹತ್ತಲಿಲ್ಲ.

---

## ಪ್ರಕರಣ ೫೧:

## ಕುದುರೆಯ ಸವಾರ

ನರಹರಿಯು ಇನ್ನೂ ನಾಲ್ಕೈದು ದಿನಗಳನ್ನು ಗುಡಿಯ ಆಶ್ರಮದಲ್ಲಿ ಕಳೆದ. ಈ ಅವಧಿಯಲ್ಲಿ ಅವನು ಗ್ರಹಿಸಿದ್ದ ಮೂಲ ತತ್ವಗಳು ಇನ್ನಿಷ್ಟು ದೃಢವಾದವು ಸ್ವಾಮಿದಾಸರ ಸಹವಾಸದಲ್ಲಿ ಅವನ ಶ್ರದ್ಧೆಯು ಬೆಳೆಯಿತು; ಧ್ಯಾನವು ಕೊನರಿತು. ಊರನ್ನು ನರಹರಿಯು ಮರೆತುಬಿಟ್ಟಿದ್ದ. ಒಂದು ವೇಳೆ ಕುಸುಮಾನನ್ನೂ ಸಹ ಮರೆತಿದ್ದ ಎಂದು ಹೇಳಿದರೆ ಸಲ್ಲುವದು. ಕೇಶವ

ದೇವರ ಗುಡಿಯ ಭಾವಿಯಲ್ಲಿ ಜಿಗಿಯಲು ನಡೆದ ನರಹರಿಯೆಲ್ಲಿ; ಸಂಸಾರ ಸಮುದ್ರವನ್ನೀಸಿ ಜಯಿಸಲು ಟೊಂಕ ಕಟ್ಟಿದ ಈ ನರಹರಿ ಎಲ್ಲಿ! ತನ್ನೊಳ ಗಾದ ಪ್ರಗತಿಯನ್ನು ಕಂಡು ನರಹರಿಗೇ ಆಶ್ಚರ್ಯವಾಗಿತ್ತು.

ಅಲ್ಲ, ತಾವು ಗುರುಸ್ಥಾನಕ್ಕೆ ಅರ್ಹರಲ್ಲವೆಂದು ಸ್ವಾಮಿದಾಸರೇ ಹೇಳಿ ದ್ದರು ಸ್ವಾಮಿದಾಸರು ಶಿಷ್ಯರನ್ನು ಮಾಡಿಕೊಳ್ಳುವ ಆತುರತೆಯುಳ್ಳ ಒಬ್ಬ 'ಗುರು ಮಹರಾಜ' ರಾಗಿದ್ದರೆ? ಎಂಬ ಭೀತಿಯು ಅವರ ಭೆಟ್ಟಿಯಾದಾಗಿ ನಿಂದ ನರಹರಿಯ ಮನದೊಳಗಿತ್ತು. ಅಂತೇ ಅವನು ಗಾಡಿಯಿಂದ ಅವರೊ ಡನೆ ಬ್ರಹ್ಮಪುರಿಗೆ ಬಂದಿರಲಿಲ್ಲ ಮುಂದೆ–ಬರುವ ಪ್ರಸಂಗ ಬಂದಾಗ–ಸ್ವಾಮಿ ದಾಸರು ಅವನೊಡನೆ ಆಪದ್ಬಾಂಧವನಂತೆ ನಡೆದಿದ್ದರು, ಹಿರಿಯ ಸ್ನೇಹಿತನಂತೆ ಅವನನ್ನು ನೋಡಿಕೊಂಡಿದ್ದರು. ಒಂದು ದಿನ 'ಗುರು' ಗಳ ಬಗ್ಗೆ ಪ್ರಶ್ನೆ ಹೊರಟಾಗ,–ತಾವು ಎಲ್ಲರ ಶಿಷ್ಯರೂ ಅಹುದು, ಯಾರ ಗುರುವೂ, ಅಲ್ಲವೆಂದು ಸ್ವಾಮಿದಾಸರು ಹೇಳಿದ್ದರು. ಇದರಿಂದ ಅವರ ವಿಷಯದಲ್ಲಿ ನರಹರಿಯ ಆದರವು ಹೆಚ್ಚಿತ್ತು.

ನಿನ್ನ ಭವಿತವ್ಯವೇನು? ಎಂದು ಯಾರಾದರೂ ಈ ಸಮಯದಲ್ಲಿ ನರ ಹರಿಗೆ ಕೇಳಿದ್ದರೆ ಅವನು ಹೀಗೆ ಹೇಳುತ್ತಿದ್ದ: ಸ್ವಾಮಿದಾಸರ ಒಪ್ಪಿಗೆಯಿ ದ್ದರೆ ಅವರ ಬೆನ್ನು ಹತ್ತಿ ಹೀಗೆಯೇ ಸಾಗುತ್ತೇನೆ; ಸಾಧನೆಯಲ್ಲಿ ಈ ಜೀವ ನವನ್ನು ಕಳೆಯುತ್ತೇನೆ; ನನಗೆ ಸಂಸಾರದಲ್ಲಿ ಸಿಕ್ಕುಬೀಳುವ ಆಸೆಯಿಲ್ಲ; ಕುಸುಮಾ ದೊರೆತ್ತಿದ್ದರೆ ಅದೊಂದು ರೀತಿಯಿಂದ ನನ್ನ ಹಾದಿ ಬೇರೆಯಾಗು ತ್ತಿತ್ತು. ಆದರೆ ಈಗ ಕುಸುಮಾನನ್ನು ಮರೆಯಲು ಸಹ ನಾನು ಸಿದ್ಧನಿ ದ್ದೇನೆ. ನಾನು ಆರಾಧಿಸುವ ಅನಂತದಲ್ಲಿ ಕುಸುಮಾನೂ ಲೀನಳಾಗಿದ್ದಾಳೆ.

ಈ ಹದಕ್ಕೆ ಆಗ ನರಹರಿಯ ಮನಸ್ಸು ಬಂದಿತ್ತು- ಆದರೆ ದೈವ ಗತಿಯು ಬೇರೆಯಾಗಿತ್ತು.

ಒಂದು ದಿನ ಸಂಜೆಗೆ ಹೊಳೆಯ ದಂಡೆಯ ಗುಂಟ ತಿರುಗಾಡುತ್ತ ನರಹ ರಿಯು ನಡೆದಿದ್ದ. ಬ್ರಹ್ಮಪುರಿಯಿಂದ ಒಂದೆರಡು ಮೈಲು ದೂರ ಅವನು ಹೋಗಿರಬೇಕು, ಅಷ್ಟರಲ್ಲಿ ಒಬ್ಬರು ಕುದುರೆಯನ್ನೇರಿ ಅದನ್ನು ಜೋರಾಗಿ ಓಡಿಸುತ್ತ ತನ್ನೆದುರಿಗೇ ಬರುತ್ತಿರುವದು ಅವನಿಗೆ ಕಂಡಿತು. ಕುದುರೆಯನ್ನೇರಿ ಇನ್ನೊಬ್ಬರು ಅವರನ್ನು ಹಿಂಬಾಲಿಸಿದ್ದರು.

ಇವರಾರೆಂದು ಯೋಚಿಸುತ್ತ ನರಹರಿಯು ತುಸು ಹೊತ್ತು ಅಲ್ಲಿಯೇ ನಿಂತ. ಕುದುರೆಗಳು ಅವನ ಹತ್ತಿರದಲ್ಲಿಯೇ ಬಂದವು. ದೊಡ್ಡ ಕುದುರೆಯನ್ನು ಒಬ್ಬ ತರುಣಿಯು ಏರಿದ್ದಳು. ಅವಳ ಹಿಂದೆ ಕುದುರೆಯ ಮೇಲೆ ಆ 'ವ್ಯಕ್ತಿ'—ಮಾರುತಿ—ಸಾಗಿದ್ದ.

ನರಹರಿಯನ್ನು ನೋಡಿದೊಡನೆ ಆ ತರುಣಿಯು ಕುದುರೆಯ ಮೇಲಿಂದ ಇಳಿದು ಆಶ್ಚರ್ಯದಿಂದ: "ಓಹೋ! ಮಿಸ್ಟರ್ ಮುನವಳ್ಳಿ! ನೀವು ಇಲ್ಲಿ ಏನು ಮಾಡುತ್ತಿದ್ದೀರಿ? ಮಾರುತಿ, ಇವರೇ ಏನು ನೀನು ಹೇಳಿದ ಅತಿಥಿಗಳು?" ಎಂದು ನುಡಿದಳು. ಮಾರುತಿಯು "ಜೀ ಸರಕಾರ್!" ಎಂದು ಉತ್ತರ ಕೊಟ್ಟ. ಅರ್ಥಾತ್ ಮಾತೆಲ್ಲ ಮರಾಠಿಯಲ್ಲಿತ್ತು.

"ನನ್ನ ಹೆಸರು ಮಿಸ್ ಪಂಡಿತ್." ಆ ತರುಣಿಯು ಹೇಳಿದಳು. "ನಾನೂ ನಿಮ್ಮೊಡನೆ ಫರ್ಗ್ಯುಸನ್ನಿನಲ್ಲಿ ಹೋದ ವರ್ಷ ಪ್ರಿವ್ಹಿಯಸ್ಸಿನಲ್ಲಿದ್ದೆ. ನೀವು ಸ್ಕಾಲರ್ ಹಾಗು ಸ್ಪೀಕರ್! ನಿಮ್ಮ ಪರಿಚಯವು ಕಾಲೇಜಿನಲ್ಲಿ ಯಾರಿಗಿಲ್ಲ! ಈ ವರ್ಷ ನೀವು ಫರ್ಗ್ಯುಸನ್ನಿನಲ್ಲಿಲ್ಲ ಡೆಕ್ಕನ್ ಕಾಲೇಜಿನಲ್ಲಿ ಇಂಟರ್ ಓದುತ್ತಿದ್ದೀರಾ?"

ಈ ವರ್ಷ ಕೆಲವು ಕಾರಣಗಳ ಮೂಲಕ ಯಾವ ಕಾಲೇಜಿಗೂ ಹೋಗುವದಾಗಲಿಲ್ಲವೆಂದು ನರಹರಿಯು ಉತ್ತರಕೊಟ್ಟ.

"ಹೀಗೇನು? ಹಾಗಾದರೆ ನಮ್ಮ ತಂದೆಯ ಕಡೆಗೆ ಪತ್ರ ಬಂದಿದ್ದ ಮುನವಳ್ಳಿ ನೀವೇ ಏನು ಮತ್ತೆ? 'ಮೋಗಾವಿ' ಎಂಬ ಊರಿನಿಂದ ಖಾಸಗಾಂವಿಗೆ ಹೊರಟು ಬಂದ ಮುನವಳ್ಳಿಯನ್ನು ಹುಡುಕಲು ನಮ್ಮ ತಂದೆಯ ಸ್ನೇಹಿತರು ಬರೆದಿದ್ದಾರೆ. ಗುಡಿಯಲ್ಲಿ ಒಬ್ಬರಿದ್ದಾರೆಂದು ಮಾರುತಿ ಹೇಳಿದ. ಅದನ್ನು ಪರೀಕ್ಷಿಸಲೆಂದೇ ನಾನಿಲ್ಲಿ ಬಂದಿದ್ದು." ಎಂದಳು ಆ ತರುಣಿ.

"ಯಾರು ಪತ್ರ ಬರೆದಿದ್ದಾರೆ?" ಎಂದು ನರಹರಿ ಕೇಳಿದ ಗತಜನ್ಮದ ನೆನಪುಗಳಂತೆ ಮೊಗ್ಗಾವಿಯು ಮತ್ತೆ ಅವನ ಸ್ಮೃತಿಪಟಲದ ಮೇಲೆ ಏಳಹತ್ತಿತ್ತು.

"ನೀಡಗುಂದೀ ಎಂಬ ವಕೀಲರು. ಅವರ ಪರಿಚಯ ನಿಮಗಿದೆಯಲ್ಲವೇ?" ಎಂದು ಆ ತರುಣಿಯು ಕೇಳಿದಳು.

ನರಹರಿಯು ಸುಮ್ಮನಿದ್ದ. ತಾನು ಕೊಸರಿಕೊಂಡು ಪಾರಾಗಿದ್ದ ಬಳ್ಳಿಯು ಈಗ ಮತ್ತೆ ತನ್ನ ಸುತ್ತು ಪಸರಿಸಹತ್ತಿದೆಯೆಂದು ಅವನಿಗೆನಿಸಿತು. "ಆ ವಕೀಲರು ಏನೆಂದು ಬರೆದಿದ್ದಾರೆ?" ಎಂದು ತುಸುಹೊತ್ತಿನ ಮೇಲೆ ನರಹರಿಯು ಕೇಳಿದ.

"'ಮುನವಳ್ಳಿಯವರು ಚಿಂತೆಯಲ್ಲಿರಬಹುದು. ಅವರ ಬಗ್ಗೆ ಯಾವ ಚಿಂತೆಯೂ ಇರುವ ಕಾರಣವಿಲ್ಲ. ಅವರ ವಿದ್ಯಾಭ್ಯಾಸದ ವ್ಯವಸ್ಥೆಯನ್ನು ಮಾಡಲಾಗುವದು. ತಿರುಗಿ ಅವರಿಗೆ ಊರಿಗೆ ಬರಲು ಹೇಳಿರಿ' ಎಂದು ಮುಂತಾಗಿ ಅವರ ಪತ್ರವಿದೆ." ಎಂದು ಆ ತರುಣಿಯು ಹೇಳಿದಳು. ಬಳಿಕ ಒಂದೆರಡು ನಿಮಿಷಗಳ ನಂತರ "ಮಾರುತಿ, ನಿನ್ನ ಕುದುರೆಯನ್ನು ಇವರಿಗೆ ಕೊಟ್ಟುಬಿಡು. ಮಿಸ್ಟರ್ ಮುನವಳ್ಳಿ. ನೀವು ನನ್ನ ಜೊತೆಯಲ್ಲಿ ನಡೆಯಿರಿ! ನನ್ನ ತಂದೆಯುವರು ನಿಮ್ಮನ್ನು ಸಂತೋಷದಿಂದ ಸ್ವಾಗತಿಸುವರು. ನಮ್ಮಲ್ಲಿ ಕೆಲವು ದಿನವಿದ್ದು ತಂದೆಯವರೊಡನೆ ವಿಚಾರವಿನಿಮಯ ಮಾಡಿರಿ" ಎಂದು ತರುಣಿಯು ಒತ್ತಾಯಪಡಿಸಿದಳು.

"ಕ್ಷಮಿಸಬೇಕು. ನನಗೆ ಕುದುರೆ ಏರಲು ಬರುವದಿಲ್ಲ" ಎಂದು ನರಹರಿಯು ನಗುತ್ತ ಹೇಳಿದ. "ಬಂದರೂ ನಿಮ್ಮ ಜೊತೆಗೆ ನಾನೀಗ ಬರುವ ಹಾಗಿಲ್ಲ ಗುಡಿಯಲ್ಲಿ ನನಗೆ ಪೂಜ್ಯರಾದ ಆಪದ್ಬಂಧುಗಳೊಬ್ಬರಿದ್ದಾರೆ. ಅವರನ್ನು ಬಿಟ್ಟು ನಾನು ಕದಲುವ ಹಾಗಿಲ್ಲ."

"ಅವರನ್ನೂ ಜೊತೆಗೆ ಕರೆದುಕೊಂಡು ಬನ್ನಿರಿ." ಆ ತರುಣಿಯೆಂದಳು.

"ಅವರು ಹಾಗೆ ಒಬ್ಬರ ಮನೆಗೆ ಬರುವವರಲ್ಲ; ಸಾಧಕರು, ಯೋಗಿಗಳು." ಎಂದು ನರಹರಿ ಹೇಳಿದ.

"ಆಯುಷ್ಯದಲ್ಲಿ ಇಷ್ಟು ಬೇಗನೆ ನೀವು ಯೋಗಿಗಳೊಡನೆ ಸಂಬಂಧ ಬೆಳೆಸಿದ್ದೀರಾ?" ಎಂದು ಆ ತರುಣಿಯು ನಗೆಯಾಡಿದಳು.

"ಅದು ಅವರವರ ದೈವ ಇಲ್ಲವೆ ಮನಸ್ಸಿನೊಲವನ್ನು ಅವಲಂಬಿಸಿರುತ್ತದೆ" ಎಂದು ನರಹರಿಯು ಶಾಂತನಾಗಿ ಉತ್ತರಕೊಟ್ಟ.

"ಹಾಗಾದರೆ ಈಗೇನು ಮಾಡಬೇಕು? ನಮ್ಮ ತಂದೆಯುವರನ್ನಂತೂ ನೀವು ಭೆಟ್ಟಿಯಾಗಲೇಬೇಕು. ಇಲ್ಲದಿದ್ದರೆ ಅವರು 'ಮೋಗಾಂವಿ' ಗೆ ಏನೆಂದು ಪತ್ರ ಬರೆಯುಬೇಕು ಹೇಳಿರಿ. ಕನಿಷ್ಠಪಕ್ಷಕ್ಕೆ ನೀವು ಈ ಗುಡಿಯು ಲ್ಲಾದರೂ ನಾಳಿನ ಬೆಳಗಿನವರೆಗೆ ಇರಬೇಕು. ಅಂದರೆ ನಾನು ನನ್ನ ತಂದೆ ಯುವರನ್ನು ಕರೆದುಕೊಂಡು ಬರುತ್ತೇನೆ" ಎಂದು ಆ ತರುಣಿಯು ಹೇಳಿದಳು.

"ಆಗಬಹುದು ನಾನಂತೂ ಇಲ್ಲಿಯೇ ಇದ್ದೇನೆ" ನರಹರಿಯೆಂದ.

ಆದರೂ ಆ ತರುಣಿಗೆ ವಿಶ್ವಾಸವಾಗಲಿಲ್ಲ. "ನಡೆಯಿರಿ. ನಾನು ನಿಮ್ಮ ಜೊತೆಗೆ ಬಂದು ಆ ನಿಮ್ಮ ಸ್ವಾಮಿಜಿಯವರಿಗಷ್ಟು ತಿಳಿಸಿಬರುತ್ತೇನೆ." ಎಂದು ಅವಳು ಹೇಳಿ ನರಹರಿಯುನ್ನು ಗುಡಿಯ ಕಡೆಗೆ ತಿರುಗಿಸಿದಳು. ಆಕೆ ಏರಿದ ಕುದುರೆಯು ಹಿಂದಿನಿಂದ ಬಂತು. ತನ್ನ ಕುದುರೆಯ ಮೇಲಿಂದಿಳಿದಿದ್ದ ಮಾರುತಿಯು ಕುದುರೆಯೊಡನೆ ತುಸು ದೂರದಿಂದ ಅವರನ್ನು ಹಿಂಬಾಲಿ ಸುತ್ತಿದ್ದ.

"ಅಲ್ಲ, ಮಿಸ್ಟರ್ ಮುನವಳ್ಳಿ! ಕಾಲೇಜಿಗೇ ಒಂದನೇ ನಂಬರಿದ್ದು ನೀವು ಕಲಿಯುವುದನ್ನು ಬಿಟ್ಟು ಮನೆಯಲ್ಲಿ ಕೂತಿದ್ದೇಕೆ? ಮತ್ತೆ ಸಂದಿಗ್ಧ ವಾಗಿ ಮನೆ ಬಿಟ್ಟು ಹೀಗೆ ಹೊರಗೆ ಬಿದ್ದಿದ್ದೇಕೆ? ಇದೊಂದೂ ನನಗೆ ಅರ್ಥ ವಾಗಲೊಲ್ಲದು. ನೀವು ಕಲಿಯಲಿಕ್ಕೇಬೇಕು ನಿಮ್ಮಂಥವರು ಕಲಿಯು ವುದನ್ನು ಬಿಟ್ಟರೆ ಮುಂದೆ ದೇಶದ ಗತಿಯೇನು? ಈ ವಿಷಯದಲ್ಲಿ ನಾನು ಎಲ್ಲ ರೀತಿಯಿಂದ ನೆರವಾಗುತ್ತೇನೆ" ಎಂದು ಕುಮಾರಿ ಪ್ರಮಿಲಾ ಪಂಡಿತಳು (ಆ ತರುಣಿಯು) ಹೇಳಿದಳು.

ನರಹರಿಗೆ ಮಾತು ಬೆಳೆಸುವ ಮನಸ್ಸಿರಲಿಲ್ಲ. ಅವನು ಅವಳ ಜೊತೆ ಯಲ್ಲಿ ಸುಮ್ಮನೆ ಸಾಗಿದ.

ಅವರು ಗುಡಿಯನ್ನು ಮುಟ್ಟಿದಾಗ ವಾಡಿಕೆಯಂತೆ ಸ್ವಾಮಿದಾಸರು ಕಟ್ಟೆಯ ಮೇಲೆ ಕುಳಿತಿದ್ದರು. ಹಸನ್ಮುಖರಾಗಿ ಅವರು ನರಹರಿಯನ್ನೂ ಕುಮಾರಿಯನ್ನೂ ಸ್ವಾಗತಿಸಿದರು.

ಕಟ್ಟೆಯನ್ನು ಮುಟ್ಟುತ್ತಲೇ ಕುಮಾರಿಯು ಮಾತಿಗೆ ಮೊದಲು ಮಾಡಿದಳು. "ಸದ್ಗುರು ಮಹಾರಾಜ! ಈ ನಿಮ್ಮ ಶಿಷ್ಯರ ಬಗ್ಗೆ ಒಂದು ಮಾತನ್ನು ಕೇಳಲು ಬಂದಿದ್ದೇನೆ. ಅವರ ಬಗ್ಗೆ ನನ್ನ ತಂದೆಯವರಿಗೆ

ಮೋಗಾಂವಿಯಿಂದ ಒಂದು ಪತ್ರವು ಬಂದಿದೆ. ನಾಳೆ ಮುಂಜಾನೆ ತಂದೆಯವರು ಅವರನ್ನು ಕಾಣಲು ಬರುವರು. ಅಲ್ಲಿಯ ವರೆಗೆ ಈ ನಿಮ್ಮ ಶಿಷ್ಯೋತ್ತಮ ರನ್ನು ನೀವು ಎಲ್ಲಿಯೂ ಬಿಡಬಾರದು" ಎಂದು ಕುಮಾರಿಯು ನಕ್ಕಳು.

ನರಹರಿಗೆ ಈ ಹೆಣ್ಣುಮಗಳ ಧೈರ್ಯಕ್ಕೂ, ನಿರ್ಭಿಡೆಯ ಸ್ವಭಾವಕ್ಕೂ ಪರಮಾಶ್ಚರ್ಯವಾಯಿತು. ಸುಮ್ಮನೆ ಅವಳ ಮಾತುಗಳನ್ನು ಕೇಳುತ್ತ ಅವನು ಮೌನದಿಂದಿದ್ದ. ಸ್ವಾಮಿದಾಸರು ಹೇಳಿದರು "ಆಗಬಹುದು. ನಾನೇನೂ ಇವರ ಸ್ವಾತಂತ್ರ್ಯವನ್ನು ಕಸಿದುಕೊಂಡಿಲ್ಲ ತಮಗೆ ಬೇಕಾದಾಗ ಬೇಕಾದಲ್ಲಿ ಹೋಗಲು ಅವರು ಸ್ವತಂತ್ರರಿದ್ದಾರೆ ಆದಗೂ ಅವರು ನಾಳೆ ಬೆಳಗ್ಗೆ ಎಲ್ಲಿಯೂ ಹೋಗುವುದಿಲ್ಲವೆಂದು ನಾನು ಆಶ್ವಾಸನ ಕೊಡಬಲ್ಲೆ. ಇನ್ನೊಂದು ಮಾತು. ಅವರು ನನ್ನ ಶಿಷ್ಯರಲ್ಲ. ನನಗೆ ಶಿಷ್ಯರೇ ಇಲ್ಲ ಬೇಕಾದರೆ ಇವರನ್ನು ನನ್ನ ತರುಣ ಮಿತ್ರರೆಂದು ಕರೆಯಬಹುದು."

"ಅದೇನೇ ಇರಲಿ" ಕುಮಾರಿಯೆಂದಳು "ನನಗೆ ಮುಖ್ಯವಾಗಿ ಬೇಕಾಗಿದ್ದು ಆ ಆಶ್ವಾಸನ. ಮಿಸ್ಟರ್ ಮುನವಳ್ಳಿ, ನಾಳೆ ಬೆಳಗ್ಗೆ ನೀವು ಎಲ್ಲ ಸಿದ್ಧತೆಯನ್ನು ಮಾಡಿಕೊಳ್ಳಿರಿ ನಿಮ್ಮ ಬೆಳಗಿನೂಟ ಸಹ ನಮ್ಮಲ್ಲಿಯೆ. ಆಗಬೇಕು ಹೋಗಿಬರುತ್ತೇನೆ. ಗುಡ್‌ನಾಯಿಟ್! ಸದ್ಗುರು ಮಹರಾಜ, ಗುಡ್‌ನಾಯಿಟ್!" ಹೀಗೆಂದು ತರುಣಿಯು ಕುದುರೆಯನ್ನೇರಿ ಮುಂದೆ ಸಾಗಿದಳು. ಮಾರುತಿಯೂ ಅಶ್ವಾರೂಢನಾಗಿ ಹಿಂದಿನಿಂದ ಸಾಗಿದ.

ಆದದ್ದನ್ನೆಲ್ಲ ನೆನಿಸಿ ನರಹರಿಯು ದಿಙ್ಮೂಢನಾದ ಕುಮಾರಿಯೊಡನೆ ಸ್ವಾಮಿದಾಸರು ಮರಾಠಿಯಲ್ಲಿ ಮಾತನಾಡಿದ್ದಕ್ಕೆ ಅವನು ಅಚ್ಚರಿಗೊಂಡ. ಅವರಿಗೆ ಅಷ್ಟು ಚೆನ್ನಾಗಿ ಮರಾಠಿ ಬರಬಹುದೆಂಬ ಕಲ್ಪನೆಯು ಅವನಿಗಿರಲಿಲ್ಲ ಆದರೆ ಇನ್ನು ನರಹರಿಯು ಮಾಡಬೇಕಾದುದೇನು? ಅದೇ ಆಧ್ಯಾತ್ಮಿಕ ರಾಜ್ಯದಲ್ಲಿ ಕಾಲಿಟ್ಟ ನರಹರಿಗೆ ಮತ್ತೆ ಸಂಸಾರವು ಎರಡೂ ಕೈಮಾಡಿ ಕರೆಯ ತೊಡಗಿತು. ಸ್ವಾಮಿದಾಸರೆದುರಿಗೇ ನರಹರಿಯು ತನ್ನ ಹೃದಯವನ್ನು ಬಿಚ್ಚಿದ. "ಇದರಲ್ಲಿ ತಾವೇ ನನಗೆ ದಾರಿ ತೋರಿಸಬೇಕು. ಈಗ ನಾನೇನು ಮಾಡಲಿ?" ಎಂದು ಸ್ವಾಮಿದಾಸರನ್ನು ಕೇಳಿದ.

ಅವರು ನಗುತ್ತ ಉತ್ತರಕೊಟ್ಟರು "ನಾಳೆ ಅವರು ಬಂದರೆ ಅವರಿಗೆ ಭೆಟ್ಟಿಯಾಗಿರಿ. ಏನು ಹೇಳುವರೋ ಕೇಳಿಕೊಳ್ಳಿರಿ ನಿಮ್ಮೂರಿಂದ ಬಂದ ಪತ್ರದ ವಿಷಯವು ಅವರಿಂದ ತಿಳಿಯಬಹುದಲ್ಲ?"

"ಅವರು ನನ್ನನ್ನು ತಮ್ಮ ಮನೆಯಲ್ಲಿರಲು ಕರೆದರೆ?" ಎಂದು ನರಹರಿ ಪ್ರಶ್ನೆಹಾಕಿದ.

"ಕರೆದರೆ ಹೋಗಿರಿ. ಅಲ್ಲಿಯೂ ಕೆಲವು ದಿನಗಳನ್ನು ಕಳೆಯಬಹುದು." ಎಂದರು ಸ್ವಾಮಿದಾಸರು.

"ಈ ಹೆಣ್ಣುಮಗಳೊಡನೆ ಅರ್ಧತಾಸು ದಾರಿ ನಡೆಯುವಷ್ಟರಲ್ಲಿ ನನಗೆ ಬೇಸರಾಯಿತು. ಇನ್ನು ದಿನಗಳನ್ನು ಕಳೆಯುವುದು ಹೇಗೆ?" ಎಂದು ನರಹರಿಯು ದನಿಯೇರಿಸಿದ.

ಸ್ವಾಮಿದಾಸರು ಮುಗುಳ್ನಗೆ ನಕ್ಕರು. "ಎಲ್ಲ ಸಾನ್ನಿಧ್ಯವೂ ಪ್ರಿಯವಿರಬೇಕೆಂದು ನಾವೇಕೆ ನಿರೀಕ್ಷಿಸಬೇಕು? ಇಂಥ ಅನುಭವವೂ ನಮ್ಮ ದಾರಿಯಲ್ಲಿ ಬಂದರೆ ಅದನ್ನು ಸಹಿಸಬೇಕಲ್ಲವೆ?"

"ಮೊಗ್ಗಾವಿಯಿಂದ ಅನುಕೂಲವಾದ ಪತ್ರವೇ ಬಂದಿರಬೇಕು. ಗಣಪತರಾಯರು ನನ್ನ ಭವಿತವ್ಯದ ಬಗ್ಗೆ ಲೆಕ್ಕಹಾಕಿದ ವಿನಾ ನನಗೆ ಪತ್ರ ಬರೆಯಲಾರರು ಹಾಗೆ ಅನುಕೂಲತೆಗಳು ಎದುರು ಬಂದರೆ ನಾನೇನು ಮಾಡಲಿ? ಮತ್ತೆ ಸಂಸಾರದಲ್ಲಿ ಧುಮುಕಬೇಕೆ?"

"ನಿಮಗೊಂದು ಮಾತು ಹೇಳಲಿ?" ಎಂದರು ಸ್ವಾಮಿದಾಸರು.

"ಹೌದು ಅದಕ್ಕಾಗಿ ಕಾದಿದ್ದೇನೆ." ನರಹರಿ ಉತ್ಸುಕತೆಯಿಂದ ನುಡಿದ.

"ನೀವಿನ್ನೂ ಕೆಲಸಮಾಡುವುದಿದೆ. ನಿಮ್ಮಿಂದ ಇನ್ನೂ ಸಮಾಜ ಸೇವೆಯಾಗಬೇಕು. ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಈ ವಿವೇಕ ಬಂದಿದ್ದು ನಿಮ್ಮ ಪೂರ್ವಾರ್ಜಿತ ಪುಣ್ಯ. ಆದರೆ ಅದಕ್ಕೆ ನಿಮ್ಮ ಜೀವನವನ್ನು ಧಾರೆಯೆರೆಯಲು ಇನ್ನೂ ಕಾಲವಿದೆ ಅದು ಬಂದಾಗ ನೋಡೋಣ."

ಸ್ವಾಮಿದಾಸರ ಈ ಮಾತನ್ನು ಕೇಳಿ ನರಹರಿಗೆ ದಿಗ್ಭ್ರಮೆಯಾಯಿತು. "ಹಾಗಾದರೆ ನಾವಿನ್ನು ಒಬ್ಬರನ್ನೊಬ್ಬರು ಅಗಲಬೇಕೆ?" ಎಂದು ಅವನು ನೊಂದುಕೊಂಡು ಕೇಳಿದ.

ಸ್ವಾಮಿದಾಸರು ನಗುತ್ತ ನುಡಿದರು. "ಇದರಲ್ಲಿ ನಾನು ನಿಮಗೆ ಹೇಳುವುದೇನಿದೆ? ಈಗ ಐದು ದಿನಗಳ ಹಿಂದೆ ಜರುಗಿದ ನಮ್ಮ ಭೆಟ್ಟಿ ಈಶ ಸಂಕಲ್ಪವಿದ್ದಂತೆ ನಾಳಿನ ನಮ್ಮ ಅಗಲಿಕೆಯೂ ಇದ್ದರೆ ಅದಕ್ಕೆ ನಾವೆಂತು ಹೊರತಾಗುವೆವು? ಆದರೆ ಇದರಿಂದ ವಿಷಾದಪಟ್ಟು ಪ್ರಯೋಜನವೆಲ್ಲಿ? ನಮ್ಮ ಇತಿಹಾಸವು ಇಲ್ಲಿಗೇ ಮುಗಿಯಲಿಲ್ಲ. ಮುಂದೆ ಮತ್ತೆ ಭೆಟ್ಟಿಯಾಗ ಬಹುದಲ್ಲವೆ?"

"ಹಾಗೆ ತಮ್ಮ ಸಹವಾಸ ಮತ್ತೆ ನನಗೆ ಸಿಗುವುದೆಂದು ತಮಗೆನಿಸಿದ್ದರೆ ಸಾಕು. ಅದೇ ನನ್ನ ದಾರಿಯ ಬುತ್ತಿ" ಎಂದು ನರಹರಿಯು ಭಾವನಾಪರವಶ ನಾಗಿ ಹೇಳಿದ.

ಸ್ವಾಮಿದಾಸರು ಅಂತಃಕರಣವನ್ನು ಸೂಚಿಸುವ ಮೌನದಿಂದಿದ್ದರು.

ಕೆಲವು ನಿಮಿಷಗಳಾದ ಮೇಲೆ ನರಹರಿಯು ಕೇಳಿದ: "ನಾಳೇ ನಾನು ಅಲ್ಲಿಗೆ ಹೋಗುವದು ಅವಶ್ಯವಿದೆಯೆ?"

"ಹಾಗೇನೂ ಇಲ್ಲ ಏನಾಗುವುದೋ ನೋಡೋಣ." ಎಂದು ಸ್ವಾಮಿ ದಾಸರು ಅವನನ್ನು ಶಾಂತಗೊಳಿಸಿದರು.

ವಿಚಿತ್ರ ಸ್ವಪ್ನಗಳಿಂದ ಅಂದಿನ ರಾತ್ರಿ ನರಹರಿಯ ನಿದ್ರೆಯೆಲ್ಲ ಕ್ಷುಬ್ಧ ವಾಗಿತ್ತು.

---

## ಪ್ರಕರಣ ೫೨

## ಮಿಸ್ ಪ್ರಮೀಲಾ ಪಂಡಿತ್

ನರಹರಿಯು ಮೊಗ್ಗಾವಿಯನ್ನು ಬಿಟ್ಟ ಮರುದಿನ ಊರಲೆಲ್ಲ ಅವನ ಮೇಲಿನ ಅಪವಾದದ ಸುದ್ದಿಯು ಹಬ್ಬಿತ್ತು. ಭಿನ್ನ ಪ್ರಕೃತಿಯ ಜನರು ಭಿನ್ನ ಭಿನ್ನವಾಗಿ ನಡೆದ ಸಂಗತಿಗೆ ಅರ್ಥ ಹಚ್ಚುತ್ತಿದ್ದರು. ದೇಸಾಯರು ಮನೆಗೆ ಊಟಕ್ಕೆ ಬಂದಾಗ ಜಾನಕಿಬಾಯರು ಸಿಡಿಲಿನಂತೆ ಈ ಸುದ್ದಿಯನ್ನು ಅವರ ಮೇಲೆ ಎರಗಿಸಿದರು. ಅದನ್ನು ಕೇಳಿದೊಡನೆ ದೇಸಾಯರಿಗೆ ಊಟವೇ ರುಚಿ ಹತ್ತಿರಲಿಲ್ಲ. ಹಾಗೆಯೇ ಅವರು ಊಟ ಬಿಟ್ಟು ಎದ್ದಿದ್ದರು. "ಇಂಥಾ ನೀಚಗ

ನಮ್ ಕೂಸುಮಾನ್ನ ಕೊಡಬೇಕಂತ ಮಾಡಿದ್ದಿರಿ! ಕಟುಕನ ಕಯ್ಯಾಗ ಕುರಿ ಕೊಟ್ಹಾಂಗ! ನಿಮಗ ದೇವರು ಬುದ್ಧಿ ಕೊಟ್ಟಿದ್ರ ಈ ಗತಿಗೆ ಯಾಕ ಬರ ತಿತ್ತು ನಮ್ಮನೀ!" ಎಂದು ಜಾನಕಿಬಾಯರು ಗಾಯದ ಮೇಲೆ ಬರೆ ಕೊಟ್ಟರು

"ಇಲ್ಲ, ಅದು ಸಾಧ್ಯವಿಲ್ಲ" ದೇಸಾಯರು ಆವೇಶದಿಂದ ಹೇಳಿದರು. ಇದರ ಸತ್ಯಾಂಶವನ್ನು ತಿಳಿಯುವ ಮನಸ್ಸಿದ್ದರೆ ಈಗ ಹೇಳುತ್ತೇನೆ. ಸೆರಗಿಗೆ ಗಂಟು ಹಾಕಿಕೋ. ಇದು ನರಹರಿಯ ತಪ್ಪಲ್ಲ; ರಮಾಬಾಯಿಯ ತಪ್ಪು. ನರ ಹರಿಯ ಕಾಮವಲ್ಲ; ರಮಾಬಾಯಿಯ ಕಾಮ. ತಾನು ಹಾಕಿದ ಹೊಂಚಿನಲ್ಲಿ ಜಯ ಸಿಗದೆ ಈ ದಂತಕಥೆಯನ್ನು ಹುಟ್ಟಿಸಿದ್ದಾಳೆ. ರಮಾಬಾಯಿ!"

"ಆ ರಂಡಿ ರಮಾಬಾಯಿ ಏನು ಅರುಂಧತಿ ಅಂತ ನಾ ಹೇಳಲಿಲ್ಲ! ಆದರ ಆ ನರಹರಿನ್ನ ನೀವೆಷ್ಟು ಮೇಲುಗಟ್ಟಿಕೊಂಡು ಬರ್ತೀರಿ! ಅವ ಏನು ಧ್ರುವನೋ ಪ್ರಹ್ಲಾದನೋ ರಾಮಚಂದ್ರನೋ? ಅವನ್ನ ನೀವು ಕೂಡಿಸಿ ಪೂಜಿ ಮಾಡೋದೊಂದು ಉಳದದ!" ಎಂದು ಸಿಡಿದುಬಿದ್ದರು ಜಾನಕಿ ಬಾಯರು.

"ಧ್ರುವಾ, ಪ್ರಹ್ಲಾದಾ! ರಾಮಚಂದ್ರಾ,–ಇವರೆಲ್ಲಾ ಬರೀ ಕಟ್ಟು ಕಥೀ ಅಂತ ತಿಳದೀ ಅಲ್ಲs, ಪುರಾಣಾ ಕೇಳಿ? ಆ ಪುರಾಣೇನೂ ರಾಜ್ಯಕ್ಕ ಹೊರತಲ್ಲ. ಹಾಂಗಿರೋ ಜನರನ್ನ ನೋಡೇ ಬರದಾರ ಆ ಪುರಾಣಾನ!" ಎಂದು ದೇಸಾ ಯರು ಸಿಟ್ಟಿಸಿಂದ ಹೇಳಿದರು.

"ಹೀಂಗೇನು? ಈ ನಿಮ್ಮ ವೇದಾಂತ ಬತ್ತಿ ಹೊಸೆಯೋ ಅಂಥಾ ನನ್ನಂಥಾ ಮಡ್ಡಗೂಳಿಗೆ ಏನು ಗೊತ್ತು? ನರಹರಿ,–ಧ್ರುವಾ ಆದ್ರ, ನೀವೇನು ಹೇಳ್ರಿ! ನೀವೇನು ಧರ್ಮರಾಜರೋ ದ್ರೋಣಾಚಾರ್ರೋ ಏನು ಭೀಷ್ಮಾ ಚಾರ್ರೋ?" ಎಂದು ಜಾನಕಿಬಾಯರು ವ್ಯಂಗ್ಯವಾಡಿದರು.

**ಈ ಹೆಣ್ಣಿನ ಕೂಡ ಗುದ್ದಾಡಿ ಗೆದ್ದವರಾರು? ಎಂದು ತಮ್ಮನ್ನು ತಾವೇ ಪ್ರಶ್ನಿಸಿಕೊಂಡು ದೇಸಾಯರು ಸುಮ್ಮನಾದರು.**

ಆದರೆ ದೇಸಾಯರ ಮಾತಿನಿಂದ ಕುಸುಮಾನಿಗೆ ಹೆಚ್ಚಿನ ಸಮಾಧಾನ ವಾಗಿತ್ತು. ನರಹರಿಯನ್ನು ನರಕಕ್ಕೇ ನೂಕಲು ಎಲ್ಲರೂ ಸಿದ್ಧರಾದ ಹೊತ್ತಿ ನಲ್ಲಿ ತನ್ನ ತಂದೆಯಾದರೂ ಅವನ ಪಕ್ಷ ಗಟ್ಟಿದರಲ್ಲ! ಈ ಪ್ರಸಂಗದಲ್ಲಿ ಏನೆಂದು

ವಿಚಾರಿಸಬೇಕೆಂಬುದು ಅವಳಿಗೆ ತಿಳಿಯದೆ ಹೋಗಿತ್ತು. ದೇಸಾಯರು ಒಂದು ದೃಷ್ಟಿಪಥವನ್ನು ತೋರಿಸಿದರು.

ಆದರೆ ದೇಸಾಯರು ಇಷ್ಟಕ್ಕೇ ಸುಮ್ಮನಿರಲಿಲ್ಲ ಅಂದು ಸಂಜೆಗೆ ವಕೀಲ ಗಣಪತರಾಯರೆಡೆಗೆ ಹೋಗಿ ಅವರು ವಿಷಯವನ್ನೆಲ್ಲ ಚರ್ಚಿಸಿದರು; ತಮ್ಮ ಅಭಿಪ್ರಾಯವನ್ನು ತಿಳಿಸಿದರು. ನರಹರಿಯ ಶೋಧವೇ ಮೊದಲನೆಯ ಕೆಲಸ ವೆಂದು ನುಡಿದರು. ಗಣಪತರಾಯರಿಗೂ ಇವರ ಅಭಿಪ್ರಾಯದಲ್ಲಿ ನಂಬಿಕೆ ಹುಟ್ಟಿತು. ಸುತ್ತಣ ಹಳ್ಳಿಗಳಿಗೆ ಆಳುಮಕ್ಕಳನ್ನು ಕಳಿಸಿ ಶ್ರೀಪಾದರಾಯ ನನ್ನು ಆಸುಪಾಸಿನ ನಿಲ್ದಾನೆಗಳಿಗೆ ವಿಚಾರಣೆಗಾಗಿ ಕಳಿಸಿದರು. ಶ್ರೀಪಾದ ರಾಯನು ಮೊಗ್ಗಾವಿಗೂ ಅದರ ಹಿಂದು ಮುಂದಿನ ನಿಲ್ದಾನೆಗಳಿಗೂ ಹೋಗಿ ಬಂದ. ಒಂದೆಡೆಗೆ ರಾತ್ರಿ ಪಾಳಿಯಿದ್ದ ಮಾಸ್ತರರು ಅವನಿಗೆ ಹೇಳಿದರು: "ಏನೋರೆಪಾ! ನೀವು ಹೇಳಿದ ದಿವಸ ನೀವು ಹೇಳಿದ ಹೊತ್ತಿಗೆ ಹೂಬೇ ಹೂಬ್ ನೀವು ಮಾಡಿದ ವರ್ಣನಾದ ಹುಡುಗ ಇಲ್ಲಿ ಬಂದಿದ್ದ ಆದರೆ ಈಗ ಅವ ಜೀವಂತ ಇದ್ದಾನೋ ಇಲ್ಲೋ ಹೇಳಲಾರೆ ತಿಕೀಟು ತಗೋಬೇಕಾರ ಎಷ್ಟು ಮೋಜು ಮಾಡಿದ ಅವ! ಎರಡು ರುಪಾಯಿ ಚೆಲ್ಲಿ 'ತಿಕೀಟು ಕೊಡ್ರಿ, ಮಾಸ್ತರ!' ಅಂದ! 'ಎಲ್ಲಿಗೆ?' ಅಂತ ನಾ ಕೇಳಿದೆ ಧಕ್ಕಾಗೀ. "ಎರಡು ರುಪಾಯಿ ಎಲ್ಲೀ ತನಕಾ ಒಯ್ಯತಾವ ಅಲ್ಲಿಗೇ" ಅಂದ! ಹೀಂಗ ಪ್ರವಾಸ ಮಾಡೋವರನ್ನ ನೀವು ಎಂದಾದರೂ ನೋಡೀರಾ? ಎರಡು ರುಪಾಯಿ ಖಾಸ ಗಾಂವಿಗೆ ಆತು. ನಾನು ಖಾಸಗಾಂವಿ ತಿಕೀಟು ಕೊಟ್ಟು ಕಳಿಸಿದೆ"

ಅಂತೂ ನರಹರಿಯು ಖಾಸಗಾಂವಿಗೆ ಹೋಗಿರುವನೆಂಬ ಸುದ್ದಿಯು ಶ್ರೀಪಾದರಾಯನಿಗೆ ಹತ್ತಿತು ಅದರಂತೆ ಅವನು ಬಂದು ತಂದೆಗೆ ತಿಳಿಸಿದ. ಬಳಿಕ ಗಣಪತರಾಯರೂ ದೇಸಾಯರೂ ಕೂಡಿ ವಿಷಯವನ್ನು ಚರ್ಚಿಸಿದರು. ಸುದೈವದಿಂದ ಖಾಸಗಾಂವಿಯಲ್ಲಿ ಗಣಪತರಾಯರ ಸ್ನೇಹಿತರೊಬ್ಬರಿದ್ದರು. ಅವರೇ ಅಲ್ಲಿಯ ದೇಶಮುಖರಾದ ಪಂಡಿತ ಕೇಶವರಾಯರು ಕೇಶವರಾಯರು 'ಸುಖವಸ್ತು'. ವಕೀಲಿ ವರ್ಗಗಳಲ್ಲಿ ಅವರು ಗಣಪತರಾಯರ ಸಹಪಾಠಿ ಗಳಾಗಿದ್ದರು. ಆದರೆ ಸಂಸಾರದಲ್ಲಿ ಅರ್ಧ ದಾರಿಯನ್ನು ನಡೆದ ಮೇಲೂ ಸಹ ಅವರು ಪರೀಕ್ಷೆಯಲ್ಲಿ 'ಗಿರಕಿ' ಹೊಡೆಯುವದು ತಪ್ಪಲಿಲ್ಲ. ಕೊನೆಗೆ ನಾಗರಿ ಕತೆಯ ಒಂದು ಅಂಗವಾದ ಕಾಯದೆ ಜ್ಞಾನವು ತಮಗೆ ಆಗಿದ್ದಷ್ಟೇ ಸಾಕೆಂದು

ಸಮಾಧಾನ ಹಚ್ಚಿಕೊಂಡು ಅವರು ತಮ್ಮ ಹೊಲ—ತೋಟ—ಪಟ್ಟಿಗಳನ್ನು ನೋಡಿಕೊಳ್ಳುವದರಲ್ಲಿ ಮಗ್ನರಾಗಿದ್ದರು.

"ನಾನೇ ಖಾಸಗಾಂವಿಗೆ ಹೋಗಿ ಬರುತ್ತೇನೆ. ಹಳೆಯ ಸ್ನೇಹಿತನಾದ ಪಂಡಿತನ ಭೆಟ್ಟಿಯಾದ ಹಾಗೂ ಆಯಿತು. ನರಹರಿಯನ್ನು ಕಂಡು ಮಾತ ನಾಡಿದ ಹಾಗೂ ಆಯಿತು." ಎಂದರು ಗಣಪತರಾಯರು.

ಇದಕ್ಕೆ ದೇಸಾಯರು ಸಂತೋಷದಿಂದ ಸಮ್ಮತಿಸಿದರು ಆದರೆ ಅಂದು ಸಂಜೆಗೇ ಗಣಪತರಾಯರಿಗೆ ಜ್ವರ ಬಂದು ಅವರ ಪ್ರಯಾಣವು ನಿಂತು ಹೋಯಿತು. ಆಗ ಪಂಡಿತರಿಗೆ ತಾರು ಮಾಡಬೇಕೆಂಬ ವಿಚಾರವು ಅವರ ತಲೆ ಯಲ್ಲಿ ಬಂತು. ಆದರೆ ಕಾರು ಮಾಡುವದರಿಂದ ವಿಷಯವು ಅಷ್ಟೊಂದು ಗೌಪ್ಯವಾಗಿ ಉಳಿಯಲಿಕ್ಕಿಲ್ಲವೆಂದು ಬಗೆದು ಎಲ್ಲ ವಿವರಗಳನ್ನೊಳಗೊಂಡ ಒಂದು ಪತ್ರವನ್ನು ಬರೆದು ಪ್ರಕೃತಿಯು ಸರಿಯಾದೊಡನೆ ತಾವೂ ಬರುವೆ ನೆಂದು ಅವರು ಪಂಡಿತರಿಗೆ ತಿಳಿಸಿದರು ಅರ್ಥಾತ್ ದೇಸಾಯರೊಡನೆ ಸಮಾ ಲೋಚನೆಯಾಗಿಯೇ ಇಷ್ಟೆಲ್ಲ ವಿಷಯವು ಕೊನೆಗೊಂಡಿತು.

ನರಹರಿಯನ್ನು ಕುಮಾರಿ ಪಂಡಿತಳು ಭೆಟ್ಟಿಯಾದ ಮರು ದಿನ ಬೆಳಿಗ್ಗೆ ಕುಮಾರಿಯೂ ಆಕೆಯ ತಂದೆಯೂ ನರಹರಿಯ ಭೆಟ್ಟಿಗೆಂದು ಬ್ರಹ್ಮಪುರಿಗೆ ಹೋದಾಗ,—ಅವರೊಡನೆ ಗಣಪತರಾಯರೂ ಇದ್ದರು ಗಣಪತರಾಯರು ತುಸು ಗಾಬರಿಯಾಗಿಯೇ ಖಾಸಗಾಂವಿಗೆ ಬಂದಿದ್ದರು. ಪಂಡಿತರಿಂದ ಪತ್ರ ಹೋಗಿತ್ತು,—ನರಹರಿಯ ಪತ್ತೆ ಹತ್ತಿಲ್ಲವೆಂದೂ ಶೋಧ ನಡೆಸಿರುವೆವೆಂದೂ ಅವರು ಬರೆದಿದ್ದರು. ಆದರೆ ಗಣಪತರಾಯರು ಖಾಸಗಾಂವಿಯನ್ನು ಮುಟ್ಟಿದ ಸಂಜೆಗೇ ನರಹರಿಯು ಬ್ರಹ್ಮಪುರಿಯಲ್ಲಿರುವ ವರ್ತಮಾನವು ತಿಳಿದಿತ್ತು. ಅದ ರಿಂದ ಅವರಿಗೆ ಸಮಾಧಾನವಾಗಿತ್ತು. ಪಂಡಿತ, ಕುಮಾರಿ ಪಂಡಿತರೊಡನೆ ಅವರೂ ಬ್ರಹ್ಮಪುರಿಗೆ ಬೆಳಗಿನಲ್ಲಿ ನಡೆದರು.

ಬಗಿಯು ಒಂದು ಈಶ್ವರಾಲಯದ ಎದುರಿಗೆ ನಿಂತಿತು. ದಿನಕ್ಕಿಂತ ಮೊದಲಿಗೇ ತಮ್ಮ ಆಹ್ನೀಕವನ್ನು ತೀರಿಸಿಕೊಂಡು ಬಂದು ಸ್ವಾಮಿದಾಸರು ಕಟ್ಟೆಯ ಮೇಲೆ ಕುಳಿತಿದ್ದರು ನರಹರಿಯೂ ಅವರ ಜೊತೆಗಿದ್ದ ಬಗಿಯಿಂದ ಇಳಿದವರಲ್ಲಿ ಗಣಪತರಾಯರನ್ನೂ ನೋಡಿ ನರಹರಿಗೆ ಆಶ್ಚರ್ಯವಾಯಿತು. "ನೀವು ಬಂದಿದ್ದು ಯಾವಾಗ?" ಎಂದು ವಿನಯದಿಂದ ಕೇಳಿದ. "ನಿನ್ನೆ

ಸಂಜೆಗೆ." ಎಂದು ಹೇಳಿ ಅವರೊಂದು ಅಂತಃಕರಣದ ನಗೆಯನ್ನು ನಕ್ಕರು. ಗಣಪತರಾಯರೇ ಪಂಡಿತರಿಗೆ ನರಹರಿಯ ಪರಿಚಯ ಮಾಡಿಕೊಟ್ಟರು. ಆಮೇಲೆ ಕುಮಾರಿ ಪಂಡಿತಳನ್ನು ನೋಡಿ "ನಿಮಗಂತೂ ಇವರ ಪರಿಚಯ ಇದ್ದೇ ಇದೆ!" ಎಂದರು "ಇಲ್ಲದೆ ನಾನು ಇವರನ್ನು ಹುಡುಕದೆ ಹೋಗಿದ್ದರೆ ನಿಮಗೆಲ್ಲಿ ಮುನವಳ್ಳಿ ಸಿಗುತ್ತಿದ್ದರು!" ಎಂದು ಕುಮಾರಿಯು ನಕ್ಕಳು.

ಎಲ್ಲರೂ ಅರಳೆಕಟ್ಟೆಯ ಮೇಲೆ ಕುಳಿತುಕೊಂಡರು. ಕುಮಾರಿಯು ಮಾತ್ರ ಹತ್ತಿರದಲ್ಲಿದ್ದ ಬಿಲ್ವಪತ್ರಿ ಮರದ ಚಿಗುರನ್ನು ಚಿವುಟುತ್ತ ಅತ್ತಿತ್ತ ತಿರುಗಾಡುತಿದ್ದಳು.

ಪರಸ್ಪರ ಪರಿಚಯವಾಗಿ ಕುಶಲ ಪ್ರಶ್ನೆಗಳಾದ ಮೇಲೆ ಗಣಪತರಾಯರು ನರಹರಿಯನ್ನು ಬೇರೆ ಕಡೆಗೆ ಕರೆದುಕೊಂಡು ಹೋಗಿ ತಾವು ಬಂದ ವಿಷಯ ವನ್ನೆಲ್ಲ ತಿಳಿಸಿದರು. ರಮಾಬಾಯರು ಹೊರಿಸಿದ ಆರೋಪದಲ್ಲಿ ತಿಳಿದವರಾರೂ ನಂಬಿಕೆಯಿಡರು. ನರಹರಿಯನ್ನು ಬಲ್ಲವರಂತೂ ಇದನ್ನು ನಂಬುವದು ಸಾಧ್ಯವೇ ಇಲ್ಲ. ನರಹರಿಯು ತನ್ನ ಚಿಕ್ಕ ವಯಸ್ಸಿನಲ್ಲಿ ಹೀಗೆ ಕಂಗೆಡಬಾರದು. ಅವನ ಹೊಲಮನೆಯಿಂದ ಬರತಕ್ಕ ಉತ್ಪನ್ನಿನಲ್ಲಿ ಅವನ ವಿದ್ಯಾಭ್ಯಾಸಕ್ಕೆ ಬೇಕಾಗುವ ಹಣವನ್ನು ಮೊದಲು ನರಹರಿಗೆ ಕೊಟ್ಟು ಉಳಿದುದನ್ನು ರಮಾಬಾಯರಿಗೆ ಕೊಡಲಾಗುವದು ಇದಕ್ಕೆ ದೇಸಾಯರದೂ ಸಮ್ಮತಿಯಿದೆ, ಇತ್ಯಾದಿ, ಇತ್ಯಾದಿ.

ದೇಸಾಯರ ಹೆಸರನ್ನು ಗಣಪತರಾಯರು ತೆಗೆದುಕೊಂಡ ಕೂಡಲೆ ನರಹರಿಯ ಉತ್ಸುಕತೆಯು ಜಾಗೃತವಾಯಿತು. "ಈ ವಿಷಯದಲ್ಲಿ ಅವರ ದೇನು ಅಭಿಪ್ರಾಯವಿದೆ?" ಎಂದು ಅವನು ಕೇಳಿದ.

"ಅವರೂ ನಾನು ಸೂಚಿಸಿದ ಆರ್ಥಿಕಯೋಜನೆಗೆ ಒಪ್ಪಿರುತ್ತಾರೆ. ಒಂದು ರೀತಿಯಿಂದ ಆ ಸೂಚನೆಯೇ ಅವರದು" ಎಂದರು ಗಣಪತರಾಯರು.

"ಈ ಯೋಜನೆಯ ವಿಷಯದಲ್ಲಿ ನಾನು ಕೇಳಿದ್ದು, ಆ ವಿಷಯ........ ಆ .......ಇನ್ನೊಂದು ವಿಷಯ...." ಎಂದು ತಡವರಿಸಿದ ನರಹರಿ.

"ಅದೋ! ಅದರಲ್ಲಿ ನೀನು ನಿರಪರಾಧಿಯೆಂದು ಅವರು ಡಾಣಾ ಡಂಗುರ ಸಾರಲು ಸಿದ್ಧರಿದ್ದಾರೆ" ಎಂದು ನರಹರಿಯ ತಡವರಿಕೆಗೆ ಮೆಲುನಗೆ ನಕ್ಕು ಗಣಪತರಾಯರೆಂದರು ಬಳಿಕ "ಈಗಿನ ನಿನ್ನ ವಿಚಾರವೇನು?" ಎಂದು ಅವರು ಕೇಳಿದರು.

ಆದರೆ ನರಹರಿಯ ಮನಸ್ಸು ಮತ್ತೆಲ್ಲಿಯೋ ಹಾರಿಹೋಗಿತ್ತು. ದೇಸಾಯರು ತನ್ನಲ್ಲಿ ಅಚಲವಾದ ನಂಬಿಕೆಯಿಟ್ಟಿದನ್ನು ತಿಳಿದು ಅವನಿಗೆ ಬಹಳ ಸಮಾಧಾನವಾಗಿತ್ತು. ದೇಸಾಯರಿಂದ ಕೃಷ್ಣಮಾನಿಗೆ ಖಾತ್ರಿಯಾಗಬಹುದು. ಆದರೆ ಇನ್ನೂ ಆಸೆಯಿದೆ, ಇದೆ........ಫಕ್ಕನೆ ಗಣಪತರಾಯರು ಪ್ರಶ್ನೆ ಕೇಳುತ್ತಿರುವುದು ಅವನ ನೆನಪಿಗೆ ಬಂತು "ಇನ್ನೂ ಏನನ್ನೂ ನಿರ್ಧರಿಸಿಲ್ಲ!" ಎಂದು ಒಮ್ಮೆಲೆ ಎಚ್ಚರಗೊಂಡವರಂತೆ ಅವನು ಉತ್ತರ ಕೊಟ್ಟ.

"ಇವರ ಬೆನ್ನು ಹತ್ತಿ ಹೋಗಬೇಕೆನ್ನುವಿಯೇನು ?" ಎಂದು ಸ್ವಾಮಿದಾಸರ ಕಡೆಗೆ ದೃಷ್ಟಿ ಹೊರಳಿಸಿ ಗಣಪತರಾಯರು ಪ್ರಶ್ನಿಸಿದರು.

"ಹೋಗುವದು ತುಂಬ ನನ್ನ ಮನಸ್ಸಿನಲ್ಲಿದೆ ಆದರೆ ಅವರು ಈಗ ಬೇಡವೆನ್ನುತ್ತಾರೆ. ಇನ್ನೊಂದೆರಡು ದಿನಗಳಲ್ಲಿ ಅವರೇ ಇಲ್ಲಿಂದ ಹರಿದ್ವಾರದ ಕಡೆಗೆ ಹೊರಡುವರು" ಎಂದ ನರಹರಿ.

"ವಿಹಿತವೇ ಆಯಿತು. ಹಾಗಿದ್ದರೆ ಈ ನಿನ್ನ ಸ್ವಾಮಿಗಳು ಒಳ್ಳೆಯವರಾಗಿ ಕಾಣುತ್ತಾರೆ. ಇವರು ಹೋದ ಮೇಲೆ ನೀನೇನು ಮಾಡುವಿ ಇಲ್ಲಿ? ಮೊಗ್ಗಾವಿಗೆ ನಡೆ. ನಮ್ಮ ಮನೆಯಲ್ಲಿಯೇ ಇರುವಂತಿ ಶೀನೂನ ಪರೀಕ್ಷೆಯೂ ಸುರುವಾಗುವದಿದೆ. ಮುಗಿದ ಕೂಡಲೆ ಬರುತ್ತಾನೆ." ಎಂದು ಗಣಪತರಾಯರು ಒಂದು ಕಲ್ಲೊಗೆದು ನೋಡಿದರು.

"ಇನ್ನು ನಾನು ಮೊಗ್ಗಾವಿಗೆ ಕಾಲಿಕ್ಕುವದಿಲ್ಲ" ಎಂದ ನರಹರಿ ಅವನ ಅಂತಃಕ್ಷೋಭೆಯನ್ನು ಅವನ ಮುಖಮುದ್ರೆಯು ಸ್ಪಷ್ಟವಾಗಿ ಪ್ರತಿಬಿಂಬಿಸುತ್ತಿತ್ತು.

ಈ ಮಾತನ್ನು ಮುಂದುವರಿಸುವ ಮನಸ್ಸಿಲ್ಲದೆ ಗಣಪತರಾಯರು ಸುಮ್ಮನಾದರು. ಬಳಿಕ "ಹಾಗಾದರೆ ಎಲ್ಲಿ ಹೋಗುವಿ?" ಎಂದು ಕೇಳಿದರು.

"ಸ್ವಾಮಿದಾಸರು ಬ್ರಹ್ಮಪುರಿಯನ್ನು ಬಿಟ್ಟ ನಂತರ ನಾನು ಪುಣೆಗೆ ಹೋಗುತ್ತೇನೆ. ಸೂಟಿಯಲ್ಲಿಯೂ ಹಾಸ್ಟೆಲಿನಲ್ಲಿಯೇ ಇರುತ್ತೇನೆ. ಕಾಲೇಜು ಪ್ರಾರಂಭವಾದೊಡನೆ ಅಭ್ಯಾಸಕ್ಕೆ ಮೊದಲು ಮಾಡುತ್ತೇನೆ." ಎಂದ ನರಹರಿ.

"ಆಗಬಹುದು, ಇದು ಒಳ್ಳೆಯ ಹಂಚಿಕೆ" ಎಂದರು ಗಣಪತರಾಯರು. ಅವರ ತಲೆಯ ಮೇಲಿನ ಭಾರವಿಳಿದಂತಾಗಿತ್ತು. ಮೊಗ್ಗಾವಿಗೆ ಬರದಿದ್ದರೇನಾ

ಯಿತು; ನರಹರಿಯು ಹಾದಿಗೆ ಹತ್ತಿದನಲ್ಲ? ಶೀನೂನ ಜೊತೆಗಾರನಾದ ನರಹರಿಯನ್ನು ರಾಯರು ಪ್ರೀತಿಯಿಂದ ಕಾಣುತ್ತಿದ್ದರು.

ನರಹರಿ–ಗಣಪತರಾಯರ ಸಂಭಾಷಣೆ ನಡೆದಾಗ ಇತ್ತ ಪಂಡಿತರ ಕೈಯಲ್ಲಿ ಸ್ವಾಮಿದಾಸರ ಪರೀಕ್ಷೆ ನಡೆದಿತ್ತು. ಪಂಡಿತರು 'ದೇವಭೋಳೆ' ಮನುಷ್ಯರು ತಮ್ಮ ವ್ಯವಹಾರದಲ್ಲಿ ಅವರೆಷ್ಟು ನಿಪುಣರಾಗಿದ್ದರೋ ಅಷ್ಟೇ ಮಾನ ಮರ್ಯಾದೆಯಲ್ಲಿ ಅವರು ಉದಾರಿಗಳಾಗಿ ಇದ್ದರು. ಸ್ವಾಮಿದಾಸರೊಡನೆ ನಡೆದ ಸಂಭಾಷಣೆಯಲ್ಲಿ ಅವರು ಸ್ಥಿತಪ್ರಜ್ಞರು ಹಾಗೂ ತಾನು ಶುದ್ಧ ಅಜ್ಞಾನಿಗಳೆಂಬ ತಳಹದಿಯ ಮೇಲೆಯೇ ಅವರು ಮಾತು ಬೆಳಿಸಿದರು.

"ಸ್ವಾಮೀಜಿ, ಇಂದು ತಮ್ಮ ಭೆಟ್ಟಿಯಾಗಿದ್ದು ನನಗೆ ಸಂತೋಷ. ದೇವರ ಬಗ್ಗೆ ನನ್ನ ವಿಚಾರಗಳು ಒಬ್ಬ ಒಕ್ಕಲಿಗನ ವಿಚಾರಗಳಂತಿವೆ. ಆ ಸಂಸ್ಕೃತಿಯ ಗಂಧವೇ ನನಗಿಲ್ಲ ದೇವರನ್ನು ಕಾಣಬೇಕೆಂದು ಕೆಲವರಿಗೆ ಹಂಬಲವಾಗುವದಂತೆ ಇದು ನಿಜವೆ?" ಎಂದರು ಪಂಡಿತರು.

"ಯಾರಿಗೆ ಹಾಗೆ ಹಂಬಲವಾಗುವದೋ ಅವರ ಮಟ್ಟಿಗೆ ಅದು ನಿಜವಲ್ಲದೆ ಮತ್ತೇನು?" ಎಂದರು ಸ್ವಾಮಿದಾಸರು.

"ನಿಮಗೆ ಇಂಥ ಹಂಬಲದ ಅನುಭವವಿದೆಯೇ?" ಎಂದರು ಪಂಡಿತರು.

"ಇರಬೇಕಾದಷ್ಟು ಇಲ್ಲವೆಂದೇ ಹೇಳಬೇಕು. ಇಲ್ಲದಿದ್ದರೆ ಏಕಾಂತವಾಸವನ್ನು ಬಿಟ್ಟು ನಾನು ಹೊರಗೇಕೆ ಬರುತ್ತಿದ್ದೆ?" ಸ್ವಾಮಿದಾಸರು ನಿಟ್ಟುಸಿರುಗರೆದರು.

"ಈಗಲೇ ನೀವು ಸನ್ಯಾಸಿಗಳಾಗಿದ್ದೀರಿ. ಯಾರಾದರೂ ಕೊಟ್ಟರೆ ಮಾತ್ರ ಊಟ, ಅದೂ ಒಂದು ಹೊತ್ತೆಂದು ಕೇಳಿದ್ದೇನೆ ಇದಕ್ಕಿಂತ ಇನ್ನೂ ಕಠಿಣ ಪರಿಸ್ಥಿತಿಯೆಂದರೆ ಯಾವುದು?" ಎಂದು ಪಂಡಿತರು ಗಾಬರಿಯಾಗಿ ಕೇಳಿದರು.

"ಕಠಿಣ ಪರಿಸ್ಥಿತಿ ಯಾವುದೆಂಬುದು ಅವರವರ ದೃಷ್ಟಿಕೋನದ ಮೇಲೆ ಅವಲಂಬಿಸಿರುತ್ತದೆ" ಎಂದು ಶಾಂತರಾಗಿ ಸ್ವಾಮಿದಾಸರು ಹೇಳಿದರು.

"ಕಠಿಣ ಪರಿಸ್ಥಿತಿ ಯಾವುದೆಂಬುದು ನನಗೆ ಗೊತ್ತು!" ಎಂದು ಹತ್ತಿರದಲ್ಲಿಯೇ ಮಾತು ಕೇಳುತ್ತ ನಿಂತ ಕುಮಾರಿಯೆಂದಳು.

"ಯಾವುದು, ಪ್ರಮಿಲಾ?" ಎಂದರು ಆಕೆಯ ತಂದೆಯವರು.

"ನೀವಿಬ್ಬರೂ ಮಾತಾಡುವದನ್ನು ಕೇಳುತ್ತ ನಿಲ್ಲುವದುಂದಳ!" ಎಂ ಮಗಳು.

ಅದಕ್ಕೆ ಪ್ರತಿಯಾಗಿ ಪಂಡಿತರು ಹೊಟ್ಟೆತುಂಬ ನಕ್ಕರು. ಪ್ರಮಿಲೆಯೇ ಅವರ ಸರ್ವಸ್ವ; ಮಗ, ಮಗಳು—ಎಲ್ಲ ಆಕೆಯೇ ಆಗಿದ್ದಳು. ಅವರಿಗೆ ಎರಡನೆಯ ಮಗನಿರಲಿಲ್ಲ ಮುಂದೆ ಆಗುವ ಸಂಭವವೂ ಇರಲಿಲ್ಲ ಪ್ರಮಿಲೆಯು ಚಿಕ್ಕವಳಿರುವಾಗಲೇ ತನ್ನ ತಾಯಿಯನ್ನು ಕಳೆದುಕೊಂಡಿದ್ದಳು. ಹೀಗಾಗಿ ಮಗಳ ಮಾತೆಲ್ಲ ಬಿನದ, ಅವಳ ಬರವಣಿಗೆಯೆಲ್ಲ ಪ್ರತಿಭೆಯೆಂಬ ಅಭಿಪ್ರಾಯಕ್ಕೆ ಪಂಡಿತರು ಮನಸೋತಿದ್ದರು.

ನನ್ನ ಮಗಳು ಬಹಳ ಜಾಣೆ, ಸ್ವಾಮಿಜಿ! ನಾಳೆ ಇಂಟರ್ ಪರೀಕ್ಷೆಗೆ ಕೂಡುವಳು, ನೋಡಿರಿ! ವಿನೋದದಲ್ಲಿ ಆಕೆ ಎತ್ತಿದ ಕೈ. ಆಕೆಯ ಮಾತಿಗೆ ಕಾಲೇಜಿನಲ್ಲಿ ಪ್ರಿನ್ಸಿಪಾಲ್ ಅಪ್ಪಾಸಾಹೇಬ ಪರಾಂಜಪೆಯವರೂ ಬಿದ್ದು ಬಿದ್ದು ನಗುವರಂತೆ. ಅಪ್ಪಾಸಾಹೇಬರೆಂದರೆ ನಿಮಗೆ ಗೊತ್ತಷ್ಟೆ? ಆ ನಮ್ಮ ರ್‍ಯಾಂಗ್ಲರ್, ನಮ್ಮ...."

ಸ್ವಾಮಿದಾಸರಿಗೆ ಇದಕ್ಕೂ ಹೆಚ್ಚಿನ ಮಾತಿಗೆ ಕಿವಿಗೊಡುವ ಪ್ರಸಂಗ ಬಂದಿರಲಿಲ್ಲ ಗಣಪತರಾಯರು ನರಹರಿಯೊಡನೆ ಮಾತು ಮುಗಿಸಿ ಕಟ್ಟೆಯ ಕಡೆಗೆ ತಿರುಗಿದ್ದರು ನರಹರಿಗೆ ಎಲ್ಲ ಒಪ್ಪಿಗೆಯಾಗಿದೆ "ಕೇಶವರಾವ್ ನಾನು ಬಂದ ಕೆಲಸ ಆದಂತಾಯಿತು. ಇನ್ನು ಒಂದು ಮಾತು ಉಳಿದಿದೆ!" ಎಂದು ಅವರು ಸ್ವಾಮಿದಾಸರೆಡೆಗೆ ತಿರುಗಿ: "ತಾವು ಒಂದು ವಿಷಯದಲ್ಲಿ ಉಪಕಾರಮಾಡಬೇಕು. ಇನ್ನೆರಡು ದಿನಗಳಲ್ಲಿ ತಾವು ಹರಿದ್ವಾರದ ಕಡೆಗೆ ಹೋಗುವವರೆಂದು ಕೇಳುತ್ತೇನೆ. ಅಲ್ಲಿಯ ವರೆಗೆ ಬಂದು ತಾವು ನಮ್ಮ ಜೊತೆಗೆ ಕೇಶವರಾಯರ ಮನೆಯಲ್ಲಿಯೇ ಇರಬೇಕು ತಾವು ಬಂದರೆ ನರಹರಿ ಬರುತ್ತಾನೆ. ನರಹರಿ ಬರದಿದ್ದರೆ....ನಮ್ಮ ಮನಸ್ಸಿಗೆ ಕಾಳಜಿಯಾಗುತ್ತದೆ" ಎಂದು ಗಣಪತರಾಯರು ಮೆಲ್ಲನೆ ತಮ್ಮ ಸೂಚನೆಯನ್ನು ಮುಂದಿಟ್ಟರು.

"ಬರಬೇಕು, ಸ್ವಾಮಿಜಿ! ನಮ್ಮ ಮನೆಯೆಂದರೆ ಗಣಪತರಾಯರದೇ ಇದ್ದಹಾಗೆ. ಸಂಕೋಚಪಟ್ಟುಕೊಳ್ಳಬಾರದು" ಎಂದು ಕೇಶವರಾಯರು ದನಿ

ಗೂಡಿಸಿದರು. ಒಳಗೊಳಗೆ,—ಈ ಬ್ರಾಹ್ಮಣ ನಮ್ಮಲ್ಲಿಯೇ ಧ್ವಜ ಊರಿದರೆ ಎಂಬ ಚಿಂತೆಯು ಅವರನ್ನು ಬಾಧಿಸುತ್ತಿತ್ತು.

ಸ್ವಾಮಿದಾಸರು ಕ್ಷಣಹೊತ್ತು ವಿಚಾರಮಗ್ನರಾದರು. ಆ ಮೇಲೆ "ಆಗಬಹುದು. ಆದರೆ ಒಂದು ಮಾತನ್ನು ತಾವು ಮನ್ನಿಸಬೇಕು. ಇಂದು ಮಧ್ಯಾಹ್ನ ತಮ್ಮ ಜೊತೆಗಿದ್ದು ಸಂಜೆಯ ಗಾಡಿಗೆ ನಾನು ಹೊರಡುತ್ತೇನೆ" ಎಂದು ಅವರು ಗಣಪತರಾಯರಿಗೆ ಹೇಳಿದರು.

ಖಾಸಗಾಂವಿಗೆ ಬರಲು ಸ್ವಾಮಿದಾಸರ ಒಪ್ಪಿಗೆ ದೊರೆತುದನ್ನು ರಾಯರು ನರಹರಿಗೆ ತಿಳಿಸಿದರು. "ನೋಡಿರಿ, ಮಿಸ್ಟರ್ ಮುನವಳ್ಳಿ! ಇವತ್ತಿನ ಮುಂಜಾನೆಯೂಟ ನಮ್ಮಲ್ಲಿಯೇ ಎಂದು ನಾನು ಹೇಳಿದ್ದಿಲ್ಲವೆ? ಈಗ ಮುಂಜಾವು ಇಲ್ಲಿಯೇ ಮುಗಿಯಿತು. ಆದರೇನು? ಮಧ್ಯಾಹ್ನದ ಊಟ ನಮ್ಮಲ್ಲಿ!" ಎಂದು ಕುಮಾರಿಯು ನಗೆಯಾಡಿದಳು.

ಬಳಿಕ ಐವರೂ ಆ ಸಣ್ಣ ಬಗಿಯಲ್ಲಿಯೇ ಕುಳಿತ ಮೇಲೆ ಪರಿವಾರವು ಖಾಸಗಾಂವಿಗೆ ಹೊರಟಿತು. ಹರಕು ಶರ್ಟು-ಕೋಟನ್ನು ಬಿಟ್ಟರೆ ಹಾಕಲು ನರಹರಿಗೆ ಅರಿವೆಯಿರಲಿಲ್ಲ ಇದ್ದವುಗಳನ್ನೇ ಬ್ಯಾಗಿನಿಂದ ತೆಗೆದು ಧರಿಸಿದ

ಸ್ವಾಮಿದಾಸರು ಎರಡು ದಿನ ಮೊದಲೇ ತಮ್ಮ ಪ್ರವಾಸವನ್ನು ಬೆಳೆಸಲಿರುವರೆಂಬುದನ್ನು ತಿಳಿದು ನರಹರಿಗೆ ವಿಷಾದವಾಗಿತ್ತು. ಇದರಲ್ಲಿ ಗಣಪತರಾಯರ 'ಚಲಾಕಿ' ಅವನಿಗೆ ತಿಳಿದಿರಲಿಲ್ಲ. ಅಂದು ಮಧ್ಯಾಹ್ನವೆಲ್ಲ ಸ್ವಾಮಿದಾಸರ ಶುಶ್ರೂಷೆಯಲ್ಲಿಯೇ ಅವನು ಮಗ್ನನಾಗಿದ್ದನು. ಗಾಡಿಯ ಹೊತ್ತಾದ ಮೇಲೆ ಎಲ್ಲರನ್ನೂ ಸ್ವಾಮಿದಾಸರು ಬೀಳ್ಕೊಂಡು ಹೊರಟಾಗ,—ನಿಲ್ಮನೆಗೆ ಹೋಗಿ ಟಿಕೀಟು ತೆಗೆದುಕೊಟ್ಟಿದ್ದನು. ಸ್ವಾಮಿದಾಸರು ಈಗ ನೆಟ್ಟಗೆ ನಾಸಿಕಕ್ಕೆ ಹೋಗುವವರಿದ್ದರು.

ಅನೇಕ ಮಾತುಗಳಾದವು. ನರಹರಿಯ ಅಂತಃಕರಣವು ಒತ್ತರಿಸಿ ಬಂದಿತ್ತು. ತನಗೆ ಯಾವಾಗಲೋ ಕಳೆದುಹೋದ ತಾಯ್ಗರುಳನ್ನು ಅವನು ಸ್ವಾಮಿದಾಸರಲ್ಲಿ ಕಂಡಿದ್ದ.

"ನನ್ನ ಪ್ರಶ್ನೆಯು ಉದ್ಭೂತವಾದೊಡನೆ ನೀವು ಭೆಟ್ಟಿಯಾದಿರಿ. ಅದು ಮುಗಿಯಲುಬಂದೊಡನೆ ನೀವು ಹೋಗುತ್ತಿದ್ದೀರಿ. ಇದು ಎಂತಹ ಚಮತ್ಕಾರ! ಇನ್ನು ನಿಮ್ಮ ಭೆಟ್ಟಿ ಎಂದು?" ಎಂದು ನರಹರಿ ಕೇಳಿದ.

"ನಮ್ಮನ್ನು ಈ ರೀತಿ ಕೂಡಿಸಿದ ಭಗವಂತನಿಗೇ ಗೊತ್ತು. ಆದರೆ ಸಮೀಪದಲ್ಲಿಯೇ ಮತ್ತೆ ಭೆಟ್ಟಿಯಾಗಬಹುದು."

ತುಸು ಹೊತ್ತಿನ ಮೇಲೆ ನರಹರಿ ಹೇಳಿದ: "ನನ್ನಿಂದ ತಮಗೆ ಈ ಕೆಲವು ದಿನಗಳಲ್ಲಿ ತೊಂದರೆಯಾಗಿರಬಹುದು, ಕ್ಷಮಿಸಬೇಕು."

"ಹಾಗಲ್ಲ; ನನ್ನಿಂದ ನಿಮಗೆ ಹೇಗೆ ಸಮಾಧಾನವಾಯಿತೋ ಹಾಗೆಯೇ ನಿಮ್ಮ ಸಹವಾಸ ನನಗೆ ಸಹಾಯಕಾರಿಯಾಗಿದೆ. ನಿಮ್ಮಂಥ ಎಳೆಗರುಳಿನವರು ಈ ದೇಶದಲ್ಲಿ ಎಷ್ಟು ಜನ ಸಿಕ್ಕಬಹುದು!" ಎಂದು ಉದ್ಗಾರ ತೆಗೆದರು ಸ್ವಾಮಿದಾಸರು.

"ಕೃಷ್ಣೆಯಿಂದ ಗೋದಾವರಿಗೆ ಹೊರಟಿರಿ. ಆ ಮಹಾಮಾತೆಯರು ನಿಮ್ಮ ದಾರಿಯನ್ನು ಸುಗಮವಾಗಿಸಲಿ!" ಎಂದ ನರಹರಿ

"ತಥಾಸ್ತು" ಎಂದು ಸ್ವಾಮಿದಾಸರು ಮೆಲುನಗೆ ನಕ್ಕರು.

ಗಾಡಿಯು ಬಂತು. ಸೀಟಿಯಾಯಿತು. ಸ್ವಾಮಿದಾಸರು ಗಾಡಿ ಹತ್ತುವಾಗ ನರಹರಿಯು ಅವರಿಗೆ ಮಣಿದು ನಮಸ್ಕಾರ ಮಾಡಿದ ಅವನು ಮಣಿಯುವದರಲ್ಲಿಯೇ ಅವನನ್ನು ಹಿಡಿದು ತಬ್ಬಿಕೊಂಡು: "ನೀವು ಹಾಗೆ ಮಾಡಬಾರದು. ನನ್ನ ತರುಣ ಮಿತ್ರರು ನೀವು!" ಎಂದು ಅವರು ಗಾಡಿ ಹತ್ತಿ ಬಾಗಿಲಲ್ಲಿ ನಿಂತರು ಗಾಡಿಯು ಕಣ್ಮರೆಯಾಗುವ ತನಕ ಅವರ ಮೊಗವನ್ನು ಹುಡುಕಿ ನರಹರಿಯು ಎವೆಯಿಕ್ಕದೆ ನೋಡಿದ. ಆಮೇಲೆ ದುಃಖವು ಒಮ್ಮೆಲೆ ಒತ್ತರಿಸಿ ಬರಲು ಎರಡೂ ಕೈಗಳಿಂದ ಮೋರೆ ಮುಚ್ಚಿಕೊಂಡು ಶಿಶುವಿನಂತೆ ಬಿಕ್ಕಿದ. ಹೊಸದಾಗಿ ದೊರಕಿದ ತಾಯಿಯನ್ನು ಮತ್ತೆ ಅವನು ಕಳೆದುಕೊಂಡ ಹಾಗಾಗಿತ್ತು.

ನರಹರಿಯು ತಿರುಗಿ ಮನೆಗೆ ಬರುವಷ್ಟರಲ್ಲಿ ಭಾರಿ ಊಟದ ತಯಾರಿ ನಡೆದಿತ್ತು. ಗಣಪತರಾಯರಿಗೆ ಒಂದು 'ಪಾರ್ಟಿ' ಆಗಬೇಕಲ್ಲ? ಮನೆಯು ಹಳೆಯ ತರಹದ ವಾಡೆ. ಇದೊಂದು ಪುರಾತನಕಾಲದ ದೇಶಪಾಂಡೆ-ದೇಶಮುಖರ ಮನೆಯಿರಬೇಕೆಂದು ನೋಡಿದವರಿಗೆ ಕೂಡಲೆ ಕಾಣುವಹಾಗಿತ್ತು. ನರಹರಿಯು ಒಳಗೆ ಹೋದಾಗ ಪಂಡಿತರು ತಮ್ಮ ವಂಶವೃಕ್ಷವನ್ನು ಗಣಪತರಾಯರಿಗೆ ವಿವರಿಸಿ ಹೇಳುತ್ತಿದ್ದರು. ರಾಯರು ನಿರ್ವಾಹವಿಲ್ಲದೆ ಕೇಳುತ್ತಿದ್ದರು.

ಅಂತು ಶಿವಛತ್ರಪತಿಯ ಕಾಲಕ್ಕೆ ಪ್ರತಿಷ್ಠೆಯನ್ನು ಪಡೆದ ಮನೆತನ ವಿದು ನಿಮ್ಮದು!" ಎಂದರು ರಾಯರು.

"ಅಲ್ಲದೆ ಮತ್ತೆ ಕಂಪನಿಯ ವಿರುದ್ಧ ನಡೆದ ಬಂಡಾಯದ ತನಕ ನಮ್ಮ ಮನೆಯ ವೈಭವ ಅವಿಚ್ಛಿನ್ನವಾಗಿ ಸಾಗಿತು. ನಮ್ಮ ಅಜ್ಜಂದಿರ ಮೇಲೆ ಕಂಪನಿಯ ಶಂಕೆಯ ಬಂದು ನಮ್ಮ ಜಹಗೀರ-ಸಂಪತ್ತನ್ನೆಲ್ಲ ಕಸಿದು ಕೊಂಡರು. ಈಗ ಉಳಿದದ್ದು ಈ ಮೂರು ಸಾವಿರದ ಉತ್ಪನ್ನ. ಅದನ್ನು ಮರಳಿ ದೊರಕಿಸುವ ಹಾದಿ ನಿಮಗೇನಾದರೂ ಕಾಣುವದೆ? ಹಾಗಿದ್ದರೆ ನಮ್ಮ ಸಂಸ್ಥಾನದಲ್ಲಿ ನಿಮಗೊಂದು ಪಾಲು........"

ಬರಿಗೈಯಿಂದ ಮೊಳ ಹಾಕುವದು ಗಣಪತರಾಯರಿಗೆ ಎಷ್ಟೊ ರುಚಿಸು ತ್ತಿರಲಿಲ್ಲ. ಕೂತ ಜಾಗದಿಂದೆದ್ದು 'ಹಾಲಿ'ನಲ್ಲಿ ಅತ್ತಿಂದಿತ್ತ ತಿರುಗಾಡುತ್ತ "ಇದಕ್ಯಾವ ಹಾದಿ? ನಿಮಗೆ ಗಂಡಸುಮಗನಿದ್ದರೆ ಅವನನ್ನು ಐ ಸಿ.ಎಸ್ ಗಾದರೂ ಕಳಿಸಿರೆಂದು ಹೇಳುತ್ತಿದ್ದೆ. ಆದರೆ ಪ್ರಮಿಲಾ ಗಂಡಸಲ್ಲ! ಒಬ್ಬ ಐ.ಸಿ.ಎಸ್. ಹುಡುಗನನ್ನು ಹುಡುಕಿ ಪ್ರಮಿಲಾನನ್ನು ಅವನಿಗೆ ಮದುವೆ ಮಾಡಿಕೊಡಿರಿ!" ಎಂದರು ಗಣಪತರಾಯರು.

"ನೋಡೋಣ. ಅದೂ ಒಂದು ಯತ್ನವಿದೆ. ನಾನು ಪ್ರಮಿಲಾನಿಗೆ ಕಲಿಸುತ್ತಿರುವದು ಅದಕ್ಕಾಗಿಯೇ ಅಲ್ಲವೆ?" ಎಂದರು ಪಂಡಿತರು.

ಇಷ್ಟರಲ್ಲಿ ನರಹರಿ ಬಂದಿದ್ದ. ಅವನು ಬಂದಾಗ ಪ್ರಮಿಲಾ ಅಡಿಗೆ ಮನೆಯಲ್ಲಿ ಮೇಲ್ವಿಚಾರಣೆಯನ್ನು ಮಾಡುತ್ತಿದ್ದಳು. ಅಲ್ಲಿ ಅಡಿಗೆ ಮಾಡು ತ್ತಿದ್ದವರು,—ಮಾಂಸಿ. ಹೆಂಡತಿ ತೀರಿಕೊಂಡಂದಿನಿಂದ ತಮ್ಮ ದೂರದ ಆಪ್ತ ರಾದ ವಿಠೂಬಾಯಿಯೆಂಬ ವಿಧವೆಯನ್ನು ಮನೆಗೆ ಕರೆಯಿಸಿಕೊಂಡು ಪಂಡಿ ತರು ಅವರನ್ನು ಪ್ರಮಿಲೆಗೆ ಸಾಕುತಾಯಿಯನ್ನಾಗಿ ಮಾಡಿದ್ದರು. ಪಂಡಿ ತರ ಸಂಸಾರವೂ ಸುಗಮವಾಗಿದ್ದಿಲ್ಲ. ಅವರಿಗೆ ಹುಟ್ಟಿದ ಹತ್ತು ಮಕ್ಕಳು ಹುಟ್ಟಿದೊಡನೆ, ಕೆಲವು ತಿಂಗಳಲ್ಲಿಯೇ ಒಂದೊಂದಾಗಿ ತೀರಿಹೋಗಿದ್ದವು. ಪ್ರಮಿಲೆಯು ಅವರಿಗೆ ಹನ್ನೊಂದನೆಯ ಮಗು. ಆಕೆ ಎರಡು ವರ್ಷದವ ಳಿರುವಾಗ ಪಂಡಿತರ ಹೆಂಡತಿಯು ಇನ್ನೊಂದು ಮಗುವನ್ನು ಹೆತ್ತು ಆ ಮಗುವಿನೊಡನೆ ತೀರಿಹೋದಳು. ಇನ್ನೊಂದು ಮದುವೆಯಾಗಿ ಮತ್ತೆ ಪಟ ಪಟನೆ ಹುಟ್ಟಿ ಸಾಯುವ ಮಕ್ಕಳ ಸಂತೆಯನ್ನು ಮನೆಯಲ್ಲಿ ಹೂಡಲು

ಪಂಡಿತರ ಮನಸ್ಸಿರಲಿಲ್ಲ. ಮೇಲಾಗಿ ಪ್ರಮಿಲಾಲೆಯು ಅವರ ಮೋಹ–ಮಮತೆಯ ಉತ್ಸವಮೂರ್ತಿಯಾಗಿದ್ದಳು. ಆಕೆಗೆ ಒಬ್ಬ ಮಲತಾಯಿಯನ್ನು ತರುವ ವಿಚಾರವು ಅವರಿಗೆ ಸಮ್ಮತವಾಗಲಿಲ್ಲ. ಆದಕಾರಣ 'ಮಾಂಸಿ' ಯನ್ನು ಕರೆಯಿಸಿಕೊಂಡಿದ್ದರು. 'ಮಾಂಸಿ'ಯು ಪ್ರಮಿಲಾಲೆಗೆ ಸಾಕುತಾಯಿಯಾದಂತೆ ಪಂಡಿತರಿಗೂ ಗಾಂಧರ್ವಪತ್ನಿಯೆಂದು ಜನರು ಆಡಿಕೊಳ್ಳುತ್ತಿದ್ದರು. ಆದರೆ ಪಂಡಿತರು ಅದಕ್ಕೆ ಕಿವಿಗೊಟ್ಟಿರಲಿಲ್ಲ.

ನರಹರಿಯು ಬರುವದನ್ನು ಒಳಗಿನಿಂದ ನೋಡಿದ ಪ್ರಮಿಲಾಲೆಯು ಓಡಿ ಬಂದು: "ಮಿಸ್ಟರ್ ಮುನವಳ್ಳಿ, ನಿಮ್ಮ ಯೋಗಿಮಹರಾಜರನ್ನು ಕಳಿಸಿದಿರಾ? ಒಳ್ಳೆಯದಾಯಿತು! ಸುಸಂಸ್ಕೃತರ ಸಹವಾಸಕ್ಕೆ ನಿಮಗೆ ಈಗ ವೇಳೆ ಸಿಕ್ಕಿತು! ಪುಣೆಯಿಂದ ಇಂದು ಕುಡಚಿ ಬಂದಿದ್ದಾರೆ. ಅವರನ್ನು ಊಟಕ್ಕೆ ಕರೆದಿದ್ದೇನೆ." ಎಂದು ಹೇಳಿದಳು

ಕುಡಚಿ ಯಾರು? ಎಂದು ಕ್ಷಣಹೊತ್ತು ನರಹರಿಯು ವಿಚಾರ ಮಾಡಿದ. ಕುಡಚಿ! ಅವನೇ ಕರ್ನಾಟಕ ಕ್ಲಬ್ಬಿನ ಸೆಕ್ರೆಟರಿ! ಕನ್ನಡವನ್ನು ಮನೆಯಲ್ಲಿ ಮಾತನಾಡುತ್ತಿದ್ದರೂ ಅದನ್ನು ತಿರಸ್ಕರಿಸುವ ವಿದ್ಯಾರ್ಥಿ! ಕರ್ನಾಟಕದಲ್ಲಿ ಎಲ್ಲರಿಗೂ ಮರಾಠಿ ಬರುತ್ತದೆಂದು ಪ್ರೊ. ಪಟವರ್ಧನರಿಗೆ ಹೇಳಿದ ಮಹಾಪುರುಷ! ಬರಲೊಲ್ಲನೇಕೆ! ಎಂದು ನರಹರಿಯು ಮನಸ್ಸಿನಲ್ಲಿಯೇ ಅಂದುಕೊಂಡ.

ಪ್ರಮಿಲಾಲೆಯಂತೆ ಕುಡಚಿಯೂ 'ಪ್ರಿವಿಯಸ್' ಪಾಸಾಗಿ ಇಂಟರಿನಲ್ಲಿ ಓದುತ್ತಿದ್ದ. ಅವನೂರೂ ಖಾಸಗಾಂವಿ. ಪಂಡಿತರ ಮನೆಯೆದುರಿಗೇ ಕುಡುಚಿಯ ಮನೆಯಿದ್ದಿತು. ಅವನ ತಂದೆ ತೀರಿಕೊಂಡಿದ್ದರು. ಮನೆಯಲ್ಲಿ ತಾಯಿ ಹಾಗು ಮದುವೆಯಾಗಲಿರುವ ತಂಗಿ,—ಹೀಗೆ ಇಬ್ಬರಿದ್ದರು. ಸಾಕಷ್ಟು ಹೊಲದ ಉತ್ಪನ್ನವಿದ್ದುದರಿಂದ ಪುಣೆಯಲ್ಲಿ ಕಲಿಯುವದು ಕುಡಚಿಗೆ ಸಾಧ್ಯವಾಗಿತ್ತು. ಅವನ ತಾಯಿ ಹೊಲಮನೆಯ ವಿಚಾರವನ್ನೆಲ್ಲ ನೋಡಿಕೊಳ್ಳುತ್ತಿದ್ದರು. ಇದೊಂದು ಅಚ್ಚಗನ್ನಡ ಮನೆತನ. ಆದರೆ ಕುಡಚಿಯ ತಾಯಿ ಈ ಮನೆಗೆ ಬಂದಂದಿನಿಂದ ಅದು ಮರಾಠಿಮಯವಾಗಿತ್ತು. ಕುಡಚಿಯು ಈ ಪ್ರಭಾವದಲ್ಲಿಯೇ ಬೆಳೆದಿದ್ದ. ತಂದೆಯಿದ್ದಾಗ ಅವರೊಡನೆ ಅವನು ಕನ್ನಡ

ದಲ್ಲಿ ಮಾತನಾಡುತ್ತಿದ್ದ. ಈಗ ತಂದೆಯಿಲ್ಲದ್ದರಿಂದ ಮನೆಯಲ್ಲಿ ಕನ್ನಡವೂ ಇಲ್ಲವಾಗಿತ್ತು.

ಪ್ರಮಾಲೆಯಂತೆ, ಪರೀಕ್ಷೆಗಿಂತ ಒಂದೆರಡು ದಿನ ಮೊದಲು ಊರಿಗೆ ಬಂದುಹೋಗಬೇಕೆಂದು ಇಂದು ಕುಡಚಿಯೂ ಬಂದಿದ್ದ.

ಕುಡಚಿಯು ಮನೆಗೆ ಬಂದಾಗ ನರಹರಿಯನ್ನು ಔಪಚಾರಿಕವಾಗಿಯೇ ಮಾತನಾಡಿಸಿದ. ನರಹರಿಯಾದರೂ ತನ್ನ ಮೌನದ ಎಲ್ಲೆಯನ್ನು ಅವಶ್ಯ ಬಿದ್ದುದಕ್ಕಿಂತ ಹೆಚ್ಚಾಗಿ ಮೀರಲಿಲ್ಲ. ಎಲ್ಲರೂ ಊಟಕ್ಕೆದ್ದರು. 'ಮಾಂಸಿ' ಯವರೇ ಎಲ್ಲರಿಗೂ ಬಡಿಸುವವರು. ಅಂದಿನ ಊಟ,—ಶ್ರೀಖಂಡಪುರಿ. ಅನ್ನ ಕಾಂಡವನ್ನು ಸ್ವಲ್ಪದರಲ್ಲಿಯೇ ಮುಗಿಸಿ ಎಲ್ಲರೂ ಮೆಲ್ಲಮೆಲ್ಲನೆ ಶ್ರೀಖಂಡವನ್ನು ಮೆಲ್ಲಹತ್ತಿದರು.

"ಕರ್ನಾಟಕದಲ್ಲಿ ಶ್ರೀಖಂಡದ ಪ್ರಚಾರವಾಗಿದೆಯೇನು?" ಎಂದು ಪಂಡಿತರು ಕೈಯ್ಯಲ್ಲಿ ಶ್ರೀಖಂಡದ ಒಂದು ಮುದ್ದೆಯನ್ನು ತೆಗೆದುಕೊಂಡು ಗಣಪತರಾಯರನ್ನು ಕೇಳಿದರು.

"ಆಗಿದೆ. ಆದರೆ ಟಿಳಕ–ಗೋಖಲೆಯವರ ತತ್ವಪ್ರಚಾರದಷ್ಟಲ್ಲ. ಅದಕ್ಕೆ ಕಾರಣವಿದೆ. ಈ ವಿಷಯದಲ್ಲಿ ನಮ್ಮದೇ ಆದ ಒಂದು ಪರಮ ವಸ್ತು ಇದೆ, ನೋಡಿರಿ!"

"ಯಾವುದು, ಯಾವುದು?" ಎಂದು ಕುಡಚಿಯು ಚಕಿತನಾಗಿ ಕೇಳಿದ.

"'ಹೆತ್ತಪ್ಪ–ಕರಿಗೆಡುಬು' ಎಂದು ನಾವು ಕನ್ನಡದಲ್ಲಿ ಹೇಳುತ್ತೇವೆ." ರಾಯರು ಹೇಳಿದರು.

ಈಗ ಕುಮಾರಿಗೆ ನಗೆಯನ್ನು ತಡೆಯುವದಾಗಲಿಲ್ಲ. ಖೊಳ್ಳನೆ ನಕ್ಕುಬಿಟ್ಟಳು.

"ಕಡಬು ಮಹರಾಜಕೀ ಜೈ!" ಎಂದು ಕುಡಚಿಯು ಘೋಷಿಸಿದ.

ಇದನ್ನೆಲ್ಲ ಕೇಳಿ ನರಹರಿಯ ಮೋರೆಯು ಕೆಂಪಗಾಯಿತು. "ಪೇಶ್ವೆಯವರು ಮೊದಲು ಕರ್ನಾಟಕಕ್ಕೆ ಬಂದಿದ್ದೇಕೆ ಗೊತ್ತಿದೆಯೇನು?" ಎಂದು ಅವನು ಕೇಳಿದ.

“ಇಲ್ಲ. ಇದರಲ್ಲಿ ನಿಮ್ಮ ಸಂಶೋಧನವಿದೆಯೇನು?” ಎಂದರು ಪಂಡಿತರು.

“ಮಸಾಲಿ ಕರಿಗೆಡುಬಿನ ರುಚಿ ಹತ್ತಿ ಅವರು ಅಲ್ಲಿ ಬಂದರು!” ಎಂದ ನರಹರಿ.

ಈ ಸಲ ಕುಡಚಿ ಸುಮ್ಮನಿದ್ದ. ಗಣಪತರಾಯರು ಹೊಟ್ಟೆ ತುಂಬ ನಕ್ಕರು.

ಮುಂದೆ ತುಸು ಹೊತ್ತಾದ ಮೇಲೆ “ಕರ್ನಾಟಕ ಧುರೀಣರಿಗೆ ಇನ್ನಿಷ್ಟು ಶ್ರೀಖಂಡ ಹಾಕಿರಿ!” ಎಂದು ಮಾಂಸಿಯವರಿಗೆ ಕುಡಚಿ ಹೇಳಿದ.

“ಕರ್ನಾಟಕ ಧುರೀಣರಾರು?” ಎಂದು ಕೇಳಿದರು ರಾಯರು.

“ಮಿಸ್ಟರ್ ಮುನವಳ್ಳಿ. ಪುಣೆಯಲ್ಲೆಲ್ಲ ಅವರು ಪ್ರಸಿದ್ಧರಾಗಿದ್ದಾರೆ! ಈ ವರ್ಷ ಅವರು ಕಾಲೇಜಿಗೆ ಬಂದಿಲ್ಲ ಭಣಭಣವಾಗಿದೆ!” ಎಂದು ವ್ಯಂಗ್ಯ ಮಾಡಿದ ಕುಡಚಿ.

“ಈ ವಿಷಯದಲ್ಲಿ ನಮ್ಮ ಚಿರಂಜೀವರ ಬಗ್ಗೆ ವದಂತಿಯೇನಿದೆ?” ರಾಯರು ಕೇಳಿದರು.

“ನೀಡಗೂಂದಿಯವರೋ? ಅವರು ಮುನವಳ್ಳಿಯವರ ಬಲಗೈ!” ಕುಡಚಿ ಹೇಳಿದ.

“ಹೀಗೇನು? ಮಹರಾಷ್ಟ್ರದ ಬಗ್ಗೆ ಅಸಹನೆ ಇರದಿದ್ದರೆ ತೀರಿತು. ಕರ್ನಾಟಕದ ಬಗ್ಗೆ ಪ್ರೀತಿ ಇದ್ದರೆ ತಪ್ಪಲ್ಲ” ಎಂದು ಸಹಜವಾಗಿ ಗಣಪತರಾಯರು ನುಡಿದರು. ಈ ಮಾತು ಕುಡಚಿಯ ಮರ್ಮಕ್ಕೆ ತಗಲಿತು. ಅವನು ಸುಮ್ಮನಿದ್ದ. ಒಬ್ಬ ಮಹರಾಷ್ಟ್ರ ಪ್ರಿಯರಿಂದ ಇನ್ನೊಬ್ಬ ಮರಾಠಿ ಪ್ರಿಯರಿಗೆ ಉಡುಗೊರೆ ಸಿಕ್ಕಿದ್ದು ನೋಡಿ ನರಹರಿಗೆ ಸಮಾಧಾನವಾಯಿತು.

ಕೆಲವು ನಿಮಿಷಗಳಾದ ಮೇಲೆ, “ನಮ್ಮ ಹುಡುಗನನ್ನು ಬಿ.ಎ. ಆದ ಮೇಲೆ ಐ.ಸಿ.ಎಸ್. ಗೆ ಕಳಿಸಬೇಕೆಂದು ಮಾಡಿದ್ದೇನೆ” ಎಂದು ರಾಯರು ಪಂಡಿತರಿಗೆ ಹೇಳಿದರು.

ಪ್ರಮೀಲೆಯ ಕಿವಿ ನೆಟ್ಟಗಾದವು ಕುಡಚಿಯು ಖೇಕರಿಸಿದ. ನರಹರಿಯು ಸುಮ್ಮನಿದ್ದ.

“ಹಾಗಾದರೆ ಪ್ರಮೀಲಾನನ್ನು ನಿಮ್ಮ ಹುಡುಗನಿಗೇ ಮಾಡಿಕೊಂಡು ಬಿಡಿರಿ!” ಎಂದು ಪಂಡಿತರು ನಗೆಯಾಡಿದರು.

“ಊಹೂಂ! ಅದಾಗದು ನಾನು ಅನೇಕ ವಿಷಯುಗಳಲ್ಲಿ ಸುಧಾರಕ ನಾಗಿದ್ದೇನೆ. ಮಹಾರಾಷ್ಟ್ರವು ಹಾಕಿದ ಪಾಠವನ್ನು ಕಲಿತಿದ್ದೇನೆ. ಆದರೆ ದೇಶಸ್ಥ ಹುಡುಗನಿಗೆ ದೇಶಸ್ಥ ಹುಡಿಗಿಯೇ ಬೇಕು” ಎಂದರು ರಾಯರು.

ಆಗ ನರಹರಿಯ ಕಡೆಗೆ ತಿರುಗಿ ಪ್ರಮೀಲೆ ಕೇಳಿದಳು: “ಮಿಸ್ಟರ್. ಮುನವಳ್ಳಿ, ನೀವೇಕೆ ಐ ಸಿ.ಎಸ್. ಗೆ ಹೋಗುವದಿಲ್ಲ? ಸ್ಕಾಲರ್ ಇದ್ದೀರಿ. ಪರೀಕ್ಷೆಗೆ ಕೂತರೆ ಸಹಜವಾಗಿ ಮೊದಲನೆಯ ತರಗತಿಯಲ್ಲಿ ಬರುವಿರಿ!”

“ಮೊದಲು ಬಿ.ಎ. ಆಗಲಿ. ಆಮೇಲೆ ನೋಡೋಣ.” ಎಂದು ನರ ಹರಿ ನಕ್ಕ.

“ಅವನೂ ಹೋಗಬಹುದು. ಅವನಿಗೇನು ಕಡಿಮೆಯಾಗಿದೆ?” ರಾಯ ರೆಂದರು.

ಇಷ್ಟರಲ್ಲಿ ಪ್ರಮೀಲೆಯ ‘ಪೂಸಿ’ ಬಂತು. ಪೂಸಿಯೆಂದರೆ ಪ್ರಮೀ ಲೆಯು ಸಾಕಿದ ಬೆಕ್ಕು. ಅದನ್ನು ‘ಪೂಸಿ’ ಎಂದು ಆಕೆ ಪ್ರೀತಿಯಿಂದ ಕರೆ ಯುತ್ತಿದ್ದಳು. ಪೂಸಿಯನ್ನು ಪ್ರಮೀಲೆಯು ರಮಿಸುವ ರೀತಿಯನ್ನು ನೋಡಿ ಅನೇಕರ ಮೈಗೆ ಮುಳ್ಳು ಹಚ್ಚುತ್ತಿದ್ದವು ಅದನ್ನು ಹೆಗಲ ಮೇಲೆ ಕೂಡಿಸಿ ಕೊಳ್ಳುವದು, ತಲೆಯ ಮೇಲಿಟ್ಟು ಕುಣಿಯುವದು, ಅದರ ಬಾಯಿಯನ್ನು ಅಗಲವಾಗಿ ತೆರೆದು ಅದರಲ್ಲಿ ತನ್ನ ಬಾಯಿಯನ್ನಿಡುವದು,—ಇವೆಲ್ಲ ನಿತ್ಯದ ಕ್ರಮವಾಗಿದ್ದವು ಈಗ ‘ಪೂಸಿ’ಯನ್ನು ಪರಿಪರಿಯಾಗಿ ಆದರಿಸಿ ತೊಡೆಯ ಮೇಲೆ ಕೂಡಿಸಿಕೊಂಡು ಪ್ರಮೀಲೆಯು ಅದಕ್ಕೆ ಉಣಿಸುತ್ತಿದ್ದಳು.

ಬುದ್ಧದೇವನು ಹೇಳಿದ ಪ್ರಾಣಿದಯೆ ಮೊದಲಾದ ಪಾಠಗಳನ್ನು ನೆನೆದು ಗಣಪತರಾಯರು ಸುಮ್ಮನೆ ತಮ್ಮ ಊಟವನ್ನು ಸಾಗಿಸಿದರು.

ಊಟವಾದ ಮೇಲೆ ಕೈತೊಳೆದುಕೊಂಡು ಕೆಲವು ನಿಮಿಷ ನರಹರಿಯು ಹೊರಗೆ ಗಾಳಿಗೆ ನಿಂತಿದ್ದ. ಆಗ ಕೆಲವು ಸಾಮಾನುಗಳನ್ನು ತೆಗೆದುಕೊಂಡು ಒಂದು ವ್ಯಕ್ತಿಯು ಅವನೆಡೆಗೆ ಬಂದಿತು. ಮಾರುತಿಯೇ ಆ ವ್ಯಕ್ತಿ. ತೋಟ ದಲ್ಲಿಯ ‘ಸನ್ನಿವೇಶ’ವು ಜರುಗಿದ ಮೇಲೆ ತನ್ನ ಯಜಮಾನರ ಮನೆಯ

ವರಿಗೆ ನರಹರಿಯ ಪರಿಚಯವಿದೆಯೆಂದು ತಿಳಿದಂದಿನಿಂದ ಮಾರುತಿಗೆ ಜೀವದಲ್ಲಿ ಜೀವವಿದ್ದಿಲ್ಲ. "ರಾವಸಾಬ! ಯಾರೋ ಕಳ್ಳರು ತಮ್ಮ ಸಾಮಾನನ್ನು ಕಳವು ಮಾಡಿ ನಮ್ಮ ತೋಟದಲ್ಲಿಟ್ಟು ಹೋಗಿದ್ದರು. ಇವತ್ತು ನನ್ನ ಕಣ್ಣಿಗೆ ಬಿದ್ದವು ಸ್ವೀಕರಿಸಬೇಕು" ಎಂದು ಮಾರುತಿಯು ಅವನ ರುಪಾಯಿಗಳನ್ನೂ ಅರಿವೆ-ಅಂಚಡಿಗಳನ್ನೂ ಮುಂದೆ ಮಾಡಿದನು.

ನರಹರಿಯು ನಗುತ್ತ ಅವುಗಳನ್ನು ಇಸಿದುಕೊಂಡು: "ಇವುಗಳನ್ನು ತಿರುಗಿ ಪಡೆಯುವ ದೈವವೂ ನನ್ನದಿತ್ತು ಹಾಗಾದರೆ!" ಎಂದು ಉದ್ಗಾರ ತೆಗೆದನು.

"ರಾವಸಾಬರ ಹತ್ತಿರ ಇನ್ನೊಂದು ಬಿನ್ನಹವಿದೆ" ಎಂದು ಮಾರುತಿಯು ಅಂಜುತ್ತಂಜುತ್ತ ಹೇಳಿದನು.

"ಅದೇನು? ಅವಶ್ಯವಾಗಿ ಹೇಳು." ನರಹರಿಯೆಂದ.

"ತೋಟದಲ್ಲಿ ನನ್ನಿಂದಾದ ತಪ್ಪನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕು. ಅದನ್ನು ಯಾರೆದುರಿಗೂ ಹೇಳಬಾರದು" ಎಂದು ಮಾರುತಿಯು ನರಹರಿಯ ಕಾಲು ಹಿಡಿದ.

"ಛೇ! ಅದರಲ್ಲೇನಿದೆ. ನೀನು ಹೆದರುವ ಕಾರಣವಿಲ್ಲ" ಎಂದು ನರಹರಿಯು ಅವನನ್ನು ಸಂತವಿಸಿದ.

ದೀರ್ಘ ಮುಜುರೆ ಮಾಡಿ ಮಾರುತಿಯು ಅಲ್ಲಿಂದ ಹೋದ.

ಮರುದಿನ ಬೆಳಿಗ್ಗೆ ಗಣಪತರಾಯರು ತಮ್ಮ ಹಳೆಯ ಸ್ನೇಹಿತರಾದ ಪಂಡಿತರನ್ನು ಬೀಳ್ಕೊಂಡು ಗಾಡಿಗೆ ನಡೆದರು. ಹೋಗುವಾಗ ನರಹರಿಗೆ ಕೆಲವೊಂದು ರುಪಾಯಿ ಕೊಟ್ಟು ಮತ್ತೆ ಪುಣೆಗೆ ಕಳಿಸುವದಾಗಿ ಹೇಳಿದರು. ಈ ಮೊದಲೇ ಸ್ವಾಮಿದಾಸರ ಟಿಕೇಟನ್ನು ತೆಗೆದುಕೊಳ್ಳಲು ಅವರು ನರಹರಿಗೆ ಹಣ ಕೊಟ್ಟಿದ್ದರು ನರಹರಿಯು ಸಿಲ್ಕನೆಯವರೆಗೆ ಹೋಗಿ ಅವರನ್ನು ಕಳಿಸಿ ಬಂದ. ಅಂದು ಸಂಜೆಗೆ ನರಹರಿಯು ಪುಣೆಗೆ ಹೊರಟ. ಅದೇ ಗಾಡಿಗೆ ಪ್ರಮೀಲೆಯೂ ಹೊರಟಳು. ಆದರೆ ಆಕೆ ಹೆಣ್ಣುಮಕ್ಕಳ ಇಂಟರಿನಲ್ಲಿ ಕೂತಿದ್ದರಿಂದ ನರಹರಿಗೆ ಏನೂ ತೊಂದರೆಯಾಗಲಿಲ್ಲ. ಇನ್ನೂ ತನ್ನ ಕೆಲಸ ಮುಗಿಯದ್ದರಿಂದ ಕುಡಚಿಯು ಮರುದಿನ ಸಂಜೆಗೆ ಬರುವದಾಗಿ ಹೇಳಿದ.

ಅಂತೂ ಮೊಗ್ಗಾವಿಯಿಂದ ದಿಕ್ಕು ತಪ್ಪಿ ಹೊರಬಿದ್ದ ನರಹರಿಯ ಜೀವನವು ಈಗ ಮತ್ತೆ ಒಂದು ಕಟ್ಟಿಗೆ ಒಳಪಟ್ಟು ಮುಂದುವರಿಯಿತು.

---

## ಪ್ರಕರಣ ೫೩
## ಪುಣೆಯಲ್ಲಿ ಮತ್ತೆ ನರಹರಿ

ಮರುದಿನ ಬೆಳಿಗ್ಗೆ ಪುಣೆಯ ನಿಲ್ಮನೆಯಲ್ಲಿಳಿದಾಗ ಒಂದು ಕ್ಷಣಹೊತ್ತು ನರಹರಿಯು ದಿಙ್ಮೂಢನಾದ. ಎಲ್ಲರೂ ಪರೀಕ್ಷೆಯ ತಯಾರಿಯಲ್ಲಿರುವಾಗ ಒಂದು ವರ್ಷವನ್ನು ಕಳೆದುಕೊಂಡ ತಾನು ಲವರಿಗೆ ಏನೆಂದು ಮೋರೆ ತೋರಿಸುವುದು ಎಂದು ಚಿಂತಿಸಿದ. ತನ್ನ ಸಾಮಾನುಗಳನ್ನೆಲ್ಲ ಒಬ್ಬ ಕೂಲಿಯ ಮೇಲೆ ಹೊರಿಸಿ "ಮಿಸ್ಟರ್ ಮುನವಳ್ಳಿ; ಮಿಸ್ಟರ್ ಮುನವಳ್ಳಿ! ನಾನು ಹೋಗಿಬರುತ್ತೇನೆ! ಪರೀಕ್ಷೆ ಮುಗಿದ ಮೇಲೆ ಮತ್ತೆ ಭೆಟ್ಟಿಯಾಗೋಣ!" ಎಂದು ಪ್ರಮಿಳಾ ಪಂಡಿತಳು ಎಷ್ಟೊಂದು ಕೂಗಿಕೊಂಡಿದ್ದರೂ ಅವನಿಗೆ ಕೇಳಿಸಿದ್ದಿಲ್ಲ ಆ ಬಳಿಕ ಕುಮಾರಿಯು ತೀರ ಹತ್ತಿರ ಬಂದು "ಏಕೆ? ಬೆಳಗಾದೊಡನೆ ನೀವು ಯೋಗಸಮಾಧಿಯಲ್ಲಿದ್ದಂತೆ ಕಾಣುತ್ತದೆ? ರಾತ್ರಿ ನಿದ್ದೆಯಾಗಿಲ್ಲವೇನು?" ಎಂದು ನಕ್ಕಾಗ ಅವನು ನೆನಪಿಗೆ ತಂದುಕೊಂಡು "ಇಲ್ಲ, ಇಲ್ಲ. ವಿಚಾರದಲ್ಲಿದ್ದೆ. ಹೋಗಿಬನ್ನಿರಿ." ಎಂದು ಅವನು ಕುಮಾರಿಯನ್ನು ಬೀಳ್ಕೊಂಡ.

ಎಲ್ಲಿಗೆ ಹೋಗಬೇಕೆಂದು ಮೊದಲು ನರಹರಿಯು ವಿಚಾರ ಮಾಡಿದ. ಪುಣೆಗೆ ಬಂದು ಶೀನೂನ ಕೋಣೆಗೆ ಹೋಗದೆ ಇರುವುದು ಅವನಿಗೆ ಅಪ್ರಶಸ್ತವೆನಿಸಿತು. ಮೊದಲು ಅಲ್ಲಿಗೆ ಹೋಗಿ ಮುಂದಿನ ವಿಚಾರವೆಂದು ಅವನು ನೆಟ್ಟಗೆ "ಫರಗ್ಯುಸನ್" ಹಾಸ್ಟೆಲ್ಲಿಗೆ ಟಾಂಗಾ ತೆಗೆದುಕೊಂಡು ನಡೆದ. ನರಹರಿಯು ಹೋಗಿ ಶೀನೂನ ಕೋಣೆಯ ಬಾಗಿಲವನ್ನು ತಟ್ಟಿದಾಗ ಶೀನು ಪರೀಕ್ಷೆಗಿದ್ದ ಸಂಸ್ಕೃತ ನಾಟಕವೊಂದನ್ನು ಓದುತ್ತ ಕುಳಿತಿದ್ದ. ನರಹರಿಯನ್ನು ನೋಡಿ ಅವನಿಗೆ ಪರಮಾಶ್ಚರ್ಯವಾಯಿತು. ಮೊಗ್ಗಾವಿಯಲ್ಲಿಯ ಪುರಾಣದ ಯಾವ ಭಾಗವೂ ಅವನಿಗೆ ಗೊತ್ತಿರಲಿಲ್ಲ. ಅವನ ಅಭ್ಯಾಸದಲ್ಲಿ

ವ್ಯತ್ಯಯ ಬರಬಾರದೆಂದು ಗಣಪತರಾಯರು ಯಾವ ಸುದ್ದಿಯನ್ನೂ ಅವನಿಗೆ ತಿಳಿಸಿದ್ದಿಲ್ಲ.

"ಟೆನಿಸ್ ಪಂದ್ಯಾಟದ ಹೊತ್ತಿಗೆ ಬಾ ಎಂದು ಬರೆದರೆ ಅದು ಮುಗಿದು ಪರೀಕ್ಷೆ ಮೂರು ದಿನವಿರಬೇಕಾದರೆ ಬರಬೇಕೇ, ಸ್ವಾಮಿಜಿ?" ಎಂದು ಶೀನು ನಗೆಯಾಡಿದ.

"ನೀನು ಟೆನಿಸ್ಸಿನ ಮಾತು ಹೇಳುತ್ತೀ ಶೀನೂ! ಈ ಒಂದೆರಡು ವಾರಗಳಲ್ಲಿ ನನ್ನ ಗ್ರಹಗಳು ಪುಟಿಚೆಂಡಿನಂತೆ ನನ್ನನ್ನು ಹಿಂಸಿಸಿವೆ." ಎಂದು ನರಹರಿಯು ವಿಷಾದದಿಂದ ಮುಗುಳು ನಗೆ ನಕ್ಕ.

"ಯಾಕೆ! ಅದೇನಾಯಿತು? ಮನೆಯಲ್ಲಿ ಎಲ್ಲರೂ ಸೌಖ್ಯವಷ್ಟೆ?" ಎಂದು ಶೀನೂ ತುಸು ಗಾಬರಿಯಾಗಿ ಕೇಳಿದ. ಆದರೆ ನರಹರಿಯ ಮುಖಮಾರ್ಜನ ಚಹ ಮೊದಲಾದ ಪ್ರಾತರ್ವಿಧಿಗಳು ಇನ್ನೂ ಆಗಿಲ್ಲವೆಂದು ನೆನಪಿಗೆ ತಂದು ಮೊದಲು ಶೀನು ಅದರ ವ್ಯವಸ್ಥೆ ಮಾಡಿದ. ಚಹ-ತಿನಿಸುಗಳಾದ ಮೇಲೆ ಸ್ವಲ್ಪದರಲ್ಲಿಯೇ ನರಹರಿಯು ತನ್ನ ಕಥೆಯನ್ನೆಲ್ಲ ಹೇಳಿದ. ರಮಾಬಾಯರ ವರ್ತನವನ್ನು ನೆನೆಸಿ ಶೀನೂನ ಮೈಗೆ ನವಿರೆದ್ದವು "ಈ ಕ್ಷುದ್ರ ಜಂತುವಿನ ಸಲುವಾಗಿ ನೀನು ಒಂದು ವರ್ಷವನ್ನು ಕಳೆದುಕೊಂಡೆಯಲ್ಲ!" ಎಂದು ಶೀನು ಹಳಹಳಿಸಿದ ಸ್ವಾಮೀದಾಸರ ಭೆಟ್ಟಿಯ ವಿಷಯವನ್ನು ಕೇಳಿ "ಅಡ್ಡಿಯಿಲ್ಲ, ಈ ವರ್ಷ ನಾವು ನಿನ್ನನ್ನು 'ಸ್ವಾಮಿಜಿ' ಎಂದು ಕರೆದದ್ದು ಸಾರ್ಥಕವಾಯಿತು" ಎಂದು ನಕ್ಕ. ಗಣಪತರಾಯರಿಂದಾದ ಸಹಾಯದ ವಿಷಯವು ಬಂದಾಗ ಶೀನು ಸುಮ್ಮನಿದ್ದ. ಅದನ್ನೆಲ್ಲ ಕೇಳಿ ತನ್ನ ತಂದೆಯ ಬಗ್ಗೆ ಅವನ ಅಭಿಮಾನ ಹೆಚ್ಚಿತು.

"ಒಂದು ಮಾತು ಹೇಳುತ್ತೇನೆ, ಶೀನು! ಈ ವಸತಿಗೃಹದಲ್ಲಿ ಈಗ ನಾನಿರುವುದು ಶಕ್ಯವಿಲ್ಲ ಏಕೆಂಬುದನ್ನು ನೀನೂ ಬಲ್ಲೆ. ಊರಲ್ಲಿ ನಾನು ಒಂದು ಕೋಣೆಯನ್ನು ಹಿಡಿಯಬೇಕು. ಅಲ್ಲಿ ಸಮೀಪದ ನಂಬರು ಮನೆಯಲ್ಲಿಯೇ ನನ್ನ ಊಟ. ಮುಂದಿನ ವರ್ಷ ಪ್ರಾರಂಭವಾದ ಮೇಲೆ ನಾನು ಇಲ್ಲಿ ಇರಲು ಬರಬಹುದು" ಎಂದ ನರಹರಿ

ಶೀನೂನಿಗೆ ಈ ಮಾತು ಒಪ್ಪಿಗೆಯಾಯಿತು. ಮುಂದೆ ಇಬ್ಬರೂ ಕೂಡಿ ಊರಲ್ಲಿ ಒಂದು ಕೋಣೆಯನ್ನು ನೋಡಲು ಹೊರಟರು. ಮೋಪಕ

ರಿದ್ದ ಓಣಿಯಲ್ಲಿಯೇ ನರಹರಿಗೆ ಒಂದು ಕೋಣೆ ದೊರಕಿತು. ಅಲ್ಲಿ ಅವಶ್ಯ ವಿದ್ದ ಎಲ್ಲ ವ್ಯವಸ್ಥೆಯನ್ನೂ ಮಾಡಿ ನಂಬರು ಮನೆ ಗೊತ್ತುಪಡಿಸಿ ಸಂಜೆಯ ಕಡೆ ಬರುವುದಾಗಿ ಹೇಳಿ ಶೀನು ತನ್ನ ಕೋಣೆಯ ಕಡೆಗೆ ಮರಳಿದ.

ಇನ್ನು ನರಹರಿಯು ಪಾಟಣಕರನನ್ನು ಭೆಟ್ಟಿಯಾಗಬೇಕು. ಅದಕ್ಕಾಗಿ ಮೋಡಕರ ಮನೆಗೆ ಹೋಗದೆ ಗತ್ಯಂತರವಿರಲಿಲ್ಲ. ಯಾಕೆಂದರೆ ಹಗಲೂ ರಾತ್ರಿ ಪಾಟಣಕರನು ಅಲ್ಲಿಯೇ ತನ್ನ ಕೋಣೆಯಲ್ಲಿ ಕೂತು ಓದುತ್ತಿದ್ದ. ಈಗ ತನ್ನ ವರ್ಗದಲ್ಲಿ ಅವನೇ ಮೊದಲನೆಯವನಾಗಿದ್ದ. ಎಲ್ಲ ಪ್ರೊಫೆಸರರ ಪ್ರೀತಿಯು ಅವನ ಮೇಲೆ. ಇಂಟರಿನಲ್ಲಿ ಮೊದಲನೆಯ ತರಗತಿಯನ್ನು ಲೀಲಾ ಮಾತ್ರವಾಗಿ ಪಡೆವುದೇ ಈಗ ಅವನ ಸದ್ಯದ ಗುರಿಯಾಗಿತ್ತು.

ಇಳಿಹೊತ್ತಾದ ಮೇಲೆ ನರಹರಿಯು ಮೋಡಕರ ಮನೆಗೆ ಹೋದ. ಮೋಡಕರು ಅದೇ ಕಚೇರಿಯಿಂದ ಬಂದು ಕುಳಿತು ಚಹವನ್ನು ತೆಗೆದುಕೊಳ್ಳು ತ್ತಿದ್ದರು. ಪಾಟಣಕರನು ಪರೀಕ್ಷಾಮಂದಿರದಲ್ಲಿ ತನ್ನ ಸೀಟ್ ನಂಬರನ್ನು ತಿಳಿಯಲು ಕಾಲೇಜಿಗೆ ಹೋಗಿದ್ದ. ಬಾಗಿಲಲಲ್ಲಿ ನಿಂತು ನರಹರಿಯು ಬರುವು ದನ್ನು ನೋಡಿದ್ದ. ರಂಗೂತಾಯಿಯವರು ಒಳಗೆ ಹೋಗಿ ಮೋಡಕರಿಗೆ "ಕಾನಡೀ ಮುಲಗಾ, ಮೋಗಾಂವಿ, ವಿಷ್ಣೂಚಿ-ಸ್ನೇಹಿ" ಎಂದು ಏನೇನೋ ಹೇಳಿದರು. ಮೋಡಕರು ಹೊರಗೆ ಬಂದು "ಅರೆ! ಹೇ ಕಾಯ್! ನರಹರಿ ರಾವ್! ಮೋಗಾಂವಿ ಹಿಂದ ಹಾಕಿ ಪುಣೇಕ್ಕ ಯಾವಾಗ ಉತರಾಯಿಸಿದಿರಿ? ಊರಲೆಲ್ಲಾ ಠೀಕ್? ಒಡೀಲರ ತರಬೇತ್? ಅರೇ ರೇರೆ! ಶಾಂತಂ ಪಾಪಂ! ನಿಮ್ಮೊಡೀಲ್‌ರು ಥಕಾಯಿಸಿ ಸ್ವರ್ಗಸ್ಥರಾಗಿದ್ದು ಅಠವಣ್ ಇಲ್ಲ! ಮಾಫ್ ಮಾಡ್ರಿ ನರಹರಿರಾವ್! ಅಗಃ! ಏಕ್ ಕಪ್ ಚಹಾ ಘೇವೂನ್‌ಯೇ! ನಹಿ! ದೋನ್! ಮಲಾ ಏಕ್ ಆಣ್! ಹ್ಯಾನಾ ಏಕ್!" ಎಂದು ಮೋಡಕರು ನರ ಹರಿಯ ತಂದೆಯ ಬಗ್ಗೆ ಕೇಳಿದ ಪ್ರಮಾದವನ್ನು ಚಹದಿಂದ ತೊಳೆದುಕೊಳ್ಳಲು ಹವಣಿಸಿದರು.

"ಇದೀಗ ತೊಗೊಂಡು ಬಂದಿದ್ದೇನೆ." ಎಂದ ನರಹರಿ.

"ಛೇ ಛೇ! ಸುಸ್ತ ಒಂದು ಕಪ್ ತಗೋರಿ! ಲಿಪ್ಟನ್ ಚಹಾ! ನಾಕಾ ಥಸಬ್ಯಾಡ್ರಿ!" ಎಂದು ಮೋಡಕರು ನರಹರಿಗೆ ಚಹವನ್ನು ಕುಡಿಸಿದರು.

ತಲೆಬಾಗಿಲಲ್ಲಿಯೇ ನಿಂತುಕೊಂಡು ನರಹರಿಯ ಬಗ್ಗೆ ತಮ್ಮಲ್ಲಿಯೂ ಆಸ್ಥೆಯಿದೆಯೆಂದು ತೋರಿಸಲು ರಂಗೂತಾಯಿಯವರು ತಮ್ಮ ಹರಕು ಮುರುಕು ಕನ್ನಡದಲ್ಲಿ ಕೇಳಿದರು "ನಿಮ್ ಅವ್ವಾಂದು ತರಬೇತ್ ಠೀಕ್ ?"

ಮೋಡಕರು ಮತ್ತೆ ಹೌಹಾರಿದರು. ನರಹರಿಯ ತಾಯಿಯ ವಿಷಯ ಅವರಿಗೆ ಏನೂ ನೆನಪಿರಲಿಲ್ಲ. ಆ ಮಾತಾಯಿ ಜೀವಂತವಿರುವಳೋ ಇಲ್ಲವೋ ಯಾರು ಬಲ್ಲರು? ಅಂಜುತ್ತ ಅಂಜುತ್ತ ಅವರು "ನಿಮ್ದು ತಾಯಿ........—" ಎಂದು ನರಹರಿಯ ಕಡೆಗೆ ತಿರುಗಿ ಸುರುವು ಮಾಡಿದರು.

"ನನ್ನ ಚಿಕ್ಕಂದಿನಲ್ಲಿಯೇ ನನ್ನ ತಾಯಿ ತೀರಿದಳು" ಎಂದು ನರಹರಿಯು ತಟ್ಟನೆ ಉತ್ತರ ಕೊಟ್ಟ.

"ಅರೇ ಬಾಪ್ರೆ! ಅಗ! ತ್ಯಾಂಚೀ ಆಯೀ........" ಎಂದು ಹೆಂಡತಿಯ ಕಡೆಗೆ ತಿರುಗಿ ಗಾಬರಿಯಾಗಿ ಮೋಡಕರು ಪ್ರಾರಂಭಿಸಿದರು.

"ಪರವಾ ಇಲ್ಲ. ನನಗ ಮಲತಾಯಿ ಅಂತ ಹೇಳಿಕೊಂಬೋ ಇನ್ನೊಬ್ಬ ಹೆಣ್ಣುಮಗಳು ಈ ಜಗತ್ತಿನಲ್ಲಿದ್ದಾಳೆ." ಎಂದು ನರಹರಿಯು ಕಳವಳಗೊಂಡು ನುಡಿದ.

"ಅವರ ತರಬೇತ್ ಠೀಕ್ ?" ಎಂದು ಮೋಡಕರು ಭಾರವಿಳಿದಂತಾಗಿ ಕೇಳಿದರು.

"ನಾನು ಊರು ಬಿಟ್ಟಾಗ ಒಂದು ರೀತಿಯಿಂದ ನೆಟ್ಟಗಿತ್ತೆನ್ನಬಹುದು" ಎಂದು ನರಹರಿಯು ನುಡಿದ. ಹೀಗೆಯೇ ಕುಶಲ ಪ್ರಶ್ನೆಗಳು ನಡೆದವು. ನರಹರಿಯ ಅಭ್ಯಾಸಕ್ಕೆ ಒಂದು ವರ್ಷ ತಡೆ ಬಂದುದಕ್ಕೆ ಮೋಡಕರು ತಮ್ಮ ದುಃಖವನ್ನು ವ್ಯಕ್ತಪಡಿಸಿದರು. "ಹೋತ್ಕರೀ ಪಾರುಗೋಳು ನೀವು! ನಿಮ್ ರಸ್ತೇದಾಗ ಅಥಥಳ್ ಬಂದರ ಹ್ಯಾಂಗ?" ಎಂದು ಅವರು ಉದ್ಗಾರ ತೆಗೆದರು

ಇಷ್ಟರಲ್ಲಿ ಪಾಟಣಕರನು ಕಾಲೇಜಿನಿಂದ ಬಂದ ನರಹರಿಯು ಬಂದ ಸುದ್ದಿಯು ಅವನಿಗೆ ಶೀನೂನಿಂದ ಹತ್ತಿತ್ತು. ಶೀನೂನ ದಾರಿ ನೋಡದೆ ನರಹರಿಯ ಕೋಣೆಯ ಬೀಗವನ್ನು ನೋಡಿ ತಮ್ಮ ಮನೆಗೆ ಬಂದಿದ್ದ. ಅಲ್ಲಿ ನರಹರಿಯನ್ನು ಕಂಡವನೆ ಅವನನ್ನು ತಬ್ಬಿಕೊಂಡ. ರಂಗೂತಾಯಿಯವರೂ ಮೋಡಕರೂ ಈ ದೃಶ್ಯವನ್ನು ಕಣ್ತುಂಬ ನೋಡಿದರು. ವಿಷ್ಣುವಿನ ಮೇಲೆ

ಅವರಿಬ್ಬರ ಮಮತೆಯೂ ಇತ್ತು. ಸ್ವಂತದ ಮಕ್ಕಳಿಲ್ಲದ ಅವರು ವಿಷ್ಣುವಿನ ಮೇಲೆ ಪುತ್ರವಾತ್ಸಲ್ಯವನ್ನು ಹರಿಯಿಸಿದ್ದರು.

ಬಳಿಕ "ಮುನವಳ್ಳಿ, ನಿಮ್ಮೊಡನೆ ಮಾತನಾಡುವದದೆಷ್ಟೋ ಇದೆ. ತಿರುಗಾಡಿ ಬರೋಣ ನಡೆಯಿರಿ." ಎಂದು ನರಹರಿಯೊಡನೆ ಪಾಟಣಕರನು 'ಪರ್ವತಿ' ಯೆಡೆಗೆ ನಡೆದನು.

"ನಿಮ್ಮ ಎಲ್ಲ ಕಥೆಯನ್ನು ನಿಡಗುಂದಿಯಿಂದ ತಿಳಿದಿದ್ದೇನೆ. ನಿಮಗೆ ಬರುವ ಎಡರುಗಳೂ ದೈವಿಕ ಸಂಘಟನೆಗಳೂ ಮಹೋನ್ನತವಾಗಿರುತ್ತವೆ. ಕ್ರಾಂತಿಪುರುಷರು ನೀವು. ಈ ಅವಧಿಯಲ್ಲಿ ನಿಮ್ಮ ಧೈರ್ಯ-ಸ್ಥೈರ್ಯಗಳು ಅಚಲವಾಗಿರುವದು ನನಗೊಂದು ಹೆಮ್ಮೆ" ಎಂದ ವಿಷ್ಣು. ಆ ಬಳಿಕ "ಇನ್ನು ನನ್ನ ಕಥೆ ಕೇಳಿರಿ. ನಾನು ಈ ಸಲ ಪರೀಕ್ಷೆಗೆ ಕೂಡುವದಿಲ್ಲ." ಎಂದು ಆತನು ಒಂದು 'ಬಾಂಬು' ಒಗೆದ.

"ಆದೇಕೆ?" ಎಂದು ನರಹರಿಯು ಗಾಬರಿಯಾಗಿ ಕೇಳಿದ.

"ಇದನ್ನು ನಾನು ಯಾರಿಗೂ ಹೇಳಿಲ್ಲ. ನಿಮ್ಮೆದುರಿಗೆ ಮನಸ್ಸು ಬಿಚ್ಚುತ್ತಿದ್ದೇನೆ. ನನ್ನ ಅಭ್ಯಾಸವಾಗಿಲ್ಲ ಮೊದಲನೆಯ ತರಗತಿಯಲ್ಲಿ ಬಂದೇನೆಂಬ ಆತ್ಮವಿಶ್ವಾಸ ನನಗಿಲ್ಲ ಕೂತೇನು ಮಾಡಲಿ?" ಎಂದ ವಿಷ್ಣು.

"ಪಾಟಣಕರ್, ನಿಮಗೊಂದು ಮಾತು ಹೇಳುತ್ತೇನೆ. ಒಂದು ವರ್ಷವನ್ನು ಕಳೆದುಕೊಂಡಿದ್ದ ನನ್ನ ಮಾತನ್ನು ಇದರಲ್ಲಿ ನೀವು ಕೇಳಲೇಬೇಕು. ಕಾಲವು ನಮ್ಮ ಮೇಲೆ ಹರಿಬಿಡುವ ಶಕ್ತಿಗಳು ಅನೇಕ. ಯಾವ ತರಗತಿಯೇ ಆಗಲಿ,-ಬಾಳಿನ ಗತಿ ಮೊದಲು ಪ್ರಗತಿಯಾಗಲಿ. ಮೇಲಾಗಿ ನೀವು ಪ್ರಥಮ ಶ್ರೇಣಿಯಲ್ಲಿ ಬರುವದಿಲ್ಲವೆಂಬ ವಿಚಾರ ಬರಿ ಸಂಶಯಪಿಶಾಚಿ. ಅದರ ಮೇಲಿಂದಲೇ ನಾನು ಹೇಳುತ್ತೇನೆ,—ನೀವು ನಿಶ್ಚಯವಾಗಿ ಅದನ್ನು ಪಡೆಯುತ್ತೀರಿ, ಎಂದು!" ಹೀಗೆ ಮೊದಲಾಗಿ ನರಹರಿ ಹೇಳಿದ. ಪಾಟಣಕರನು ಒಂದೊಂದು ಪೇಪರಿಗೆ ಕೂಡುತ್ತ ಹೋಗಬೇಕೆಂದೂ ಯಾವುದಾದದರೊಂದು ಪೇಪರು ತೀರಾ ಕೆಟ್ಟರೆ 'ಡ್ರಾಪ್' ತೆಗೆದುಕೊಳ್ಳಬೇಕೆಂದೂ ಅವರಿಬ್ಬರ ನಡುವೆ ಕೊನೆಗೆ ನಿಶ್ಚಯವಾಯಿತು.

ಶೀವ್ರದಲ್ಲಿಯೇ ಪರೀಕ್ಷೆಯು ಸುರುವಾಯಿತು. ತನ್ನ ಸ್ನೇಹಿತರೆಲ್ಲ ದಿನಾಲು ಪರೀಕ್ಷಾಮಂದಿರಕ್ಕೆ ನಡೆದಿರಲು ತಾನೊಬ್ಬನು ಕೋಣೆಯಲ್ಲಿ ಕೂಡುವ

ಹೊತ್ತು ನರಹರಿಗೆ ಬಂದಿತ್ತು. ಆದರೆ ಅವನ ದಿನಚರ್ಯೆಯಲ್ಲಿ ಯಾವ ಚಿಂತೆಗೂ ಜಾಗವಿರಲಿಲ್ಲ ನಸುಕಿನಲ್ಲೆದ್ದು ನರಹರಿಯು ದಾಸರ ಗೀತಗಳನ್ನು ಹೇಳುತ್ತಿದ್ದನು; ಓಂಕಾರ ವಿಷ್ಣುವಿನ ಪ್ರತಿಮೆಯನ್ನು ತನ್ನ ಅಧಿದೇವತೆಯಾಗಿ ಮಾಡಿಕೊಳ್ಳುತ್ತಿದ್ದನು. ಸ್ನಾನ-ಊಟಗಳೆಲ್ಲ ಮುಗಿದ ಮೇಲೆ ಕೆಲವು ತಾಸು ತನಗೆ ಬೇಕಾದ ಗ್ರಂಥಗಳನ್ನು ಓದುತ್ತಿದ್ದನು. ಸಂಜೆಯ ಕಡೆಗೆ ಅಂದಿನ ಪೇಪರ-ಗಳನ್ನು ಮುಗಿಸಿ ಬರುವ ಸ್ನೇಹಿತರನ್ನು ಸ್ವಾಗತಿಸಲು ಅವನು ಲಕಡಿ ಪೂಲಿನ ಕಡೆಗೆ ಹೋಗುತ್ತಿದ್ದ. ಪರೀಕ್ಷೆಯು ಮುಗಿಯುವ ವರೆಗೆ ಇದು ಅವನ ನಿತ್ಯದ ಕ್ರಮವಾಗಿತ್ತು.

ಪರೀಕ್ಷೆಯು ಮುಗಿದಿತ್ತು. ಎಲ್ಲ ನೆಟ್ಟಗಾಗಿದೆಯೆಂದು ಶೀನು ಹೇಳಿದ. ಪಾಟಣಕರನ ಯಾವ ಪೇಪರೂ ಕೆಡಲಿಲ್ಲ ತಾನು ಪ್ರಥಮ ಶ್ರೇಣಿಯಲ್ಲಿ ಬರುವೆನೆಂಬ ವಿಶ್ವಾಸವು ಈಗ ಅವನಲ್ಲಿ ಉಂಟಾಗಿತ್ತು. ತನ್ನ ಸ್ನೇಹಿತರ ಸಂತೋಷದಲ್ಲಿ ಪಾಲುಗಾರನಾಗಿ ನರಹರಿಯು ಅವರೊಡನೆ ತಿರುಗಾಡಲು ನಡೆದ. ಕಾಲೇಜಿನ ಹಿಂದಿನ ದಿನ್ನೆಗಳ ಒಂದು ದಿನ್ನೆಯ ತುದಿಯ ಮೇಲೆ ಮೂವರೂ ಗೆಳೆಯರು ಕುಳಿತುಕೊಂಡರು. ಶೀನೂ ಮರುದಿನವೇ ಮೊಗ್ಗಾಪಿಗೆ ಹೋಗುವವನಿದ್ದ. ನರಹರಿಯು ಜೊತೆಯಲ್ಲಿರಲು, ಅಹಮದ್‌ನಗರಕ್ಕೆ ಹೋಗದೆ ಸೂಟಿಯಲ್ಲಿ ಪುಣೆಯಲ್ಲಿಯೇ ಇರುವದಾಗಿ ವಿಷ್ಣು ನಿರ್ಧರಿಸಿದ್ದ. ಇದರಿಂದ ನರಹರಿಗೆ ಬಹಳ ಸಮಾಧಾನವಾಗಿತ್ತು.

ಇವರು ಅಲ್ಲಿ ಕುಳಿತಾಗ ವಿದ್ಯಾರ್ಥಿನಿಯರ ಚಿಕ್ಕ ಗುಂಪೊಂದು ಮುಂದೆ ಸಾಗಿತ್ತು. ಅವರಲ್ಲೊಬ್ಬಳು,—ಪ್ರಮಿಲಾ ಪಂಡಿತ! ಪ್ರಮಿಲೆಯು ಹರುಷದಲ್ಲಿದ್ದಳು. ಸುದೈವದಿಂದ ಆಕೆಯ ಎಲ್ಲ ಪೇಪರುಗಳೂ ಸರಿಯಾಗಿದ್ದವು. ಸಂಸ್ಕೃತವೊಂದು ಕೆಟ್ಟಿತ್ತು. ಅದು ಸರಿಹೋಗಬಹುದೆಂದು ಅವಳು ಸಮಾಧಾನ ಹಚ್ಚಿಕೊಂಡಿದ್ದಳು. ಕುಳಿತ ಮೂವರಲ್ಲಿ ನರಹರಿಯನ್ನು ನೋಡಿ "ಅಗ! ಮಾಲೇ, ನೀವು ಮುಂದೆ ನಡೆಯಿರಿ. ನಾನು ಬಂದೆ." ಎಂದು ತನ್ನ ಗೆಳತಿಯರಿಗೆ ಹೇಳಿ "ಮಿಸ್ಟರ್ ಮುನವಳ್ಳಿ, ಸ್ಟೇಷನನಿಂದ ಬಂದ ಮೇಲೆ ನಿಮ್ಮ ಭೆಟ್ಟಿಯೇ ಇಲ್ಲವಲ್ಲ!" ಎಂದು ಸಹಜವಾದ ನಗೆ ನಕ್ಕು ಕುಮಾರಿ ಕೇಳಿದಳು. ಮೂವರೂ ಗೆಳೆಯರು ಕಣ್ಣೆತ್ತಿ ನೋಡಿದರು. ಅವರ ಹಾಗೂ ಅದೇ ಮುಳುಗುತ್ತಿರುವ ಹೊಂಬಣ್ಣದ ರವಿಯ ನಡುವೆ ನಿಂತ ಅವಳ ನಿಲುವು ಮೋಹಕ

ವಾಗಿತ್ತು. ಒಂದು ರೀತಿಯಿಂದ ಪ್ರಮೀಲೆಯು ಪ್ರಮೀಳೆ, ಚಿತ್ರಾಂಗದೆ ಆದರೆ ಅವಳ ಈ ಕಾಠಿಣ್ಯದಲ್ಲಿ ಸಹ ಸ್ತ್ರೀ ಸಹಜವಾದ ಒಂದು ಸೌಂದರ್ಯವಿತ್ತು. ತುಸು ವೈಚಳಿ ಬಿಟ್ಟೀ ಶೀನು-ಪಾಟಣಕರರು ಅವಳನ್ನು ದಿಟ್ಟಿಸಿದರು. ದಿಟ್ಟಿಸಿ ನರಹರಿಯೆಡೆಗೆ ಹೊರಳಿ: "ಈ ಮೂರ್ತಿ ಯಾರು? ಇದೆಲ್ಲದರ ಅರ್ಥವೇನು?" ಎಂದು ಅವನನ್ನು ತಮ್ಮ ಕಣ್ಣುಗಳಿಂದ ಕೇಳಿದರು.

ತನಗೆ ತಾನೇ ಅರ್ಥವಾಗುವುದೆಂದು ಹೇಳುವವರಂತೆ ನರಹರಿಯು ಪ್ರಮೀಲೆಗೆ ಉತ್ತರಕೊಟ್ಟ: "ನೀವೆಲ್ಲಿರುವಿರಿ ನನಗೆ ಗೊತ್ತಿಲ್ಲವಲ್ಲ! ಮೇಲಾಗಿ ಗೆಳೆಯರ ಪರೀಕ್ಷೆಯ ಗಲಾಟೆಯಲ್ಲಿ ತೊಡಗಿದ್ದೆ!" ಎಂದು ನರಹರಿ ಹೇಳಿದ

"ನಾನಿರುವುದು ನಿಮಗೆ ಗೊತ್ತಿಲ್ಲವೇ? ಹೆಣ್ಣುಮಕ್ಕಳ ಶಾಲೆಯ ಹಾಸ್ಟೆಲಿನಲ್ಲಿ. ನಾನು ದಿನಾಲು ಸಂಜೆಗೆ ಅಲ್ಲಿಂದ ಕುದುರೆಯ ಮೇಲೆ ಹವೆ ತಿನ್ನಲು ಹೋಗುವದನ್ನು ಇಡಿ ಪುಣೆ ಶಹರವು ನೋಡುತ್ತದೆ. ನಿಮ್ಮ ಸ್ನೇಹಿತರನ್ನು ಕೇಳೋಣ, ಅವರಿಗೆ ಗೊತ್ತಿದೆಯೋ ಇಲ್ಲವೋ!" ಎಂದು ನಗೆ ಮೊಗದಿಂದ ಕುಮಾರಿಯು ಶೀನು-ಪಾಟಣಕರರೆಡೆಗೆ ಹೊರಳಿದಳು.

"ಕುದುರೆಯ ಮೇಲೆ ನೀವು ಹೋಗುವದನ್ನು ನೋಡಿದ್ದೇನೆ. ಆದರೆ ನೀವೇ ಎಂದು ಗೊತ್ತಿರಲಿಲ್ಲ!" ಎಂದು ಪಾಟಣಕರನು ಹೇಳಿದ.

ಪಂಡಿತ ಕೇಶವರಾಯರ ಮನಸ್ಸಿನಲ್ಲಿ ಮಗಳ ವಿದ್ಯಾಭ್ಯಾಸಕ್ಕೆಂದು ಪುಣೆಯಲ್ಲಿಯೇ ಮನೆ ಮಾಡುವದಿತ್ತು. ಆದರೆ ಖಾಸಗಾಂವಿಯಲ್ಲಿಯ ತಮ್ಮ ವ್ಯವಹಾರವನ್ನು ನೋಡುವರಾರು? ಆದಕಾರಣ ಪರಿಚಿತ ಅಧಿಕಾರಿಗಳಿದ್ದ ಹೆಣ್ಣುಮಕ್ಕಳ ಶಾಲೆಯ ಹಾಸ್ಟೆಲ್ಲಿನಲ್ಲಿ ಕೇಶವರಾಯರು ಮಗಳನ್ನಿಟ್ಟಿದ್ದರು. ತಿಂಗಳಿಗೆ ಒಂದೆರಡು ಸಲ ಅವರೇ ಪುಣೆಗೆ ಬಂದು ಹೋಗುತ್ತಿದ್ದರು. ಅದು ಸಾಧ್ಯವಾಗದಿದ್ದರೆ ಪ್ರಮೀಲೆಯು ಖಾಸಗಾಂವಿಗೆ ಪಯಣ ಬೆಳೆಸುತ್ತಿದ್ದಳು.

ಪಾಟಣಕರನ ಉತ್ತರವನ್ನು ಕೇಳುತ್ತ ಕುಮಾರಿ ನರಹರಿಗೆಂದಳು: "ನಿಮ್ಮ ಸ್ನೇಹಿತರನ್ನು ನನಗೆ ಪರಿಚಯ ಮಾಡಿಕೊಡಿರಲ್ಲ, ಮುನವಳ್ಳಿ! ಅವರಿಗೆ ನನ್ನ ಪರಿಚಯ ಇದ್ದ ಹಾಗೆ ಕಾಣುತ್ತದೆ!"

ಹಾಗೆ ನರಹರಿಯು ಶೀನು-ಪಾಟಣಕರರ ಗುರುತನ್ನು ಕುಮಾರಿಗೆ ಮಾಡಿಕೊಟ್ಟ. ಐ. ಸಿ. ಎಸ್. ಗೆಂದು ವಿಲಾಯತಿಗೆ ಹೋಗಲಿರುವನೆಂದು

ಗಣಪತರಾಯರು ಹೇಳಿದ್ದರಲ್ಲ; ಅವನೇ ಈ ಶೀನು. ಕಾಲೇಜಿನ ಭಾಷಣ-ಸ್ಪರ್ಧೆಗಳಲ್ಲಿ ಕುಮಾರಿಯು ಪಾಟಣಕರನನ್ನು ನೋಡಿ ಕೇಳಿರಲು ಸಾಕು. ಅವನು ಸ್ಕಾಲರ್; ಈ ಸಲ ಪ್ರಥಮ ಶ್ರೇಣಿಯಲ್ಲಿ ಬರುವದು ಖಚಿತ; ಬಿ ಎ. ಆದ ಮೇಲೆ ಆತನೂ ಐ. ಸಿ ಎಸ್. ಗೆ ಹೋಗುವವ ಇಷ್ಟು ಹೇಳಿ, ಇಂಟರ್ ಕ್ಲಾಸಿನಲ್ಲಿ ಕುಮಾರಿಯನ್ನು ನೋಡಿರಲು ಸಾಕೆಂದೂ ಆಕೆಯೇ ಖಾಸಗಾಂವಿಯ ಕೇಶವರಾವ್ ಪಂಡಿತರ ಮಗಳೆಂದೂ ನರಹರಿಯು ಶೀನು-ಪಾಟಣಕರರಿಗೆ ಹೇಳಿದ.

ಬಳಿಕ ಕುಮಾರಿಯೆಂದಳು: "ಇದು ಐ. ಸಿ. ಎಸ್ ಜನರ ಗುಂಪೆಂದೇ ಕಾಣುತ್ತದೆ! ಎಲ್ಲರೂ ಐ ಸಿ. ಎಸ್. ಗೆ ಹೋಗುವವರೇ."

"ನನ್ನೊಬ್ಬನನ್ನು ಬಿಟ್ಟು." ಎಂದ ನರಹರಿ. "ಅದೇಕೆ? ಗಣಪತ ರಾಯರು ನೀವೂ ಹೋಗುವಿರೆಂದು ಹೇಳಿರುವರಲ್ಲ!" ಕುಮಾರಿ ಎಂದಳು.

ಇಷ್ಟರಲ್ಲಿ 'ಮಾಲೆ'ಯ ಗುಂಪಿನಿಂದ ಜೋರಾಗಿ ಕರೆ ಬಂತು ಅರ್ಥಾತ್ ಗೆಳತಿಯರೆಲ್ಲ ದಾರಿ ಕಾದು ಕಾದು ಕೆಂಡವಾಗಿದ್ದರು. ಕುಮಾರಿಗೆ ಹೆಚ್ಚು ನಿಲ್ಲುವದು ಸಾಧ್ಯವಿರಲಿಲ್ಲ "ಬರುತ್ತೇನೆ. ಎಲ್ಲರೂ ಕ್ಷಮಿಸಬೇಕು. ನನ್ನ ಗೆಳತಿಯರೆಲ್ಲ ಸಿಟ್ಟಾಗಿದ್ದಾರೆ. ನಾಳೆ ನಾ ಖಾಸಗಾಂವಿಗೆ ಹೊರಡುತ್ತೇನೆ. ಮುಂದಿನ ವರ್ಷ ಕಾಲೇಜು ಸುರುವಾದೊಡನೆ ಎಲ್ಲರೂ ಭೆಟ್ಟಿಯಾಗೋಣ. ನನ್ನ ಕಡೆ ನೀವೆಲ್ಲ ಒಮ್ಮೆ ಚಹಕ್ಕೆ ಬರಬೇಕು." ಎಂದು ಪ್ರಮೀಲೆಯು ತನ್ನ ಗೆಳತಿಯರೆಡೆಗೆ ನಡೆದಳು.

ಆಕೆ ಹೋದ ಮೇಲೆ ಶೀನೂ ತುಸು ನಕ್ಕ. "ಅಂತೂ ಪುಣೆಯಲ್ಲೆಲ್ಲ ಪ್ರಾಗತಿಕಳೆಂದು ಪ್ರಸಿದ್ಧಿಯನ್ನು ಪಡೆದ ವ್ಯಕ್ತಿಯ ಪರಿಚಯ ನಿನ್ನಿಂದ ನಮಗಾಯಿತು!" ಎಂದು ಅವನು ನರಹರಿಗೆಂದ.

"ಪಂಡಿತರ ಮನೆತನದಲ್ಲಿ ಅನೇಕ ಹಳೆ-ಹೊಸ ಸಂಪ್ರದಾಯಗಳು ಕೂಡಿದ್ದರೂ ಅಲ್ಲಿ ಒಂದು ಸಂಸ್ಕೃತಿಯಿದೆ. ನಾನು ಮೊಗ್ಗಾವಿಯನ್ನು ಬಿಟ್ಟು ಒಮ್ಮೆಲೇ ಹೊರಟು ಬಂದಿದ್ದು ಅವರಿಗೆ ತುಸು ವಿಚಿತ್ರವಾಗಿಯೇ ಕಂಡಿದ್ದರೂ ನನ್ನನ್ನಾಗಲಿ ಗಣಪತರಾಯರನ್ನಾಗಲಿ ಈ ವಿಷಯಕ್ಕೆ ಸಿಟ್ಟಿಂದು ತಂದೆ-ಮಗಳು ಮಾತಾಡಿಸಿಲ್ಲ. ಕುಡಚಿಯ ಎದುರಿಗೆ ಮಿಸ್. ಪಂಡಿತಳೇ ಏನಾದ

ರೊಂದು ಕಾರಣ ತೋರಿಸಿರಬೇಕು. ಅವನೂ ಈ ವಿಷಯದಲ್ಲಿ ಮೌನವಾಗಿಯೇ ಇದ್ದ." ಎಂದ ನರಹರಿ.

"ಸ್ತ್ರೀಯರೆಂದರೆ ಹೀಗಿರಬೇಕು. ಗೊಂಬೆಗಳಂತೆ ಸದ್ದುಮುದ್ದಾಗಿದ್ದ ಹೆಣ್ಣುಮಕ್ಕಳು ನನಗೆಷ್ಟೂ ಸರಿ ಬರುವದಿಲ್ಲ!" ಎಂದು ಪಾಟಣಕರನು ಹೇಳಿದ.

"ಎಚ್ಚರ, ಪಾಟಣಕರ್! 'ಪ್ರಥಮ ದರ್ಶನದಲ್ಲಿಯೇ ಪ್ರೇಮ' ಎಂದು ಹೇಳುತ್ತಾರಲ್ಲ,—ಅದು ಹೀಗೆಯೇ ಸುರುವಾಗುವದಂತೆ." ಎಂದು ಶೀನು ಬಿದ್ದು ಬಿದ್ದು ನಕ್ಕ. ಬಳಿಕ ನರಹರಿಯನ್ನು ಕುರಿತು "ಕುಡಚಿ ಯಾರೋ? ನಮ್ಮ ಕರ್ನಾಟಕ ಕ್ಲಬ್ಬಿನ ಹಿರಿಯನೇನು?" ಎಂದು ಶೀನು ಕೇಳಿದ.

"ಹೌದು. ಕುಡಚಿಯ ಊರೂ ಖಾಸಗಾಂವಿ. ಪಂಡಿತರ ಮನೆಯ ಎದುರಿಗೇ ಅವನ ಮನೆಯಿದೆ." ಎಂದು ನರಹರಿಯಿಂದ ಉತ್ತರ ಬಂತು

"ಅವನು ನಮ್ಮ ಟೆನಿಸ್ ಹುದ್ರಿಯೂ ಹೌದು. ಈ ಸಲ ಪರೀಕ್ಷೆಯಲ್ಲಿ ಡೊಗ್ಗಾಲೂರುವ ಪ್ರಸಂಗವೆಲ್ಲಿ ಬರುತ್ತದೋ ಎಂದು ಎಲ್ಲ ಪೇಪರುಗಳು ಮುಗಿದ ಮೇಲೆ ಚಿಂತಿಸುತ್ತಿದ್ದ" ಎಂದ ಶೀನು.

ಹೊತ್ತಾಗಿದ್ದರಿಂದ ಗೆಳೆಯರೆಲ್ಲರೂ ತಮ್ಮ ತಮ್ಮ ಜಾಗಗಳಿಗೆಂದು ಹೊರಟರು. ಹಾದಿಯಲ್ಲಿ ಅವರಿಗೆ ರಾಮಗಿರಿಯ ಭೆಟ್ಟಿಯಾಯಿತು. ರಾಮಗಿರಿಯೂ ಈ ಸಲ ಇಂಟರಿಗೆ ಕೂತಿದ್ದ. ಗರ್ಭಶ್ರೀಮಂತಿಕೆಯಲ್ಲಿ ಬೆಳೆದಿದ್ದ ಅವನು ಪ್ರತಿ ವರ್ಷ ಪಾಸಿನ ತಯಾರಿಯನ್ನಷ್ಟು ಮಾಡುತಿದ್ದ. ತಾನು ಪ್ರೀತಿಸುತ್ತಿದ್ದ ಕನ್ನಡ ಕವಿತೆಗಳ ಕವಿಯಾದ ನರಹರಿಯ ಭೆಟ್ಟಿಯಿಂದ ಅವನಿಗೆ ಬಹಳ ಸಂತೋಷವಾಯಿತು. "ಮುನವಳ್ಳಿ, ನೀವಿಲ್ಲದೆ ಇಲ್ಲಿಯ ಕರ್ನಾಟಕ ಕ್ಲಬ್ಬಿಗಾಗಲಿ ಕನ್ನಡದ ಬಳ್ಳಿಗಾಗಲಿ ಜೀವವಿಲ್ಲ! ಮುಂದಿನ ವರ್ಷವಾದರೂ ನೀವು ಬರಲೇಬೇಕು!" ಎಂದು ಅವನು ಬಹಳ ಚಡಪಡಿಸಿದ.

ಮನೆತನದ ತೊಂದರೆಗಳಿಂದ ಅಭ್ಯಾಸವು ತಡೆದು ನಿಂತಿದ್ದು ಅದನ್ನು ಮತ್ತೆ ಮುಂದುವರಿಸುವುದಾಗಿ ನರಹರಿ ಹೇಳಿದ.

ಮರುದಿನ ಬೆಳಿಗ್ಗೆ—ರಾಮಗಿರಿಯು ಹೊರಟ ಗಾಡೀಗೇ—ಶೀನು ಮೊಗ್ಗಾವಿಗೆ ನಡೆದ. ನರಹರಿ—ಪಾಟಣಕರರೊಡನೆ ಅವನಿಗೂ ಪುಣೆಯಲ್ಲಿರುವ ಮನಸ್ಸಿತ್ತು. ಆದರೆ ತಂದೆಯವರ ಪತ್ರ ಬಂದಿತ್ತು. ಅಲ್ಲದೆ ಮನೆಯಲ್ಲಿ ಎಲ್ಲರನ್ನೂ

ಭೆಟ್ಟಿಯಾಗುವ ಲವಲವಿಕೆಯೂ ಅವನಿಗೆ ವಿಶೇಷವಾಗಿತ್ತು. ಪರೀಕ್ಷೆಯ ಪರಿಣಾಮ ತಿಳಿದ ಕೂಡಲೆ—ಸೂಟಿ ಮುಗಿಯುವ ದಾರಿ ನೋಡದೆ—ಪುಣೆಗೆ ಬರುವದಾಗಿ ಶೀನು ತಿಳಿಸಿದ.

ವಿಶಾಲವಾದ ಪುಣ್ಯನಗರಿಯಲ್ಲಿ ಏಕಜೀವಿಗಳಾದ ನರಹರಿ–ಪಾಟಣಕರರು ತಮ್ಮ ಸಾಹಿತ್ಯವನ್ನೂ ಸ್ನೇಹವನ್ನೂ ಸಂವರ್ಧಿಸುವ ದಾರಿಯಲ್ಲಿ ತೊಡಗಿದರು.

---

ಪ್ರಕರಣ ೫೪

## ಮೊಗ್ಗಾವಿಯಲ್ಲಿ ಇನ್ನೊಂದು ಮದುವೆ

ಮೊಗ್ಗಾವಿಯಲ್ಲಿ ದೇಸಾಯರ ಮನೆಯಲ್ಲಿ ಈಗ ಕೇಶವನ ಗಡಿಬಿಡಿ ನಡೆದಿತ್ತು. ಈ ಲಗ್ನಮಾಸದ ಸುರುವಿಗೆ ತನ್ನ ಮದುವೆಯಾಗಿಬಿಡಬೇಕೆಂದು ಅವನು ಹಟ ಹಿಡಿದಿದ್ದ. ಜಾನಕಿಬಾಯರು ಅವನ ಪಕ್ಷವನ್ನು ಸಮರ್ಥಿಸುತ್ತಿದ್ದರು ಆದರೆ ಮೊದಲಿನ ಯೋಜನೆಯ ಪ್ರಕಾರ ಕುಸುಮಾನಿಗೂ ವರ ಗೊತ್ತಾಗಬೇಕಲ್ಲವೆ? ಈ ಪ್ರಶ್ನೆಯನ್ನು ಬಿಡಿಸಿಬಿಡಬೇಕೆಂದು ನಿರ್ಧರಿಸಿ ಅವರು ದಿನಂಪ್ರತಿ ದೇಸಾಯರು ಮನೆಗೆ ಬಂದಾಗ ಕೈತೊಳೆದುಕೊಂಡು ಅವರ ಬೆನ್ನುಹತ್ತಿದರು. ಬರುಬರುತ್ತ ದೇಸಾಯರಿಗೆ ಮನೆಯಲ್ಲಿ ಕಾಲಿಡುವುದೇ ಕಷ್ಟವಾಯಿತು.

ಗದುಗಿನ ವರ ದೇಸಾಯರ ಮನಸ್ಸಿಗೆ ಬರುವಹಾಗಿಲ್ಲ. ನರಹರಿಯ ಹೆಸರು ಕೇಳಿದರೆ ಜಾನಕಿಬಾಯರಿಗೆ ಪಿತ್ತವೇರುತ್ತಿತ್ತು. ಹೀಗಿರುವಾಗ ಈ ಪ್ರಶ್ನೆ ಬಿಡುವುದು ಹೇಗೆ? ಜಾನಕಿಬಾಯರು ಉಳಿದ ಕೆಲವು ದೇಸಾಯಿ ದೇಶಪಾಂಡೆ ಮನೆತನಗಳ ಹೆಸರು ಹೇಳಿ ನೋಡಿದರು. ಗಣಪತರಾಯರ ಮಗ ಶೀನು ಪುಣೆಯಿಂದ ಮೊಗ್ಗಾವಿಗೆ ತಿರುಗಿ ಬಂದಿದ್ದ. ಬೀದಿಯಲ್ಲಿ ಅವನನ್ನು ಒಂದು ದಿವಸ ನೋಡಿದ ಜಾನಕಿಬಾಯರಿಗೆ,—ಕುಸುಮಾನನ್ನು ಇವನಿಗೇಕೆ ಕೊಡಬಾರದು? ಎಂಬ ವಿಚಾರ ಬಂತು. ಶೀನು ವಕೀಲರ ಮಗ

ನಾದುದರಿಂದ ದೇಸಾಯರ ಮಾತಿಗೂ ಒಪ್ಪಿದಹಾಗಾಗುತ್ತಿತ್ತು. ಗಣಪತ ರಾಯರು ಸಾಕಷ್ಟು ಶ್ರೀಮಂತರಿದ್ದುದರಿಂದ ಜಾನಕಿಬಾಯರ ಅಡ್ಡಿ ಏನೂ ಇರಲಿಲ್ಲ. ಸ್ಮಾರ್ತಮನೆತನದಲ್ಲಿ ಹುಟ್ಟಿದ್ದರೂ ಗಣಪತರಾಯರ ಮನೆಯಲ್ಲಿ ಭಾಗವತ ಸಂಪ್ರದಾಯವಿತ್ತು. ತಮ್ಮ ವಿಚಾರದ ಜಾಣತನಕ್ಕೆ ಜಾನಕಿ ಬಾಯಿಯವರಿಗೆ ಆನಂದವಾಯಿತು. ಈ ಮಾತಿಗೆ ದೇಸಾಯರು ಒಪ್ಪಿಗೆ ಕೊಡುವರೆಂದು ಅವರ ನಂಬಿಕೆಯಾಗಿತ್ತು.

ಮರುದಿನ ಮುಂಜಾನೆ ದೇಸಾಯರು ಮನೆಗೆ ಬಂದಾಗ ತಮಗೆ ಸಾಧ್ಯ ವಿದ್ದ ಮೋಹಕತನ ಮಂದಹಾಸವನ್ನು ತಳೆದು ಜಾನಕಿಬಾಯರೆಂದರು: "ನಾ ನಿಮಗ ಒಂದು ಮಾತು ಹೇಳತೀನಿ. ಅದು ಪಟಾಯಿಸದಿದ್ದರ ನಾ ಜಾನಕಿಬಾಯಿ ಅಲ್ಲ!"

"ನೀ ಜಾನಕೀಬಾಯಿ ಹೌದೋ ಅಲ್ಲೊ ನಿರ್ಣಯಿಸಲಿಕ್ಕೆ ನನಗಲ್ಲದ ಮತ್ತ ಯಾರಿಗೆ ಅಧಿಕಾರ ಅದ? ಮದುವಿ ಆಗಬೇಕಾದ್ರ ನಾ ಏನಂತ ಆ ಹೆಸರಿಟ್ಟೆ! ನೀ ಏನು ಆದಿ! ಅದಕೂ ಇದಕೂ ಅಸಮಾನ್ ಫರಕು!" ಎಂದು ದೇಸಾಯರು ತುಸು ಬಿಗುವಿನಿಂದ ಮಾತನಾಡಿದರು.

ಜಾನಕಿಬಾಯರ ಮನಸ್ಸಿನಲ್ಲಿ ಈಗ ನ್ಯಾಯ ಹೊಡುವದಿರಲಿಲ್ಲ. ಅವರು ಶಾಂತರಾಗಿಯೇ ಹೇಳಿದರು: "ನನ್ನ-ನಿಮ್ಮ ಜಗಳ ಏನಾದರೂ ಇರಲಿ. ಅದನ್ನು ಹಿಂದಗಡೆ ನೋಡಿಕೊಂಬೋಣ ಈಗ ಕುಸುಮಾನ ಬಗ್ಗೆ ಒಂದು ಮಾತು ಹೇಳತೀನಿ ಕೇಳತೀರೇನು?"

"ನಿನ್ನ ಒಂದು ಮಾತಿಲ್ಲದ ಯಾವ ನಸುಕು ಹರದದ ಈ ಜಗತ್ತಿ ನ್ಯಾಗ?" ಎಂದರು ದೇಸಾಯರು.

"ದಿನದ ಮಾತಿನ್ಹಾಂಗ ಇದಲ್ಲ! ಇದು ಹೊಸ ಸೂಚನಾ! ಮೊದಲ ಕೇಳಿ ಆ ಮ್ಯಾಲ ನಿರ್ಣಯಕ್ಕ ಬರ್ರಿ." ಎಂದು ಬಿನ್ನವಿಸಿದರು ಜಾನಕಿ ಬಾಯರು.

"ಆಗಲಿ, ಮುಂದಿಡು ನಿನ್ನ ಸೂಚನಾ!" ಎಂದು ದೇಸಾಯರು ಕುತೂ ಹಲದಿಂದ ನುಡಿದರು.

"ಅಲ್ಲ, ನಮ್ಮ ಕುಸುಮಾನ್ನ ಗಣಪತರಾಯರ ಮಗ ಶೀನೂಗ ಯಾಕ ಕೊಡಬಾರದೂ ಅಂತೀನಿ! ಒಳ್ಳೇ ಮನೆತನ. ಹುಡುಗ ಚಿಕ್ಕ ವಯಸ್ಸಿನವ,

ನಿಮ್ಮ ಮನಸಿಗೆ ಬರುವ ಹಂಗ ಕಲತವ. ಇನ್ನೂ ಕಲಿತಾನ. ಅವಗ ಕುಸುಮಾನ್ನ ಯಾಕ ಕೊಡಬಾರದು ?"

ಅವರ ಈ ಸೂಚನೆಯಿಂದ ದೇಸಾಯರಿಗೆ ನಿಜವಾಗಿಯೂ ಆಶ್ಚರ್ಯವಾಯಿತು. ಕಲಿತ ವರನನ್ನು ಜಾನಕಿಬಾಯರು ಕಣ್ಣೆತ್ತಿ ಸಹ ನೋಡಿಯಾರೆಂಬ ಭರವಸೆಯು ಅವರಿಗಿದ್ದಿಲ್ಲ ಕುಸುಮೆಯ ಬಗ್ಗೆ ವಿಚಾರಮಾಡುವಾಗ ಶೀನೂನ ನೆನಪು ಒಂದೆರಡು ಸಲ ಅವರಿಗಾಗಿತ್ತು. ಆದರೆ ನರಹರಿಯ ಬಗ್ಗೆ ಅವರ ಮನಸ್ಸಿನಲ್ಲಿದ್ದ ಮಾಧುರ್ಯವು ಆ ನೆನಪನ್ನು ಅಳಿಸಿಬಿಟ್ಟಿತು ಕಲಿತ ವರನೆಂದು ನರಹರಿಯನ್ನು ಜಾನಕಿಬಾಯರು ವಿರೋಧಿಸುತ್ತಿರುವಾಗ ಶೀನೂನ ಮೇಲೆ ಅವರ ಕೃಪಾದೃಷ್ಟಿ ಹೇಗೆ ಬೀಳಬಹುದು? ಇವೆಲ್ಲ ಕಾರಣಗಳ ಸಲುವಾಗಿ ಶೀನೂನ ಬಗ್ಗೆ ದೇಸಾಯರು ವಿಚಾರವನ್ನೇ ಮಾಡಿರಲಿಲ್ಲ. "ನೋಡಿ ಹೇಳುವೆನು" ಎಂದು ದೇಸಾಯರು ಸಂಕ್ಷಿಪ್ತವಾಗಿ ಉತ್ತರ ಕೊಟ್ಟರು.

"ದಯವಿಟ್ಟು ಇದನ್ನಷ್ಟು ಮಾಡಿರಿ ಹೀಗೆಯೇ ಮದುವೆ ಮುಂದೆ ಬೀಳುತ್ತ ಹೋದರೆ ಮುಂದೇನು ಗತಿ ?" ಎಂದು ಜಾನಕಿಬಾಯರು ದೈನಾಸಬಟ್ಟರು.

ದೇಸಾಯರು ಮರುಮಾತಾಡಲಿಲ್ಲ. ಹಾಗೆಯೇ ವಿಚಾರಮಾಡುತ್ತ ರಾಮತೀರ್ಥದ ಕಡೆಗೆ ತಿರುಗಾಡಲು ನಡೆದರು ಶೀನೂ ಸಹ ಕಲಿತವ; ಅವನಲ್ಲಿ ನರಹರಿಯ ಪ್ರತಿಭೆಯಿಲ್ಲ, ನಿಜ. ಆದರೆ ಈಗ ನರಹರಿಯ ಮನಃಸ್ಥಿತಿ ಏನಾಗಿದೆಯೋ! ಯಾವದನ್ನೂ ಮನಸ್ಸಿನಲ್ಲಿ ಹಿಡಿಯದೆ ಮತ್ತೆ ಮೊದಲಿನ ದಾರಿಗೆ ಬಂದುದಲ್ಲದೆ ಅಭ್ಯಾಸವನ್ನು ಮುಂದುವರಿಸಲು ನರಹರಿಯು ಹಾತೊರೆಯುತ್ತಿರುವನೆಂದು ಗಣಪತರಾಯರು ಅವರಿಗೆ ಹೇಳಿದ್ದರು. ಅಲ್ಲದೆ ನರಹರಿಯು ಸುಖರೂಪವಾಗಿ ಈಗ ಪುಣೆಯಲ್ಲಿರುವದೂ ಅವರಿಗೆ ಗೊತ್ತಿತ್ತು. ಅಲ್ಲದೆ ನರಹರಿಯ ವಿಚಾರವನ್ನು ಈಗ ಸಂಪೂರ್ಣವಾಗಿ ಬಿಡಬೇಕೇಕೆ ? ದೇಸಾಯರಿಗೆ ಇನ್ನೊಂದು ವಿಚಾರವು ಹೊಳೆಯಿತು ಈ ವಿಷಯದಲ್ಲಿ ಕುಸುಮಾನನ್ನು ಕೇಳಿ ನೋಡಬೇಕಲ್ಲ ? ಅದು ಮಹತ್ವದ ಮಾತು. ಈ ವಿಚಾರವು ತಲೆಯಲ್ಲಿ ಬಂದೊಡನೆ ದೇಸಾಯರು ಮತ್ತೆ ಮನೆಯ ಕಡೆಗೆ ಮುಖ ತಿರುವಿದರು.

ಆದರೆ ಅವರ ಹೆಜ್ಜೆ ಮುಂದೆ ಬೀಳಲಿಲ್ಲ. ಕುಸುಮಾ ನರಹರಿಯನ್ನೇ ಲಗ್ನವಾಗಬೇಕೆಂದರೆ? ಆಗೇನು ಮಾಡುವದು? ಜಾನಕಿಬಾಯರ ಆಕ್ರೋಶವನ್ನು ತಡೆಯುವದು ಹೇಗೆ? ಮಗಳ ಮನಸ್ಸಿನ ವಿರುದ್ಧವಾಗಿ ನಡೆಯುವದಂತೂ ಸುತರಾಂ ಅವರಿಗೆ ಒಪ್ಪುತ್ತಿರಲಿಲ್ಲ ದೇಸಾಯರು ದೀರ್ಘವಾಗಿ ಚಿಂತಿಸಿದರು. ಕಡೆಗೆ ಅವರಿಗೆ ಗೊತ್ತಿಲ್ಲದೆ ಸಹ ಇಷ್ಟು ದಿನ ಅವರ ಮನದಲ್ಲಿ ಮಾಗುತ್ತ ನಡೆದ ಹಂಚಿಕೆಯೊಂದು ಫಕ್ಕನೆ ಅವರಿಗೆ ಹೊಳೆಯಿತು. ಒಮ್ಮೆ ಸಹಜವಾಗಿ ಸಾನಿಯೆದುರಿಗೆ ಈ ಹಂಚಿಕೆಯನ್ನು ಅವರು ತೆರೆದಿದ್ದರು. ಆದರೆ ಈಗ ಅದು ಪ್ರಮಾಣವಾಗಿಯೇ ಅವರೆದುರು ಬಂದು ನಿಂತಿತ್ತು.

ದೇಸಾಯರು ತಿರುಗಿ ಮನೆಗೆ ಬಂದಾಗ ಕುಸುಮಾ ಹಿತ್ತಲದಲ್ಲಿ ಅರಳಿದ ಮಲ್ಲಿಗೆ ಬಳ್ಳಿಯ ಕುಸುಮಗಳನ್ನು ಆಯ್ದುಕೊಂಡು ಅದರ ಮಡಿಯಲ್ಲಿ ನೀರು ಹಾಕುತ್ತ ನಿಂತಿದ್ದಳು. ದೇಸಾಯರು ಬಂದು ಅವಳ ಬದಿಗೆ ನಿಂತು "ಕುಸುಮಾ, ನಿನಗೊಂದು ಮಾತು ಕೇಳುವದಿದೆ." ಎಂದರು.

"ಅದೇನು?" ಎಂದು ತುಸು ಕಂಪಿತಳಾಗಿ ಕೇಳಿದಳು ಕುಸುಮಾ.

"ಗಣಪತರಾಯರ ಮಗ ಶೀನೂನನ್ನು ನಿನಗೆ ವರನಾಗಿ ಆರಿಸಿದರೆ ಹೇಗೆ?" ಎಂದು ದೇಸಾಯರು ಕೇಳಿದರು.

ಕುಸುಮಾ ಮಾತನಾಡಲಿಲ್ಲ. ಮುನ್ನೋಡಿ ಮಲ್ಲಿಗೆಗೆ ನೀರೆರೆಯತೊಡಗಿದಳು. ಹೇಗೆ? ಎಂದು ಕೇಳಿದರೆ,—ಹೀಗೆ, ನೀರೆರೆಯುವ ಹಾಗೆ, ಕರ್ತವ್ಯವನ್ನು ಮಾಡಬೇಕಲ್ಲ? ನನ್ನ ಮನಸ್ಸಿಗೆ ಬರಲಿ ಬರದಿರಲಿ, ನಿಮ್ಮ ಸೂಚನೆಯನ್ನು ನಾನು ಮನ್ನಿಸಬೇಕಾಗುವದು; ಅದು ನನ್ನ ಕರ್ತವ್ಯ ಎಂಬು ಉತ್ತರವನ್ನು ಮಾತಿನಲ್ಲಿ ಹೇಳುವದರ ಬದಲು ಕುಸುಮಾ ಹೀಗೆ ಬಳ್ಳಿಗೆ ನೀರೆರೆಯುವಳೆಂಬುದು ದೇಸಾಯರಿಗೆ ಹೊಳೆಯದೆ ಹೋಗಲಿಲ್ಲ. ಆ ಮೇಲೆ ತುಸು ನಿಂತು "ನರಹರಿಯ ಪ್ರಶ್ನೆ ಮೊದಲೊಂದು ನಿರ್ಧಾರಕ್ಕೆ ಬರುವಂತೆ ಮಾಡಲೇನು?" ಎಂದು ದೇಸಾಯರು ಕೇಳಿದರು. ನೀರು ಹಾಕುವದನ್ನು ನಿಲ್ಲಿಸಿ ಮೊಗವನ್ನು ಮೇಲೆತ್ತಿ ಮೆಲ್ಲನೆ 'ಹೂಂ' ಎಂದಳು ಕುಸುಮಾ. ಇಷ್ಟು ಹೇಳಬೇಕಾದರೆ ನಾಚಿಕೆಯಿಂದ ಅವಳ ಗಲ್ಲವು ಕೆಂಪೇರಿತ್ತು.

ಈಗ ದೇಸಾಯರ ನಿರ್ಣಯವು ತನಗೆ ತಾನೇ ಸಿದ್ಧವಾಯಿತು. ಜಾನಕಿಬಾಯರೊಡನೆ ಕೊನೆಯ ಭೀಕರ ಸಂಗ್ರಾಮಕ್ಕಾಗಿ ಒಳಗಿಂದೊಳಗೇ ಅವರು ತಮ್ಮ ಮನಸ್ಸನ್ನು ಅಣಿಗೊಳಿಸಿದರು

ಊಟಕ್ಕೆ ಕೂಡುವ ಹೊತ್ತಿಗೆ ಸರಿಯಾಗಿ ನಗೆಮೊಗದಿಂದ ಜಾನಕಿ ಬಾಯರು ದೇಸಾಯರಿಗೆ ಕೇಳಿದರು: "ನಾನು ಹೇಳಿದ ವಿಷಯ ಏನಾ ಯಿತು ?"

"ಒಂದೇ ವಾಕ್ಯದಲ್ಲಿ ದೇಸಾಯರು ಶಾಂತರಾಗಿ ಹೇಳಿದರು: "ಅದು ಈಗ ಸಾಧ್ಯವಿಲ್ಲ."

ಕೆಣಕಿದ ನಾಗರಹಾವಿನಂತೆ ಜಾನಕಿಬಾಯರ ಕೋಪವು ಹೆಡೆಯೆತ್ತಿತು. "ಹಾಗಾದರೆ ಯಾವಾಗ ಸಾಧ್ಯ ?"

"ಯಾವಾಗ ಎಂಬುದನ್ನು ಈಗೇಕೆ ಚರ್ಚಿಸಬೇಕು ? ಕೇಶವನ ಮದು ವೆಯ ತಯಾರಿ ನಡೆಯಲಿ. ಇದನ್ನು ಮುಂದೆ ನೋಡೋಣ"

"ತಿಳಿಯಿತು. ಇದು ನಿಮ್ಮ ಒಳಸಂಚು! ಆ ನೀಚ ನರಹರಿಗೆ ಮಗ ಳನ್ನು ಕೊಟ್ಟು ನನ್ನ ಹೊಟ್ಟೆಯಲ್ಲಿ ನೀವು ಬೆಂಕಿ ಹಾಕಬೇಕೆಂದಿದ್ದೀರಿ!" ಎಂದು ಜಾನಕಿಬಾಯರು ಆಕ್ರೋಶಿಸಿದರು

"ಹೌದು. ನರಹರಿಯೇ ಕುಸುಮೆಗೆ ವರ ಆತ ಒಲ್ಲೆಂದರೆ ಮುಂದೆ ಮಾತು." ಎಂದು ದೇಸಾಯರು ಸೂತ್ರರೂಪವಾಗಿ ಹೇಳಿದರು

ಆಗ ಜಾನಕಿಬಾಯರು ಮಂಗಳಸೂತ್ರವನ್ನು ಹರಿದೊಗೆಯುವದೊಂದು ಉಳಿಯಿತು. ಅವರ ಆ ಆಕ್ರೋಶ, ಆ ರೋದನ, ಆ ರಂಬಾಟ,—ಇವುಗಳ ಆರ್ಭಟಕ್ಕೆ, ಮಳೆಯ ಹೊಡೆತಕ್ಕೆ ಬೆದರಿ ಗೂಡಿನಲ್ಲಿ ಕೂತ ಗುಬ್ಬಿಯಂತೆ ಕುಸುಮೆಯು ಒಂದು ಕೋಣೆ ಹಿಡಿದು ಕೂತಳು. ಕೇಶವನು ಭೀಮು— ಮೇನಕಿಯರ ಮನೆಗೆ ಹೊರಟುಹೋದ.

ದೇಸಾಯರು ಇದಕ್ಕೆಲ್ಲ ಸಿದ್ಧರಾಗಿಯೇ ಇದ್ದರು. ಅವರು ಕೇಳಿದರು: "ಈ ಎಲ್ಲ ನಾಟಕ ಯಾತಕ್ಕೆ ಹೂಡುತ್ತೀ? ನಮ್ಮ ಮದುವೆಯಾದಂದಿನಿಂದ ಇಂದಿನ ವರೆಗೆ ಈ ಅಂಕು-ಪಡದೆಗಳೆಲ್ಲ ನೂರು ಸಲ ಬಿದ್ದು ನೂರು ಸಲ ಎದ್ದಿವೆ. ನಾನು ಈಗ ಹೇಳುವ ಮಾತಿನಲ್ಲಿ ಯಮನೂ ಬದಲಾವಣೆ ಮಾಡುವ ಹಾಗಿಲ್ಲ. ಇದು ನನ್ನ ಸಂಕಲ್ಪ. ನಾಳೆ ನಾನು ಕುಸುಮೆಯೊಡನೆ

ಪುಣೆಗೆ ಹೊರಟುಹೋಗುತ್ತೇನೆ. ಅಲ್ಲಿ ಆಕೆಗೆ ಮುಂಡೆ ಶಾಲೆಗೆ ಹಾಕುತ್ತೇನೆ. ಅಲ್ಲಿಯೇ ಮನೆ ಮಾಡಿ ಇರುತ್ತೇನೆ. ಕೇಶವನ ಲಗ್ನವಾಗಬೇಕಾಗಿದ್ದರೆ ಈ ಎಂಟು--ಹತ್ತು ದಿನಗಳಲ್ಲಿಯೇ ಆಗಿಬಿಡಲಿ. ಅದನ್ನು ಮುಗಿಸಿಕೊಂಡು ಹೊರಡುತ್ತೇನೆ. ಇಲ್ಲದಿದ್ದರೆ ಮುಹೂರ್ತ ಗೊತ್ತಾದ ಮೇಲೆ ಪತ್ರ ಹಾಕಿಸಿ ತಿಳಿಸು. ಬಂದು ಕಾರ್ಯವನ್ನು ಮುಗಿಸಿ ಹೋಗುತ್ತೇನೆ. ಹುಚ್ಚಿಯಂತೆ ಒದರಬೇಡ. ಒಂದು ಮಾತು ಕೇಳು. ಒಂದು ಎತ್ತು ಕೆರೆಗೆಳೆಯುವ, ಇನ್ನೊಂದು ಬಾವಿಗೆಳೆಯುವ ಈ ನಮ್ಮ ದಾಂಪತ್ಯದಲ್ಲಿ ಸಹ ಇಬ್ಬರು ಮಕ್ಕಳು ಹುಟ್ಟಿದರು. ಅವರನ್ನು ಸರಿಯಾಗಿ ಹಂಚಿಕೊಳ್ಳೋಣ. ನಿನಗೆ ಆ ಮಗನನ್ನು ಬಿಟ್ಟುಕೊಟ್ಟಿದ್ದೇನೆ. ಕುಸುಮಾ ನನ್ನ ಪಾಲಿಗೆ!" ಎಂದು ದೇಸಾಯರು ಮನೆಯಿಂದ ಹೊರಟುಹೋದರು. ಹೀಗೆ ಜಾನಕಿಬಾಯರೆದುರು ನಿಂತು ಇಷ್ಟೊಂದು ದೀರ್ಘವಾಗಿ ಸಾತ್ವಿಕ ಸಂತಾಪದಿಂದ ಅವರೆಂದೂ ಮಾತನಾಡಿದ್ದಿಲ್ಲ.

ಜಾನಕಿಬಾಯರಿಗೆ ಏನು ಮಾಡಬೇಕೆಂಬುದು ತಿಳಿಯಲಿಲ್ಲ. ಆಕಾಶವೇ ಅವರ ಮೇಲೆ ಕಡಿದುಕೊಂಡು ಬಿದ್ದಂತಾಗಿತ್ತು. ತಮ್ಮ ದ್ವೇಷದ ಭರದಲ್ಲಿ ಕುಸುಮಾ ಕುಳಿತಿದ್ದ ಕೋಣೆಗೆ ಹೋಗಿ ಅವಳನ್ನು ಹಿಡಿದು ಹೊರಗೆ ಎಳೆತಂದು " ಏ! ಭೋಸಡಿ! ಯಾವ ನಕ್ಷತ್ರದ ವ್ಯಾಲ ನೀ ನನಗ ಹುಟ್ಟಿದಿ! ನೀ ಮಗಳಲ್ಲ! ಜನ್ಮಾಂತರದ ಪಿಶಾಚಿ! ನೀ ಹುಟ್ಟಿದ್ದು ಮನಿಮುರಿಲಿಕ್ಕೆ! ನಿನ್ನ ಮಾರಿ ಛಂದ ಮಾಡಿ ಪ್ರಪಂಚದಾಗ ನೀ ಸುಖಪಡಬೇಕು ಅಂತ ನಾ ಕಷ್ಟಬಟ್ರೆ, ಹಾಂಗೂ ಹೀಂಗೂ ಮನಿಗೆ ಬರೋ ಗಂಡನ್ನ ಹದ್ದುಪಾರು ಮಾಡಲಿಕ್ಕೊ ಈಗ ಕಾರಣಾಗತೀದಿ!" ಎಂದು ಮೈತುಂಬ ಚಿವುಟಿದರು. ಉತ್ತರವಾಗಿ ಕುಸುಮಾ ಬಿಕ್ಕಿ ಬಿಕ್ಕಿ ಅಳಹತ್ತಿದಳು.

ಕೇಶವನು ಮನೆಗೆ ಬಂದ ಮೇಲೆ ಅವನೆದುರಿಗೆ ಜಾನಕಿಬಾಯರು ನಡೆದ ಪುರಾಣವನ್ನೆಲ್ಲ ಪಠಿಸಿದರು ಕೇಶವನಿಂದಾದರೂ ಸಹಾನುಭೂತಿಯು ದೊರೆಯಬಹುದೆಂದು ಅವರು ನಿರೀಕ್ಷಿಸಿದರು. ಆದರೆ ಕೇಶವನು ಕುಳಿತಲ್ಲಿಂದ ಧೋತರವನ್ನು ಜಾಡಿಸಿ ಎದ್ದು ಕಿವಿಯ ಮೇಲೆ ಕೈಯಿಟ್ಟುಕೊಂಡ. "ಅವ್ವಾ! ಈ ಮಾತು ಕೇಳಿ ಕೇಳಿ ನನಗ ಸಾಕಾತು. ಕುಟ್ಟಿದ ತವುಡಕ ಕುಟ್ಟೋದರೊಳಗ ಏನು ಅರ್ಥ ಅದ? ನೀ ಭಲಾ ಅಪ್ಪ ಭಲಾ. ಮದುವೀ

ದಾರಿ ನೋಡಿ ನೋಡಿ ಮುದುಕಾಗಲಿಕ್ಕೆ ಬಂದೆ. ಇನ್ನೆಂಟು ದಿವಸದೊಳಗ ಇಲ್ಲಿ ನನಗ ಅಕ್ಕೀಕಾಳು ಬೀಳಲಿಲ್ಲಾ ಅಂದ್ರ ನಾ ವೆಂಕಟಾಪುರಕ್ಕೋ ನುಗ್ಗಿಯು ಕೇರಿಗೋ ಹೋಗಿ ಲಗ್ನಾ ಮುಗಿಸಿಕೊಂಡು ಬರತೀನಿ! ನೀವು ಯಾರೂ ಬರಬ್ಯಾಡ್ರಿ. ನಾ ವರಾ ಒಬ್ಬಾಂವಾ ಹೋದ್ರ ಸಾಕು. ಲಗ್ನ ಆಗ್ತದ." ಎಂದು ಕೇಶವನು ತನ್ನ ಧೋರಣೆಯನ್ನು ಸ್ಪಷ್ಟೀಕರಿಸಿದನು.

ಜಾನಕಿಬಾಯರು ಅಸಹಾಯರಾದರು. ಕುಸುಮಾ ತನ್ನ ಮೌನ ವ್ರತದಲ್ಲಿದ್ದಳು. ದೇಸಾಯರು ರಣಕಹಳೆಯನ್ನೂದಿ ಸಾನಿಯ ಬಳಿಗೆ ಸಾಗಿದ್ದರು. ಅವರು ನಂಬಿದ್ದ ಕೇಶವನು ಸಹ ಈಗ ನೋಟೀಸು ಕೊಟ್ಟಿದ್ದ. ಇಂಥ ಹೊತ್ತಿನಲ್ಲಿ ಏನು ಮಾಡಬೇಕೆಂಬುದು ಅವರಿಗೆ ತಿಳಿಯದಾಯಿತು. ನಿರಾತಂಕವಾಗಿ ಮನೆಯನ್ನು ಇಲ್ಲಿಯ ವರೆಗೆ ಆಳಿದ ಅವರಿಗೆ ತಮ್ಮ ಆಳಿಕೆಯು ಮುಗಿಯಲು ಬಂದಿದೆಯೋ ಏನೋ ಎಂಬ ಸಂಶಯ ಬಂತು. ದೇಸಾಯರು ಮೊದಲಿನಿಂದ ಸಿಡಿದು ಹೋಗಿದ್ದರು ಅವರೊಡನೆ ಸಹಕಾರವಾಗಲೀ "ರಾಜಿ"ಯಾಗಲೀ ಸಾಧ್ಯವಿರಲಿಲ್ಲ. ಸಾಧಿಸಿದರೆ ಅದು ಕೇಶವನೊಡನೆ ಸಾಧಿಸಬೇಕು. ಇದೇ ತರುಣೋಪಾಯವೆಂದು ಅವರಿಗೆ ಮನವರಿಕೆಯಾಯಿತು. ಇಲ್ಲಿಯ ವರೆಗೆ ಸಿಂಹದಂತೆ ಗರ್ಜಿಸುತ್ತಿದ್ದ ಜಾನಕಿಬಾಯರು ಈಗ "ಆಕಳು"ಸ್ವಭಾವದವರಾಗಿ 'ಈಲಾ'ಗಿ ಸವಿಮಾತಿನಲ್ಲಿ ಕೇಶವನನ್ನು ಸಂಬೋಧಿಸಿದರು.

"ಕೇಶವಾ, ನೀ ಸುಖದಿಂದಿದ್ರs ನನಗ ಸುಖ ನಿನ್ನ ಸಮಾಧಾನs ನನ್ನ ಸಮಾಧಾನ. ಅವರು ಹೇಳಿ ಕೇಳಿ ಮನೀ ಕಡಿಗೆ ಬೆನ್ನು ತಿರುಗಿಸೋರು. ಅವರು ಹೇಳಿದ್ಹಾಂಗ ಈ ಕುಸುಮಾ ಕುಣಿಯೋಕಿ. ನನಗ ಈ ಜಗತ್ತಿನ್ಯಾಗ ನೀನs ಆಧಾರ. ನಿನ್ನ ಮನಸ್ಸು ನೋಯಿಸಿದರ ನಾ ಏಸು ಸುಖ ಪಟ್ಟೇನು! ಪುರೋಹಿತರನ್ನ ಕರಸು. ಮುಹೂರ್ತಾ ಗೊತ್ತು ಮಾಡಿ ಬಿಡೋಣು. ನಿನ್ನ ಲಗ್ನಾ ಒಂದು ಮುಗಿಸಿ ಇವರು ಪುಣೆಕ್ಕಾರ ಹೋಗಲಿ, ಹರಿದ್ವಾರಕ್ಕಾರ ಹೋಗಲಿ! ನಾ ನಿರುಂಬಳಾಗಿ ಇರ್ತೀನಿ ಮೊಗ್ಗಾವಿಯೊಳಗ ಇದ್ದಾದರೂ ಇವರು ನನಗ ಮಾಡಿದ್ದು ಅಷ್ಟರಾಗs ಅದ"

ಕೇಶವನಿಗೆ ಈಗ ಸಮಾಧಾನವಾಯಿತು. ನೆಟ್ಟಗೆ ಹೋಗಿ ಪುರೋಹಿತರನ್ನು ಕರೆದುಕೊಂಡು ಬಂದ. ಮುಂದೆ ಹತ್ತು ಹನ್ನೆರಡು ದಿನಗಳಲ್ಲಿಯೇ

ಪುರೋಹಿತರು ಹುಡುಕಿ ಕೊಟ್ಟರು ಮುಹೂರ್ತವನ್ನು. ಇದೆಲ್ಲ ನಿರ್ಣಯು ವಾದ ವಿಷಯುವನ್ನು ಭೀಮೂನಿಗೆ ತಿಳಿಸಲು ಕೇಶವನು ಅವನ ಮನೆಗೆ ನಡೆದ.

ಅಂದು ಸಂಜೆಗೆ ದೇಸಾಯರು ಮನೆಗೆ ಬರಲೇ ಇಲ್ಲ. ತಮ್ಮ ಬಿಗುವಿನಲ್ಲಿಯೇ ಇದ್ದ ಜಾನಕಿಬಾಯರು ಒಳಗಿಂದೊಳಗೆ ಅವರ ದಾರಿಕಾಯುತ್ತಿದ್ದರು. ಉದ್ವಿಗ್ನರಾದ ಅವರಿಗೆ ವಿಚಾರಗಳ ತಾಕಲಾಟದಲ್ಲಿ ಅಂದು ನಿದ್ದೆಯೇ ಹತ್ತಲಿಲ್ಲ. ಮರುದಿನ ಮುಂಜಾವಿನಲ್ಲಿ ಸೂರ್ಯನಿರುವ ಹೊತ್ತಿಗೆ ದೇಸಾಯರು ಮನೆಗೆ ಬಂದು "ಹೂಂ ಕುಸುಮಾ, ನಿನ್ನ ಹಾಸಿಗೆ ಕಟ್ಟು. ನಿನ್ನ ಸಾಮಾನೆಲ್ಲಾ ಟ್ರಂಕಿನ್ಯಾಗ ಹಾಕು. ಇವತ್ತ ರಾತ್ರೀ ಗಾಡಿಗೆ ಈ ಊರು ಬಿಡಬೇಕು." ಎಂದರು.

ಜ್ವಾಲಾಮುಖಿಯಂತೆ ರಾತ್ರಿಯೆಲ್ಲ ಕಪ್ಪುಹೊಗೆ ಬಿಡುತ್ತಿದ್ದ ಜಾನಕಿಬಾಯರು ಈಗ ಬೆಂಕಿ ಕಾರತೊಡಗಿದರು "ಹೋಗ್ರಿ! ಇವತ್ತs ಹೋಗ್ರಿ! ನೀವು ಇಲ್ಲಿದ್ದು ಯಾರ ಅನುವೂ ಆಪತ್ತು ನೋಡಿದ್ದು ಅಷ್ಟರಾಗs ಅದ! ನೀವು ಸತ್ತರೇನು ಮೊಗ್ಗಾವಿ ಅಳಬೇಕಾಗಿಲ್ಲ. ಆದ್ರ ಇನ್ನು ಹನ್ನೆರಡು ದಿವಸಕ್ಕ ಕೇಶವಗ ಅಕ್ಕೀಕಾಳು ಅಂತ ಗೊತ್ತು ಮಾಡೇದ. ನೀವಿಷ್ಟು ನಾಂದೀ ಇಟಗೊಂಡು ಮರದು ಹೋಗ್ತೀರೇನೋ ನೋಡ್ರಿ! ನೀವು ನಾಂದೀ ಇಡದಿದ್ರೂ ಅಂವಾ ನೋಂದಣಿ ಲಗ್ನಕ್ಕ ತಯಾರ್ಚs ಇದ್ದಾನ! ಇವತ್ತ ಹೊರಡತಿದ್ರ ಹೊರಡರಿ ಆ ಸಾನೀ ಬಾಲಾ ಹಿಡಕೊಂಡು! ಇದೊಂದು ಮುಗ್ಯಾಸ ಮರಿನ್ನ ಬಗಲಾಗ ಎತಿಗೊಂಡು! ನೀವು ನನ್ನ ಪಾಲಿಗೆ ಇಲ್ಲಾ ಅಂತ ಹೇಳಿ ನಾ ಒಂದು ಹೊತ್ತು ಊಟಾ ಮಾಡತೀನಿ!"

ದೇಸಾಯರೆಂದರು: "ನೀ ಒಂದು ಹೊತ್ತಾರs ಊಟಾ ಮಾಡು. ನಿನ್ನ ತಲಿಯಾರ ಬೋಳಿಸಿಕೊ. ಅದು ನನಗ ಸಂಬಂಧಿಸಿದ್ದಲ್ಲ. ನಿನ್ನ ಕರ್ಮಕಾಂಡದೊಳಗ ಒಂದು ಅಧ್ಯಾಯ ಅದು. ಆದರ ನಾ ಒಮ್ಮೆ ಹೇಳೀನಿ,—ಸ್ವಲ್ಪ ದಿವಸದಾಗ ಕೇಶವನ ಮದುವೆಯಾದರ ಅಕ್ಕೀಕಾಳು ಹಾಕಿ ಹೋಗತೀನಿ ಅಂತ. ಆದರಂತೆ ನಡೀತೀನಿ. ಕುಸುಮಾ, ಕೇಶವನ ಮದುವಿ ಮುಗಿದ ಮರುದಿವಸ ನಾವಿಲ್ಲಿಂದ ಹೊರಡಬೇಕು. ಕೇಶವನ ಬೀಗರಿಗೆ ಹಾಕಿದ ಕಳುಹೂಟ ನಮಗೂ ಕಳುಹೂಟ. ನೆನಪಿಡು."

ಭೀಮೂನ ಮನೆಯಲ್ಲಿ ಮದುವೆಯ ಸಿದ್ಧತೆ ಭರದಿಂದ ಸಾಗಿತು. ಮೇನಕಿಯು ಮದುವಣಗಿತ್ತಿಯಾಗುವ ಸಂಭ್ರಮದಲ್ಲಿ ತಕತಕ ಕುಣಿಯ ಹತ್ತಿದಳು. ಕೇಶವನ ಮದುವೆಯ ಮುಹೂರ್ತವು ಗೊತ್ತಾಗಿರುವುದೆಂಬ ಸುದ್ದಿಯು ಊರಲ್ಲೆಲ್ಲ ಹಬ್ಬಿತು. ಆದರೆ ಕುಸುಮಾ? ಕುಸುಮಾನ ಮದುವೆ ಅದೇಕೆ ಗೊತ್ತಾಗಿಲ್ಲ? ಎಲ್ಲರೂ ಕೇಳುವವರೆ. ಕೇಶವದೇವರ ಗುಡಿಯ ಪಕ್ಕದಲ್ಲಿ ತಾವು ಹಿಡಿದ ಸಣ್ಣ ಮನೆಯಲ್ಲಿ ಕುಳಿತುಕೊಂಡು ಸುಬ್ಬಣಾಚಾರ್ಯರು ಇದೇ ವಿಚಾರವನ್ನು ಮಾಡುತ್ತಿದ್ದರು. ಅವರಿಗೆ ಈಗ ಉಳಿದ ಕೆಲಸವು ಅಷ್ಟೊಂದಿರಲಿಲ್ಲ. ಖಾಸಗಾವಿಯಿಂದ ತಿರುಗಿ ಬಂದಂದಿನಿಂದ ಗಣಪತರಾಯರು ಹೈಗ್ರೀವಾಚಾರ್ಯರ ಹೊಲಮನೆಯ ವಿಚಾರವನ್ನು ಒಂದು ರೀತಿಯಿಂದ ತಾವೇ ವಹಿಸಿಕೊಂಡಿದ್ದರು, ಅಂದರೆ ಶ್ರೀಪಾದರಾಯನಿಗೆ ಅದನ್ನು ವಹಿಸಲು ಹೇಳಿದ್ದರು. ಉತ್ಪನ್ನಿನಲ್ಲಿ ಆಚಾರ್ಯರ ಮೃತ್ಯುಪತ್ರದ ಪ್ರಕಾರ ಪಾಲನ್ನು ಮಾಡುವುದಾಗಿ ಅವರು ಆಗಲೇ ಸುಬ್ಬಣಾಚಾರ್ಯರಿಗೆ ತಿಳಿಸಿದ್ದರು; ರಮಾಬಾಯರಿಗೂ ಹೇಳಿಕಳಿಸಿದ್ದರು. "ರಾಯರ‍, ಈ ತ್ರಾಸೆಲ್ಲಾ ನಿಮಗ್ಯಾಕ. ನಿಮ್ಮ ಉಪಾಧಿ ನೂರಾರು ಇರತಾವ. ನನ್ನಂಥಾ ಬಡ ಬ್ರಾಹ್ಮಣನ ತಲಿಮ್ಯಾಲ‍ ಇರಲಿ ಈ ಭಾರ" ಎಂದು ಆಚಾರ್ಯರು ರಾಯರಿಗೆ ಹೇಳಿ ನೋಡಿದರು. ಆದರೆ ರಾಯರು ತಮ್ಮ ನಿರ್ಣಯವನ್ನು ಬದಲಿಸಲಿಲ್ಲ. "ಆಚಾರ್ರ‍, ತನಗ ಬೇಕಾದದ್ದ‍ ಮನಸ್ಯಾಗ ಯಾವಾಗಲೂ ಮಾಡಲಿಕ್ಕೆ ಎಲ್ಲಿ ಸಿಗತದ? ಬ್ಯಾಡಾದ ಕೆಲಸನೂ ಒಮ್ಮೊಮ್ಮೆ ಮಾಡಬೇಕಾಗ್ತದ." ಎಂದು ನಗೆಮಾತಿನಲ್ಲಿ ಅವರು ಆ ವಿಷಯವನ್ನು ತೇಲಿಸಿಬಿಟ್ಟಿದ್ದರು.

ಹೀಗಾಗಿ ನರಹರಿಯು ಊರು ಬಿಟ್ಟಿದ್ದರೂ ಸುಬ್ಬಣಾಚಾರ್ಯರ ದೃಷ್ಟಿಯಲ್ಲಿ ಅವನ ಪ್ರಭಾವವು ಊರು ಬಿಟ್ಟಿದ್ದಿಲ್ಲ ಇನ್ನು ಮುಂದೆ ನರಹರಿಯು ತಲೆಯೆತ್ತುವುದು ಸಾಧ್ಯವಿಲ್ಲವೆಂದು ಅವರು ತಿಳಿದಿದ್ದರು. ಆದರೆ ಊರಲ್ಲಿಯೇ ಪ್ರಮುಖರಾದ ಗಣಪತರಾಯರಂಥವರೇ ಅವನ ಪಕ್ಷವನ್ನು ಸಮರ್ಥಿಸಹತ್ತಿದ ಮೇಲೆ ಏನೆನ್ನಬೇಕು.? ಆದರೆ ಸುಬ್ಬಣಾಚಾರ್ಯರೇನೂ ಹತಾಶರಾಗಬೇಕಾಗಿರಲಿಲ್ಲ. ಅಗ್ರಹಾರವು ಅವರ ಬೆಂಬಲಕ್ಕಿತ್ತು. ನೂರೆಂಟು ದಾವೆಗಳಲ್ಲಿ ನಾರದರಾಗಿ ಅವರು ಮುಖ್ಯಸೂತ್ರಗಳನ್ನು ವಹಿಸುತ್ತಿದ್ದರು. ಮೇಲಾಗಿ ರಮಾಬಾಯರ ಸಾನ್ನಿಧ್ಯವಿತ್ತು. ಒಂದು ರೀತಿಯಿಂದ ಅವರ ಪಾಲಿನ ಆದಾಯ

ವೆಲ್ಲ ಆಚಾರ್ಯರಿಗೇ ಪ್ರಯೋಜನಕಾರಿಯಾಗುವದಿತ್ತು. ಅವರಾದರೂ ಜಗತ್ತಿನಲ್ಲಿ ದುಡಿಯಬೇಕಾಗಿದ್ದು ಯಾರ ಸಲುವಾಗಿ? ತಿಪ್ಪನೊಬ್ಬನೇ ಅವರ ಜೀವನಕ್ಕೆ ಆಧಾರವಾಗಿದ್ದ. ಈಗಾಗಲೇ ಅವರಿಗೆ ಸಾಕಷ್ಟು ಆಸ್ತಿಯನ್ನು ಆಚಾರ್ಯರು ಮಾಡಿಟ್ಟಿದ್ದರು. ತಮ್ಮ ಪ್ರತಿಭೆಗೂ ತೃಪ್ತಿಗೂ ಯೋಗ್ಯ ಸಾಧನಗಳು ಆಚಾರ್ಯರಿಗೆ ದೊರೆತಿದ್ದವು ಇನ್ನುಮೇಲೆ ಅವರು ಮಾಡ ಬೇಕಾದುದೇನು? ಕಾಲಕ್ಷೇಪ, ಉಪಭೋಗ, ಸೂಕ್ಷ್ಮ ಕಾಯದೆ-ಕಲಹ,— ಇವೆಲ್ಲವುಗಳಿಗೂ ಆವರಣವಾಗುವಂತೆ ಧರ್ಮದ ಕರ್ಮಕಾಂಡ! ಇವಿಷ್ಟಕ್ಕೆ ಆಚಾರ್ಯರು ಸಿದ್ಧರಾಗಿದ್ದರು.

ಸ್ವಂತದ ಸಮಸ್ಯೆಗಳನ್ನೆಲ್ಲ ಬಿಡಿಸಿ ಭದ್ರವಾಗಿಸಿದ್ದ ಆಚಾರ್ಯರಿಗೆ ಉಳಿದವರ ರಹಸ್ಯಗಳಲ್ಲಿ ಕೈಹಾಕುವ ಲವಲವಿಕೆಯು ಸ್ವಾಭಾವಿಕವಾಗಿ ಹೆಚ್ಚಿತು. ಕೇಶವನ ಮದುವೆಯ ಜೊತೆಗೆ ಕುಸುಮಾನದೂ ಏಕಾಗಬಾರದು? ಇದನ್ನು ತಿಳಿದುಕೊಳ್ಳಲು ಆಚಾರ್ಯರು ವಿಶ್ವಪ್ರಯತ್ನಮಾಡಿದರು ಆದರೆ ಅದು ಸಾಧ್ಯವಾಗಲಿಲ್ಲ. ವಾಡಿಕೆಯಾಗಿ ಗೊತ್ತಿದ್ದೋ ಗೊತ್ತಿಲ್ಲದೆಯೋ ಅವರೆದುರಿಗೆ ಎಲ್ಲ ವಿಷಯಗಳನ್ನು ಆಡಿಬಿಡುತ್ತಿದ್ದ ಜಾನಕಿಬಾಯರು ಸಹ "ಗಂಟೇ ಹೊಡಿಯೋ ಬ್ರಾಹ್ಮಣರಿಗೆ ಇನ್ನೊಬ್ಬರ ಮನೆತನದ ಗೊಡಿವ್ಯಾಕ? ನಿಮ್ಮ ಎಲ್ಯಾಗ ಕ್ವಾಣ ಸತ್ತು ಬಿದ್ದಿರಲಿಕ್ಕೆ ಇನ್ನೊಬ್ಬರ ಅನ್ನದ ವ್ಯಾಲಿನ ನೊಣ ಯಾಕ ಝಾಡಸತೀರಿ?" ಎಂದು ಕವಕ್ಕನೆ ಉತ್ತರ ಕೊಟ್ಟಿದ್ದರು.

ಆದರೆ ಆಚಾರ್ಯರು ಸಮಸ್ಯೆಯ ಸ್ವರೂಪವನ್ನು ಸೂಕ್ಷ್ಮವಾಗಿ ತಿಳಿದುಕೊಂಡಿದ್ದರು ಕುಸುಮಾನನ್ನು ನರಹರಿಗೇ ಕೊಡಬೇಕೆಂದು ದೇಸಾಯರು ಹಟ ಹಿಡಿದಿರಬಹುದು; ಇಲ್ಲವೆ ಅದು ಕುಸುಮಾನ ಹಟವಿದ್ದರೂ ಇರಬಹುದು. ಅದಕ್ಕಾಗಿಯೇ ಕುಸುಮಾನ ಮದುವೆಯ ಮಾತು ಅಲ್ಲಿಗೇ ಉಳಿದಿದೆಯೆಂದು ಆಚಾರ್ಯರು ತರ್ಕಿಸಿದರು. ಈ ತರ್ಕವನ್ನು ಅವರು ಊರಲ್ಲಿಯ ನಾಲ್ಕು ಪ್ರತಿಷ್ಠಿತ ಕಟ್ಟೆಗಳ ಮೇಲೆ ಕುಳಿತು ಹೇಳಲು ಸಹ ಹಿಂದುಮುಂದೆ ನೋಡಲಿಲ್ಲ

ಈ ಹಾರುಸುದ್ದಿಯು ಶೀನೂನ ಕಿವಿಗೂ ಬಿದ್ದಿತು. ಆದರೆ ನರಹರಿಯು ಅವನೆದುರಿಗೆ ಯಾವ ವಿಷಯವನ್ನೂ ಹೇಳಿದ್ದಿಲ್ಲ. ನರಹರಿಯಲ್ಲಿ ಕುಸುಮಾನ ಬಗ್ಗೆ ಇಷ್ಟೊಂದು ಭಾವನೆಯು ಬೆಳೆದಿದ್ದರೆ ಅದು ಶೀನೂಗೆ ಗೊತ್ತಾಗದೆ ಹೇಗೆ

ಹೋಗುತ್ತಿತ್ತು? ಮೊದಲಿನಿಂದ ನರಹರಿಯು ಕುಸುಮಾನ ಗುಣವಂತಿಕೆಯನ್ನು ವರ್ಣಿಸುತ್ತಿರುವುದು ನಿಜ. ಈ ವಿಷಯದಲ್ಲಿ ಶೀನೂನ ಮನಸ್ಸನ್ನು ಸಹ ಅವನು ಒಲಿಸಿದ್ದ. ಆದರೆ ಅದು ಆಳವಾದ ಪ್ರೀತಿಯಲ್ಲಿ ಪರಿಣಮಿಸಿರಬಹುದೆಂಬುದು ಶೀನೂಗೆ ಹೊಳೆಯಲಿಲ್ಲ ಇನ್ನು ಕುಸುಮಾ ನರಹರಿಯ ಬಗ್ಗೆ ಹಟ ಹಿಡಿದಿರುವುದಂತೂ ಅವನಿಗೆ ಬರಿ ದಂತಕತೆಯಾಗಿ ಕಂಡಿತು.

ಒಂದೆರಡು ಸಲ ಶೀನೂಗೆನಿಸಿತು,—ಕುಸುಮಾನನ್ನು ತಾನೇಕೆ ಮದುವೆಯಾಗಬಾರದು? ದೇಸಾಯರು ತನ್ನ ತಂದೆಯನ್ನು ಇದರ ಬಗ್ಗೆ ಕೇಳಬಾರದೇಕೆ? ಜಾನಕಿಬಾಯಿ ದೇಸಾಯರ ನಡುವೆ ಆದ ಮಾತುಗಳ ಸುಳಿವು ಅವನಿಗೆ ಹತ್ತಿರಲಿಲ್ಲ. ಇದು ಅವನ ಸ್ವಂತದ ಅನಿಸಿಕೆಯೇ ಹೊರತು ಬೇರೆಯಲ್ಲ. ತಲೆಯಲ್ಲಿ ಒಂದೆರಡು ಸಲ ಬಂದ ವಿಚಾರವನ್ನು ಶೀನೂ ಅದೇಕೋ ದೂರ ತಳ್ಳಿಬಿಟ್ಟಿದ್ದ. ಅವನಿಗೆ ಗೊತ್ತಿಲ್ಲದೆ—ಅಸ್ಪಷ್ಟವಾಗಿ ಬಂದು ಅದು ಶೀನೂನ ಮನದಲ್ಲಿ ಮನೆ ಮಾಡಿಕೊಂಡಿತ್ತು.

ಹಾರುಸುದ್ದಿಯ ಪ್ರಶ್ನೆಯೇನೋ ತೀವ್ರವಾಗಿಬಿಟ್ಟಿತು. ಒಂದು ದಿನ ಸಂಜೆಗೆ ಗಣಪತರಾಯರ ಕಡೆಗೆ ಬಂದಾಗ ದೇಸಾಯರು ಸಹಜವಾಗಿ ಹೇಳಿದ್ದರು: ಕುಸುಮಾನಿಗೆ ಮುಂದೆ ಕಲಿಸುವ ಮನಸ್ಸಿದೆ; ಕೇಶವನ ಮದುವೆಯಾದ ಮೇಲೆ ಅವಳ ಸಲುವಾಗಿ ಪುಣೆಯಲ್ಲಿ ಹೋಗಿ ಮನೆ ಮಾಡುತ್ತೇನೆ. ಇನ್ನೊಂದು ಎಂಟು ಹತ್ತು ದಿನಗಳಲ್ಲಿ ಹೊರಡಬೇಕು; ಇತ್ಯಾದಿ ಸುಧಾರಣಾಪ್ರಿಯರಾದ ರಾಯರು ಈ ವಿಚಾರದ ಬಗ್ಗೆ ದೇಸಾಯರನ್ನು ಅಭಿನಂದಿಸಿದ್ದರು. ಈ ಮಾತೆಲ್ಲ ನಡೆಯುವಾಗ ಶೀನೂ ಅಲ್ಲಿಯೇ ಇದ್ದ. ಅದನ್ನು ಕೇಳಿ ಅವನಿಗೆ ಸಮಾಧಾನವಾಗಿತ್ತು.

ಅಂತೂ ಕೇಶವನ ಮದುವೆಯ ದಿನ ಬಂತು. ಸುಬ್ಬಣಾಚಾರ್ಯರಿಗೆ ವರನ ಮನೆಯಲ್ಲಾಗಲೀ ವಧುವಿನ ಮನೆಯಲ್ಲಾಗಲೀ ಪ್ರಾಶಸ್ತ್ಯವಿರಲಿಲ್ಲ. ಒಂದೆರಡು ಸಲ ಊಟದ ಆಮಂತ್ರಣ ಬಂದಿತ್ತು. ದಕ್ಷಿಣೆ ದೊರೆಯಿತು. ಅಷ್ಟೆ. ರಮಾಬಾಯರಿಗಂತೂ ಆಮಂತ್ರಣ ಬರುವ ಸ್ಥಿತಿಯು ಸಹ ಇರಲಿಲ್ಲ. ಅವರು ಈಗ ಸಕೇಶಿತನವನ್ನು ಮೀರಿ 'ಮಡಿವಂತಿಕೆ'ಯ ರಾಜ್ಯದಲ್ಲಿ ಕಾಲಿಟ್ಟಿದ್ದರು. ಅವರ ಮಗ ಕಿಟ್ಟೂನಿಗೆ ಆಮಂತ್ರಣವಿತ್ತು. ಆದರೆ ಅವರು ತಮ್ಮ ಮಗನನ್ನು ಮದುವೆಯ ಮನೆಗೆ ಹೋಗಗೊಡಲಿಲ್ಲ. ಲಗ್ನದ ಮನೆಯಲ್ಲಾದ ಪಕ್ವಾನ್ನ

ಗಳನ್ನೆಲ್ಲ ಮನೆಯಲ್ಲಿಯೇ ಮಾಡಿ ಅವನಿಗೆ ಬಡಿಸಿದರು. ತಿಪ್ಪನಿಗೆ ಇದರಿಂದ ಚೊಕ್ಕಂದವಾಯಿತು. ಅವನು ಮದುವೆಯ ಮನೆಯಲ್ಲಿಯೂ ರಮಾಬಾಯಿಯವರ ಮನೆಯಲ್ಲಿಯೂ ಕೂಡಿಯೇ ತನ್ನ ನಾಲಗೆಯ ಚಪಲವನ್ನು ತೀರಿಸಿಕೊಂಡ.

ಈ ಮದುವೆಯ ಸಮಯದಲ್ಲಿ ಹೊರಟ ಮೆರವಣಿಗೆಯೊಂದು ಶೀನೂನ ಹೃದಯಾಂತರದಲ್ಲಿ ಚಿರಸ್ಮರಣೀಯವಾಗಿ ನೆಲಸಿತು. ಅವನು ಸಂಜೆಯ ತಿರುಗಾಟವನ್ನು ಮುಗಿಸಿಕೊಂಡು ಬರುವಾಗ ಹಾದಿಯಲ್ಲಿ ಈ ಮೆರವಣಿಗೆಯನ್ನು ನೋಡಿದ್ದ. ಎತ್ತಿ ಹಿಡಿದ ಗ್ಯಾಸ್‌ಲೈಟುಗಳ ಬೆಳಕಿನಲ್ಲಿ ಅಲ್ಲಿಯ ಉತ್ಸವದ ವ್ಯಕ್ತಿಗಳೆಲ್ಲ ಅವನಿಗೆ ಸ್ಪಷ್ಟವಾಗಿ ಕಂಡಿದ್ದವು ಕೇಶವ ಹಾಗೂ ಈಗ ಅವನ ಪತ್ನಿಯಾದ ಮೇನಕೆಯು ಒಂದು ಬಗಿಯಲ್ಲಿ ಕುಳಿತ್ತಿದ್ದರು. ಹಿಂದಿನಿಂದ ಎರಡೂ ಮನೆತನಗಳ ಪುರುಷ–ಮಹಿಳೆಯರ ಸಮುದಾಯವು ಬರುತ್ತಿತ್ತು. ಅನೇಕ ಸುಮಂಗಲೆಯರು ಹೊಸ ಉಡಿಗೆತೊಡಿಗೆಗಳಿಂದ ತಮ್ಮನ್ನು ಸಿಂಗರಿಸಿಕೊಂಡು ತಾವು ಹಾಯ್ದು ಹೋಗುತ್ತಿದ್ದ ಓಣಿಗೇ ಒಂದು ಶೋಭೆಯನ್ನು ತಂದಿದ್ದರು. ಈ ಸ್ತ್ರೀಸಮುದಾಯದಲ್ಲೆಲ್ಲ ಶೀನೂನ ಕಂಗಳನ್ನು ಸೆರೆಹಿಡಿದ ವ್ಯಕ್ತಿಯೆಂದರೆ ಒಂದೇ ಒಂದು,—ಕುಸುಮಾ! ಕುಸುಮಾನ ಅಗಾಧವಾದ ಸೌಂದರ್ಯವನ್ನು ನೋಡಿ ಶೀನು ಬೆರಗಾಗುವುದಷ್ಟೇ ಅಲ್ಲ, ಅಧೀರನಾದ ಕೇಸರಿಬಣ್ಣದ ಪೀತಾಂಬರವೊಂದನ್ನುಟ್ಟ ಕುಸುಮಾ ವಿಶೇಷ ಆಭರಣಗಳನ್ನು ಧರಿಸಿದ್ದಿಲ್ಲ ಆದರೆ ಅವಳ ಆ ಕೋಮಲತೆ, ಆ ಎಳೆತನ, ಆ ನಿಲುವು, ಆ ಮಂದಗತಿ, ಆ ಗೆಲುವು,—ಇವೇ ಅವಳಿಗೆ ಆಭರಣಗಳಾದುವು ಈ ನಿಬ್ಬಣವನ್ನು ಸ್ವಾಗತಿಸಲು ಬಂದ ಪುರದೇವತೆಯಂತೆ ಅವಳು ಕಂಗೊಳಿಸುತ್ತಿದ್ದಳು. ಕುಸುಮಾನನ್ನು ನೋಡುತ್ತ ಮಂತ್ರಿಸಿದ ಗೊಂಬೆಯಂತೆ ನಿಂತಲ್ಲಿಯೇ ಶೀನೂ ನಿಂತುಬಿಟ್ಟ. ದೈವಿಕವಾದ ಆ ಸೌಂದರ್ಯದರ್ಶನವು ಅವನ ಹೃದಯವನ್ನು ಅಲ್ಲೋಲಕಲ್ಲೋಲವಾಗಿಸಿತು. ಅವನ ಮೈಮೇಲೆ ಎಚ್ಚರವೇ ಇರಲಿಲ್ಲ ಅವನ ಜೊತೆಯಲ್ಲಿ ಪ್ರಾಥಮಿಕ ಶಾಲೆಯಲ್ಲಿ ಕಲಿತ ಊರ ಉಂಡಾಡಿಗನೊಬ್ಬನು ಅಲ್ಲಿ ಹಾಯ್ದುಹೋಗುವಾಗ ಶೀನೂನನ್ನು ನೋಡಿ "ಯಾಕೋ ಶೀನೂ! ಮೆರವಣಿಗೀ ಯಾಕ ಇಷ್ಟು ಕಣ್ಣಾಗ ಕಣ್ಣಿಟ್ಟು ನೋಡ್ತೀದಿ? ನಿಮ್ಮಪ್ಪಗ ಹೇಳಲೇನು? ನಿಂದೂ ಮದುವಿ ಇದಕ

ಲಗ್ನವಾಸದಾಗ ಮುಗಿಸಿಬಿಡು ಅಂತ!" ಎಂದು ನಗೆಯಾಡಿದನು. ಆಗ ಶೀನೂನಿಗೆ ಪ್ರಜ್ಞೆ ಬಂತು. ಮದುವೆಯ ಮೇಳವೆಲ್ಲ ಮುಂದೆ ಹೋಗಿತ್ತು. ಆ ಉತ್ಸವಸಾಗರದ ಕುವರಿಯಂತಿದ್ದ ಲಕ್ಷ್ಮೀದೇವಿ—ಕುಸುಮಾ—ಮಾಯ ವಾಗಿದ್ದಳು. ಆದರೆ ಅವಳ ಆ ಸುಂದರಮೂರ್ತಿಯು ಶೀನೂನ ಹೃದಯದ ಸಿಂಹಾಸನದಲ್ಲಿ ಸ್ಥಿರವಾಗಿ ವಿರಾಜಮಾನವಾಗಿತ್ತು.

ಮದುವೆಯು ಎಲ್ಲ ಎರಡನೆಯ ಮದುವೆಗಳು ನಡೆಯುವಂತೆ ನಡೆ ಯಿತು. ಕೇಶವನ ಮೊದಲನೆಯ ಮದುವೆಯಲ್ಲಿ ಜಾನಕಿಬಾಯಿಯರ ವಾಕ್ಯವೇ ಪ್ರಮಾಣವಾಗಿತ್ತು ಈಗ ಅವರ ಯಾವ ಮಾತೂ ನಡೆಯಲಿಲ್ಲ. ಕೇಶವ ನಿಗೆ ತನ್ನ ತ್ಯಾಗಿಯನ್ನು ಕೊಟ್ಟಿದ್ದೇ ಸ್ನೇಹದ ಸಲುವಾಗಿ ತಾನು ಮಾಡಿದ ಪರಮ ತ್ಯಾಗವೆಂಬ ರೀತಿಯನ್ನು ಭೀಮಾ ಇಟ್ಟುಬಿಟ್ಟಿದ್ದ. ವರದಕ್ಷಿಣೆ, ವರೋಪಚಾರ,—ಎಲ್ಲವೂ ಅಷ್ಟಕ್ಕಷ್ಟೆ. ಒಂದು ವಿಷಯದಲ್ಲೂ ಜಾನಕಿ ಬಾಯಿಯರು ಮಿಸುಕಾಡುವ ಹಾಗಿರಲಿಲ್ಲ ಅವರು ಪಿಟ್ಟೆಂದರೆ ಕೇಶವನು ಥಟ್ಟನೇ ಎದ್ದು ನಿಂತು ಈ ರಗಳೆ ಸಾಕೆಂದು ಸ್ಪಷ್ಟವಾಗಿ ಹೇಳುತ್ತಿದ್ದ. ಮೇನಕಿಗೂ ಅದೇ ಧೈರ್ಯ ಬಂದಿತ್ತು. ಇನ್ನೊಬ್ಬರಾದರೆ ಜಾನಕಿಬಾಯಿಯರೆದುರಿಗೆ ಬೆವರು ಬಿಟ್ಟು ನಡುಗುತ್ತಿದ್ದರು. ಆದರೆ ಮೇನಕಿಯು ಅವರ ಸಲುವಾಗಿ ತನ್ನ ನಗೆ ಯನ್ನು ತಡೆದು ಹಿಡಿಯಲಿಲ್ಲ; ಮಾತಾಡುವುದನ್ನು ಬಿಡಲಿಲ್ಲ. ಅಗ್ನಿಯೆದು ರಿಗೆ ಕುಳಿತಾಗ ಜಾನಕಿಬಾಯಿಯರ ಸಮಕ್ಷಮದಲ್ಲಿಯೇ ಆಕೆಯು ಕೇಶವನೊಡನೆ ಮಾತಾಡಿಬಿಟ್ಟಳು ಸೆರೆಯಲ್ಲಿ ಸಿಕ್ಕುಬಿದ್ದ ಸಿಂಹದಂತೆ ಮೋರೆ ಗಂಟಿಕ್ಕಿ ಕೊಂಡು ಜಾನಕಿಬಾಯಿಯರು ಸುಮ್ಮನಿದ್ದರು.

ರಂಗಾಸಾನಿಯ ಪಾಲಿಗೆ ಮದುವೆಯೆಂದರೆ ಬರಿ ಮೆರವಣಿಗೆಗಳು. ಮದುವೆಯ ಮನೆಯಲ್ಲಿ ಕಾಲಿಡುವ ಸೌಭಾಗ್ಯವು ಅವಳಿಗಿರಲಿಲ್ಲ. ಒಂದೆರಡು ಸಲ ಓಣಿಯಲ್ಲಿಯೇ ನಿಂತುಕೊಂಡು ವಧೂವರರನ್ನು ಆಕೆ ನೋಡಿದ್ದಳು. ಮದುವೆಯೆಲ್ಲ ಮುಗಿದ ಮೇಲೆ 'ಹಂದರ-ಜಡ್ಡಿನಿಂದ' ಮೂರು ದಿನದಲ್ಲಿ ನಿರ್ವಿಣ್ಣರಾಗಿ ಹೋದ ದೇಸಾಯಿಯರು ರಾತ್ರಿ ಅವಳ ಮನೆಗೆ ಬಂದಾಗ "ಕೇಶವನ ಈ ಹೆಣ್ತಿ ಸೇರಿಗೆ ಸವ್ವಾಸೇರು ಕಾಣ್ತಾಳ. ಇನ್ನ ಜಾನಕಿಬಾಯಿಯರ ಆಟ ಮುಗಿದ್ಹಾಂಗ! ಒಬ್ಬ ಸೊಸಿನ್ನ ಉರಿಸಿಕೊಂಡ್ರು. ಇನ್ನೊಬ್ಬಕೀ ಕೈಯ್ಯಾಗ ಉರಿತಾರ ಇನ್ನ!" ಎಂದು ನಕ್ಕಳು.

“ಹಾಳುಗುಂಡಿ ಬೀಳವಲ್ಯಾಕ. ಈ ಬಂಧನದಾಗಿಂದ ನಾ ಇನ್ನ ಮುಕ್ತಾಗತೀನಿ. ಎಲ್ಲಾ ತಯಾರೀ ಮಾಡಿಯಿಲ್ಲೊ ? ನಾಳೆ ರಾತ್ರಿ ಗಾಡಿಗೆ ಹೊರಡಲಿಕ್ಕೆಬೇಕು” ಎಂದು ದಣಿದ ದನಿಯಲ್ಲಿ ದೇಸಾಯರು ಹೇಳಿದರು.

“ಇಷ್ಟು ವರ್ಷ ಮೊಗ್ಗಾವೀ ಹಿಡಿದು ಈಗ ಊರು ಬಿಡೋ ಪ್ರಸಂಗ ಬಂತು. ಇದೂ ಒಂದು ಯೋಗಾಯೋಗಾ.” ಸಾನಿಯೆಂದಳು ಬಳಿಕ ದೇಸಾಯರು ದಣಿದಿರುವುದನ್ನು ತಿಳಿದು ಅವರನ್ನು ಉಪಚರಿಸುವುದರಲ್ಲಿ ಅವಳು ನಿರತಳಾದಳು.

ಮರುದಿವಸ ರಾತ್ರಿ ಕುಸುಮಾ–ದೇಸಾಯಿ–ಸಾನಿಯರ ಸಾಮಾನು ಗಳೆಲ್ಲ ಗಾಡಿಯ ಬ್ರೇಕ್‌ನಲ್ಲಿ ಬಿದ್ದವು ಅವರು ಇನ್ನೊಂದು ಡಬ್ಬಿಯಲ್ಲಿ ಕುಳಿತರು. ಉಳಿದ ಅನೇಕ ಸಂಸಾರಗಳೊಡನೆ ಈ ಚಿಕ್ಕ ಸಂಸಾರವನ್ನೂ ಕಟ್ಟಿಕೊಂಡು ಗಾಡಿಯು ಪುಣೆಗೆ ನಡೆಯಿತು.

---

## ಪ್ರಕರಣ ೫೫.

## ಸ್ನೇಹದ ಚಿಗುರು

ಪುಣೆಗೆ ಬಂದಂದಿನಿಂದ ನರಹರಿಯ ಜೀವನದಲ್ಲಿ ಒಂದು ಶಾಂತಿಯು ದೊರಕಿತ್ತು. ಅದಕ್ಕೆ ಪಾಟಣಕರನ ಸಹವಾಸವೇ ಮುಖ್ಯಕಾರಣವೆನ್ನ ಬಹುದು ಮೊಗ್ಗಾವಿಯಲ್ಲಿ ಏಕಾಂಗಿಯಾಗಿ ಕುಳಿತು ಒಂದು ತಾಮಸೀವೃತ್ತಿಯ ಅಳುಕಿನಲ್ಲೂ ಅರಳಲಿರುವ ಪ್ರೀತಿಯೊಂದರ ಆಶೆ–ನಿರಾಶೆಗಳಲ್ಲಿಯೂ ಸಿಲುಕಿ ಗಾಸಿಗೊಂಡ ನರಹರಿಗೆ ಪಾಟಣಕರನ ಸಾನ್ನಿಧ್ಯವು ಅಮೃತಪ್ರಾಯ ವಾಗಿತ್ತು. ಇಬ್ಬರೂ ಗೆಳೆಯರು ಕೂಡಿ ಮುಂಜಾವಿನಲ್ಲಿ ಮನದಣಿ ತಿರುಗಾಡಿ ಬರುತ್ತಿದ್ದರು. ಆಮೇಲೆ ನರಹರಿಯ ಕೋಣೆಗೆ ಇಬ್ಬರೂ ಬಂದು ಪಾಟಣ ಕರನು ಸ್ಟೋವ್ ಹೊತ್ತಿಕ್ಕುತ್ತಿದ್ದನು. ನರಹರಿಯು ಚಹ ಮಾಡುತ್ತಿದ್ದ. ಚಹವಾದ ಮೇಲೆ ಇಬ್ಬರೂ ಗೆಳೆಯರು ತಮ್ಮ ಪ್ರೀತಿಯ ಆಂಗ್ಲ ಕವಿಗಳ ಕೃತಿಗಳನ್ನು ಓದುತ್ತಿದ್ದರು. ಇಲ್ಲವೇ ತಮ್ಮ ತಮ್ಮ ಕವಿತೆಗಳನ್ನೇ ಚರ್ಚಿಸು

ತ್ತಿದ್ದರು. ಊಟದ ಹೊತ್ತಾದಾಗ ವಿಷ್ಣು ವೋಡಕರ ಮನೆಗೆ ಹೋಗುತ್ತಿದ್ದ. ನರಹರಿಯು ತನ್ನ ನಂಬರುಮನೆಗೆ ಇಳಿಹೊತ್ತಾದ ಮೇಲೆ ಮತ್ತೆ ನರಹರಿಯ ಕೋಣೆಯಲ್ಲಿ ಗೆಳೆಯರಿಬ್ಬರ ಚಹವಾಗುತ್ತಿತ್ತು. ಅದನ್ನು ಮುಗಿಸಿಕೊಂಡು ಅವರು ತಿರುಗಾಡಲು ಹೋಗುತ್ತಿದ್ದರು. ಮಧ್ಯಾಹ್ನ ಹಾಗೂ ರಾತ್ರಿಯ ವೇಳೆಯನ್ನು ಅವರು ತಮತಮಗೆ ಬೇಕಾದುದನ್ನು ಓದುವುದರಲ್ಲಿಯೂ ಬರೆಯುವುದರಲ್ಲಿಯೂ ಕಳೆಯುತ್ತಿದ್ದರು.

ಒಮ್ಮೆ ನರಹರಿಯು ಪಾಟಣಕರನ ಜೊತೆಗೆ ಪ್ರೊಫೆಸರ ಪಟವರ್ಧನರ ಮನೆಗೆ ಹೋಗಿ ಬಂದನು. ಪ್ರೊಫೆಸರರು ಅವನು ಹೋದಾಗ ಪೇಪರು ತಪಾಸಣೆಗಾಗಿ ಮನೆಯಲ್ಲಿಯ ಒಂದು ಗುಹೆಯನ್ನೇ ಸೇರಿದ್ದರು ಆದರೆ ಮುನವಳ್ಳಿಯು ಬಂದಿರುವನೆಂಬ ಸುದ್ದಿಯು ಮುಟ್ಟಿದೊಡನೆ ಅವರು ಸಂತೋಷದಿಂದ ಅವನನ್ನು ಸ್ವಾಗತಿಸಿದರು. ಅವನ ಎಲ್ಲ ಕುಶಲವನ್ನೂ ಕೇಳಿಕೊಂಡು ಮುಂದಿನ ವರ್ಷದಿಂದ ನರಹರಿಯು ಅಭ್ಯಾಸವನ್ನು ಮುಂದುವರಿಸಲಿರುವುದನ್ನು ತಿಳಿದು ತಮ್ಮ ಸಮಾಧಾನವನ್ನು ವ್ಯಕ್ತಪಡಿಸಿದರು ಸೂಟಿಯಲ್ಲಿಯೂ ಸಹ ನರಹರಿಯು ಪುಣೆಯಲ್ಲಿಯೇ ಇರುವನೆಂದು ಕೇಳಿ ಅವರಿಗೆ ಆನಂದವಾಯಿತು ತನ್ನೆಡೆಗೆ ಬೇಕಾದಾಗ ಬರಬಹುದೆಂದೂ ಮೇಲಿಂದ ಮೇಲೆ ಬರಬೇಕೆಂದೂ ಅವರು ನರಹರಿಗೆ ಹೇಳಿದರು. ತನಗೆ ಬೇಕಾದ ಗ್ರಂಥಗಳನ್ನು ದೊರಕಿಸಲು ನರಹರಿಯು ಅವರ ಕಡೆಗೆ ಹೋಗುತ್ತಿದ್ದ; ಹೋದಾಗ ಕೆಲವು ಹೊತ್ತು ಕುಳಿತು ಅನೇಕ ವಿಷಯಗಳನ್ನು ಅವರೊಡನೆ ಚರ್ಚಿಸುತ್ತಿದ್ದನು. ಅನೇಕರೊಡನೆ ಮೌನವ್ರತವನ್ನಾಚರಿಸುವ ಪ್ರೊಫೆಸರರು ನರಹರಿಯೊಡನೆ ಮುಕ್ತಕಂಠರಾಗಿ ಮಾತನಾಡುತ್ತಿದ್ದರು. ಗುರು-ಶಿಷ್ಯರ ನಡುವೆ ಅನೊಂದು ವಿಧದ ಸ್ನೇಹವೇ ಬೆಳೆಯಿತು. ಪಟವರ್ಧನರಲ್ಲಿ ಸ್ವಾಮಿದಾಸರ ಆಳವಾಗಲೀ ದರ್ಶನವಾಗಲೀ ಇರಲಿಲ್ಲ. ಆದರೆ ಅವರ ಸಹೃದಯತೆಯೂ ರಸವಿಮರ್ಶೆಯೂ ಅನುಪಮವಾಗಿದ್ದವು.

ಒಂದು ದಿನ ಮುಂಜಾನೆ ತಿರುಗಾಡಿ ಬಂದು ಚಹ ಕುಡಿದ ಮೇಲೆ ಪಾಟಣಕರನೆಂದ: "ಮುನವಳ್ಳಿ, ಇವತ್ತು ನಿಮಗೊಂದು ಕವಿತೆಯನ್ನು ಓದಿತೋರಿಸಬೇಕೆಂದು ಮಾಡಿದ್ದೇನೆ."

"ಅಗತ್ಯವಾಗಿ. ಅದನ್ನೇ ನಾನು ನಿಮಗೆ ಕೇಳುವವನಿದ್ದೆ. ಇಲ್ಲಿಯು ವರೆಗೆ ನನ್ನ ಅನೇಕ ಕೃತಿಗಳನ್ನು ಓದಿ ತೋರಿಸಿದೆ. ನಿಮ್ಮ ಒಂದು ಕವಿತೆ ಯನ್ನಾದರೂ ಕೇಳಬೇಡವೆ?" ನರಹರಿಯೆಂದ.

"ಇಲ್ಲ, ಇತ್ತೀಚೆಗೆ ನಾನು ಬರೆದೇ ಇಲ್ಲ. ಅನೇಕ ತಿಂಗಳಲ್ಲಿ ಇದು ನನ್ನ ಮೊದಲನೆಯ ಕವಿತೆಯೆನ್ನಬಹುದು." ಎಂದು ಪಾಟಣಕರನು ತನ್ನ ಕವನ ವನ್ನು ಓದಿ ತೋರಿಸಹತ್ತಿದನು. ಮರಾಠಿಯಲ್ಲಿಯ ಆ ಕೃತಿಯನ್ನು ಈ ರೀತಿ ಕನ್ನಡಿಸಬಹುದು:

## ಅಶ್ವಾರೋಹಿ

ಲೋಕವೆಂದಿದು ಹಿಗ್ಗಿ
ದಾಸ್ಯವೃತ್ತಿಯು ಕುಗ್ಗಿ
ಸ್ವಾತಂತ್ರ್ಯವೀರನೊಲು ಮುಂದೆ ಬಹುದೊ
ಅಂದಿಗಶ್ವಾರೋಹಿ
ಪ್ರೀತಿ-ಜ್ಯೋತಿರ್ದೇಹಿ!
ಸಾಕ್ಷಾತ್ಕರಿಸಿ ಜನಕೆ ಶಾಂತಿಯಹುದೊ!

ಭಾವನಿರ್ಭರರಾಗಿ
ಸುಜ್ಞಾನಯುತರಾಗಿ
ಜನವಿರುವ ಸ್ವರ್ಗವನು ರಚಿಸಿ ಪ್ರೀತಿ
ಸ್ತ್ರೀಪುರುಷರನು ಸಮತೆ—
ಯಿಂದ ಕಾಯ್ವುದು; ಮಮತೆ—
ಯಿಂದಾಳಿ ಲೋಕವನು: ಇದೇ ಅದರ ರೀತಿ!

ಅಲ್ಲ ಪ್ರೀತಿಯು ಲಜ್ಜೆ,
ಅದಕೆ ಭೂಷಣ, ಬಿಜ್ಜೆ,
ಅರ್ಥವ್ಯಕ್ತಿಯೇ ಇಲ್ಲದಂಥ ಪ್ರೀತಿ
ಅಹುದು ಬರಿ ಬೆಂತರವು,—
ಕಾಮವು ನಿರಂತರವು!
ಪ್ರೀತಿಯಲ್ಲದು; ಹುದುಗಿದಂಥ ಭೀತಿ!

ಕವಿತೆಯನ್ನೋದಿ ತೋರಿಸಿ ತುಸು ಹೊತ್ತಾದ ಮೇಲೆ ನರಹರಿಯೆಂದ· "ಕವಿತೆಯು ಚೆನ್ನಾಗಿದೆ. ಆದರೆ ಇದನ್ನು ಯಾವ ಮಾತಿನ ವಿವರಣೆಗಾಗಿ ನೀವು ಬರೆದಿದ್ದೀರಿ?"

"ಒಟ್ಟಾರೆ ಪ್ರೀತಿಯ ವಿಷಯಕ್ಕೆ ನನಗೇನೆನಿಸುವುದೋ ಹೇಳಬೇಕೆಂದು!" ಎಂದು ಪಾಟಣಕರನು ಹೇಳಿದ.

"ಹಾಗಾದರೆ ಅದು ಇಲ್ಲಿ ಸಾಧಿಸಿಲ್ಲ ನಿಮ್ಮ ಅಂತರಂಗದಲ್ಲಿ ಸಿದ್ಧವಾಗಿದ್ದ ಕಾವ್ಯರಸವು ಒಂದು ವಿಶೇಷ ಸನ್ನಿವೇಶವನ್ನು ಕೂಡಿದ್ದು. ಅದಕ್ಕೆ ನೀವು ಪ್ರೀತಿಯ ವಿಷಯದಲ್ಲಿಯ ಕೆಲವು ಸಾಮಾನ್ಯ ಸತ್ಯಗಳನ್ನು ಬೆರಸಿದ್ದೀರಿ." ಎಂದು ನರಹರಿಯು ತುಸು ನಕ್ಕ.

"ಯಾವ ಸನ್ನಿವೇಶ?" ಎಂದು ಪಾಟಣಕರನು ಕೇಳಿದ ಅವನ ಗಲ್ಲವು ತುಸು ಕೆಂಪೇರಿತ್ತು.

"ಉಳಿದ ಯಾವ ವಿಮರ್ಶಕನೂ ಅದನ್ನು ಹೇಳುವುದು ಸಾಧ್ಯವಿಲ್ಲ. ನಿಮ್ಮ ಸ್ನೇಹಿತನಾಗಿ ನಿಮ್ಮೊಡನೆ ತಿರುಗಾಡಿದ್ದರಿಂದ ಅದು ನನಗೆ ಗೊತ್ತಿದೆ. ಪ್ರೀತಿಗೆ ನೀವು ಬೇರೆ ರೂಪಕವನ್ನು ಕಲ್ಪಿಸಬಹುದಿತ್ತಲ್ಲ? ಪ್ರೀತಿಯು ಅಶ್ವಾರೋಹಿಯೇ ಏಕೆ?" ಎಂದು ನರಹರಿಯು ವಿನೋದಪೂರ್ವಕವಾಗಿ ಕೇಳಿದ.

ಇದನ್ನು ಕೇಳುವುದರಲ್ಲಿಯೇ ಪಾಟಣಕರನು ತಾನು ಕುಳಿತ ಕುರ್ಚಿಯ ಮೇಲೆ ಸರಿದಾಡಹತ್ತಿದ್ದ. ಅಶ್ವಾರೋಹಿಯಾದ ಕುಮಾರಿ ಪಂಡಿತಳ ಚಿತ್ರವು ಅವನೆದುರಿಗೆ ಹಾಯ್ದುಹೋಯಿತು. ತನಗೇ ಅಸ್ಪಷ್ಟವಾಗಿದ್ದು ಈಗ ತನ್ನ ಕವಿತೆಯಲ್ಲಿ ಮೂಡಿದ್ದ ಚಿತ್ರವನ್ನು ನರಹರಿಯು ಎಷ್ಟು ಸೂಕ್ಷ್ಮವಾಗಿ ಕಂಡುಹಿಡಿದನಲ್ಲ! ಎಂದು ಅವನು ಬೆರಗುಗೊಂಡ. ಪಾಟಣಕರನು ಮೌನವಾಗಿ ನಕ್ಕ ನಗೆಯೇ ನರಹರಿಯ ಮಾತಿಗೆ ಅವನ ಸಮ್ಮತಿಯನ್ನು ಸೂಚಿಸಿತು.

"ಅಶ್ವಾರೋಹಿಗೆ ನೀವು ನಿಜವಾಗಿ ಇಷ್ಟು ಮನಸೋತಿದ್ದೀರಾ?" ಎಂದು ನರಹರಿಯು ಸಹೃದಯತೆಯಿಂದ ನಗುತ್ತ ಕೇಳಿದ

"ಹಾಗೇನೂ ಇಲ್ಲ. ಆ ಚಿತ್ರದ ನೆನಪು ನನ್ನ ಮನಸ್ಸಿನ ಮೇಲೆ ಆಳವಾಗಿ ಮೂಡಿರಬೇಕು. ಅಷ್ಟೆ." ಎಂಹು ಪಾಟಣಕರನು ಆ ವಿಷಯವನ್ನು

ಮುಗಿಸಿದ. ಬಳಿಕ ನರಹರಿಯನ್ನು ಕುರಿತು "ನೀವು ಇಷ್ಟೊಂದು ನಲ್ವಾಡು ಗಳನ್ನು ಬರೆದಿದ್ದೀರಿ. ಈ ಸ್ಫೂರ್ತಿಯ ಶಿಲೆಯಾವುದು ಹೇಳಬಲ್ಲಿರಾ?" ಎಂದು ಕೇಳಿದ

"ಅವಶ್ಯವಾಗಿ ಹೇಳುವೆನು. ನಿಮ್ಮಿಂದ ನಾನು ಏನನ್ನೂ ಗುಪ್ತವಾಗಿಡಲು ಬಯಸುವುದಿಲ್ಲ. ಆದರೆ ಅದಕ್ಕೆ ಸಮಯ ಬರಲಿ." ಎಂದು ನರಹರಿಯು ಉತ್ತರ ಕೊಟ್ಟ.

ಹೀಗೆಯೇ ಗೆಳೆಯರ ನಡುವೆ ಅನೇಕ ಸಂಭಾಷಣೆಗಳು ನಡೆಯುತ್ತಿದ್ದವು. ಇನ್ನೊಂದು ದಿನ ಪಾಟಣಕರನು ನರಹರಿಯನ್ನು ಕೇಳಿದ್ದ: "ಸ್ವಾಮಿ ದಾಸರೊಡನೆ ನೀವು ಖಾಸಗಾವಿಯಲ್ಲಿ ಕೆಲವು ದಿನಗಳನ್ನು ಕಳೆದಿರಿ. ಆತ್ಮದ ಅರಿವನ್ನು ಅವರಿಂದ ನೀವು ಪಡೆಯುವುದು ಸಾಧ್ಯವಾಯಿತು. ಈ ಅನಂತತೆಯ ದರ್ಶನವು ನನಗೇಕೆ ಬಾರದು?"

"ನಿಮಗಿಲ್ಲವೆಂದು ಹೇಳುವುದು ಹೇಗೆ? ನೀವು ಅದನ್ನು ಕಂಡಿರುವ ದಾರಿ ಬೇರೆ. ಇಷ್ಟೆ. ಸಮಾಜೋದ್ಧಾರ, ಜನತೆಯ ಪ್ರಗತಿ, ಸುಸಂಸ್ಕೃತ ಜೀವನದ ಪೂರ್ಣತೆ,—ಈ ತತ್ತ್ವಗಳು ನಿಮ್ಮಲ್ಲಿ ಅರಗಿಕೊಂಡಿವೆ. ಅವುಗಳ ತಾಳಕ್ಕೆ ನಾಳನಾಳದಲ್ಲಿಯೂ ನಿಮ್ಮ ರಕ್ತವು ಕುಣಿಯುತ್ತದೆ ಆ ಹಾದಿಯಲ್ಲಿ ಮುಂದುವರಿಯುವುದೇ ನಿಮಗೆ ಶ್ರೇಯಸ್ಸಲ್ಲವೆ?" ಎಂದ ನರಹರಿ.

"ಹಾಗಾದರೆ ಅನಂತತೆಯನ್ನು ನೀವು ಯಾವುದರಲ್ಲಿ ಕಂಡು ಹಿಡಿದಿದ್ದೀರಿ?" ಎಂದು ವಿಷ್ಣು ಪ್ರಶ್ನೆಮಾಡಿದ.

ನರಹರಿಯು ಉತ್ತರ ಕೊಟ್ಟ: "ವ್ಯಕ್ತಿತ್ವದ ವಿಕಾಸದಲ್ಲಿ; ಅಂತರಂಗದ ಬೆಳಕಿನ ಸಂಶೋಧನದಲ್ಲಿ; ಜೀವಜೀವಗಳ ಸಾಮರಸ್ಯದಲ್ಲಿ; ಇದನ್ನುಳಿದು ನನಗೆ ಜೀವನವಿಲ್ಲ ನನ್ನ ನಿಮ್ಮ ಸ್ನೇಹದ ಮೂಲವೆಲ್ಲಿ ಗೊತ್ತಿದೆಯೆ? ನನ್ನಲ್ಲಿದ್ದ ತತ್ವದರ್ಶನವನ್ನು ನೀವು ಪಡೆಯಬೇಕಾಗಿದೆ; ನಿಮ್ಮಲ್ಲಿದ್ದುದನ್ನು ನಾನು."

"ಅಂತರಂಗದ ಬೆಳಕಂದರೇನು? ಮೇಲಿಂದ ಮೇಲೆ ಈ ವಿಷಯವನ್ನು ನೀವು ಎತ್ತುತ್ತೀರಿ. ಎಲ್ಲಿದೆ ಈ ಬೆಳಕು?" ವಿಷ್ಣು ಕೇಳಿದ.

"ನಮ್ಮೊಳಗೇ ಇದೆ. ಹೊರಗಿನ ಆಕಾಶದಂತೆ ಒಳಗೊಂದಿದೆ. ಅದೇ ಚಿದಾಕಾಶ. ಈ ಸೃಷ್ಟಿಯಂತೆ ಒಳಗೆ ಇನ್ನೊಂದು ಸೃಷ್ಟಿಯಿದೆ. ಅದನ್ನು ಕಾಣಲು ಬೇಕು ಬೇರೆ ಕಣ್ಣು. ಈ ಸೃಷ್ಟಿಯಲ್ಲಿ ನಕ್ಷತ್ರಗಳಿದ್ದಂತೆ ಅಲ್ಲಿಯೂ ಇವೆ. ಇಲ್ಲಿ ವನೌಷಧಿ—ಪಶು—ಮಾನವ ಜಾತಿಗಳಿದ್ದಂತೆ ಅಲ್ಲಿಯೂ ಇವೆ. ಭೇದವಿಷ್ಟೆ: ಪೂರ್ಣತೆಯ ಹಾದಿಯಲ್ಲಿ ಅವು ಮುಂದುವರಿದಿವೆ. ಈ ನವಸೃಷ್ಟಿಯನ್ನು ಕಂಡಾಗ ನಮ್ಮ ದೃಷ್ಟಿಯೂ ವಿಕಾಸವಾದಂತಾಗಲಿಲ್ಲವೇ? ದರ್ಶನವು ಹಿಗ್ಗುವದೇ ನಮ್ಮ ಸಾಫಲ್ಯದ ಮಟ್ಟು. ಇದೂ ಒಂದು ಆ ಹಿಗ್ಗಿನ ಗುರುತು. ಆ ಸೃಷ್ಟಿಯಲ್ಲಿಯ ಒಂದು ನೋಟವನ್ನು ಕುರಿತು ಒಂದು ಕವನ ಇಲ್ಲಿದೆ ಕೇಳಿರಿ." ಹೀಗೆಂದು ನರಹರಿಯು ತಾನು ಬರೆದಿದ್ದ ಒಂದು ಗೀತವನ್ನು ಹಾಡಿ ತೋರಿಸಿ ಅದರ ಅರ್ಥ ಹೇಳಿದ.

ಮುತ್ತಿನ ಝಾಲರಿಯು:
ಕೇಳಿದು!
ಬೆಳಕಿನ ವಲ್ಲರಿಯು.

ತಾನೆಯೆ ಸುತ್ತುವದು:
ಬಂದಿದು
ಕತ್ತಲ ಮುತ್ತುವದು.

ದಿನದಿನ ತೂಗುವದು:
ಮನದಲಿ
ಮುಂದಕೆ ನೂಗುವದು.

ಒಂದು ಮುತ್ತಿನ ಎಳೆಯು:
ಅದಕಿದೆ
ರವಿಗಿಲ್ಲದ ಕಳೆಯು!

ನರಹರಿಯು ಇದನ್ನು ಹಾಡುವಾಗ ವಿಷ್ಣು ತನ್ಮಯನಾಗಿ ಕುಳಿತಿದ್ದ. ನರಹರಿಯ ದನಿಯಲ್ಲಿ ಅಂತಹ ಮೋಹಕತೆಯಿತ್ತು. ಗೀತವನ್ನು ಮುಗಿಸಿ

ನರಹರಿ ಹೇಳಿದ : "ಇದೊಂದು ತುಣುಕು ಮಾತ್ರ. ಇಂಥದೊಂದು ಬೆಳಕಿನ ಬಳ್ಳಿಯನ್ನು ನೋಡಿದ ಕ್ಷಣಕ್ಕೆ ನಮಗೇನು ಬಂತೆಂದು ನೀವು ಕೇಳಬಹುದು. ಅಂಥ ಸೌಂದರ್ಯವನ್ನು ನೋಡಿದಷ್ಟೇ ಬಂತು ಅಲ್ಲದೆ ಇಂಥ ಮಧುರ ಅನುಭೂತಿಯನ್ನು ಪಡೆಯುವ ಮನಸ್ಸು ಎಂದಾದರೂ ಕೆಡುಕಿನ ಉಪಾಸನೆ ಮಾಡೀತೆಂದು ನಿಮಗೆನಿಸುವದೊ? ತಾನು ಕಂಡ ಚೆಲುವನ್ನು ಅದು ಲೋಕದಲ್ಲಿ ನಡಲು ಹವಣಿಸುವದಿಲ್ಲವೊ? ಆ ಚೆಲುವನ್ನು ಕಾಣಲು ಬೇಕಾದ ಶಾಂತಿ–ವಿಶ್ರಾಂತಿಗಳನ್ನು ಲೋಕಕ್ಕೆ ದೊರಕಿಸಿ ಕೊಡಲು ಹವಣಿ ಸುವದಿಲ್ಲವೋ?"

ನರಹರಿಯನ್ನಲ್ಲದೆ ಮತ್ತಿನ್ನಾರ ಜೊತೆಯಲ್ಲಿದ್ದರೂ ತನಗೊಂದು ಹೊಸ ಬೆಳಕು ಕಾಣುತ್ತಿದೆಯೆಂದು ವಿಷ್ಣುನಿಗೆನಿಸುತ್ತಿರಲಿಲ್ಲ ಆದರೆ ನರಹರಿಯ ಸಹವಾಸದಲ್ಲಿ ಅವನಿಗೆ ಕ್ಷಣಕ್ಷಣಕ್ಕೆ ನವೀನತೆಯು ಕಾಣುತ್ತಿತ್ತು. ನರ ಹರಿಯೂ ತನಗೆ ಪೂರಕವಾದ ವ್ಯಕ್ತಿತ್ವವನ್ನು ವಿಷ್ಣುವಿನಲ್ಲಿ ಕಾಣುತ್ತಿದ್ದ. ನರಹರಿಯ ಮಾತು ಮುಗಿದಾಗ ವಿಷ್ಣು ಹೇಳಿದ: "ಸೂಟಿಯಲ್ಲಿ ನೀವು ಇಲ್ಲಿರುವದು ನನಗೊಂದು ಹಬ್ಬ. ನೀವಿಲ್ಲದೆ ನನ್ನ ಒಂದು ವರ್ಷ ಗಾಳಿಗುಂಟ ಹೋಯಿತು."

"ನಿಮ್ಮಣ್ಣನಿಂದ ಪತ್ರ ಬಂದಿತ್ತಲ್ಲ,–ಅಹಮ್ಮದನಗರಕ್ಕೆ ಬಾ ಎಂದು?" ಎಂದು ನರಹರಿ ಕೇಳಿದ.

ವಿಷ್ಣುವಿಗೆ ಸಮೀಪದ ಆಪ್ತರೆಂದರೆ ಇಬ್ಬರೇ ಇಬ್ಬರು : ಅವನ ಅಕ್ಕ ರಂಗೂತಾಯಿ, ಮೋಡಕರ ಹೆಂಡತಿ; ಹಾಗು ಅವನ ಅಣ್ಣ,—ಭಾವೂ ಸಾಹೇಬ ಭಾವೂಸಾಹೇಬನು ಮೇಲುಗಾಡಿಯ ಅಂಚೆಯ ಡಬ್ಬಿಯಲ್ಲಿ ಸಾರ್ಟರ್ ಅಂದರೆ ಪತ್ರಗಳ ವಿಂಗಡಿಗನಾಗಿದ್ದ. ಅಂಥ—ಇಂಥ ತಮ್ಮನಾ ಗಿದ್ದರೆ ಅವನು ವಿಷ್ಣುನನ್ನು ಹಚ್ಚಿಕೊಳ್ಳುತ್ತಿದ್ದಿಲ್ಲ. ಆದರೆ ವಿಷ್ಣು ಸ್ಕಾಲರ್, ಐ ಸಿ. ಎಸ್. ಗೆ ಹೋಗುವ ಯೋಗ್ಯತೆಯುಳ್ಳವ. ಆದಕಾರಣ ತುಸು ಖರ್ಚಾದರೂ ಅಡ್ಡಿಯಿಲ್ಲವೆಂದು ಭಾವೂಸಾಹೇಬನು ತಮ್ಮನಿಗೆ ಎಂಟು ದಿನವಾದರೂ ಸೂಟಿಯಲ್ಲಿ ಬಂದು ಅಹಮ್ಮದನಗರದಲ್ಲಿದ್ದು ಹೋಗಲು ಬರೆದಿದ್ದ. ಗಾಡಿಯಿಂದ ದೂರವಾಗಿದ್ದರೂ ಅಹಮ್ಮದನಗರದಲ್ಲಿಯೇ ಮನೆ ಮಾಡಲು ಭಾವೂಸಾಹೇಬನಿಗೊಂದು ಕಾರಣವಿತ್ತು. ಅವನ ಅತ್ತೆಯ

ಮನೆಯವರು ಅಹಮ್ಮದನಗರದವರು. ಮದುವೆಯಾದ ಒಂದೆರಡು ವರ್ಷಗಳ ಮೇಲೆ ಭಾವೂಸಾಹೇಬನಿಗೆ ಒಂದು ಗಂಡುಮಗು ಹುಟ್ಟಿತ್ತು. ಕೆಲವು ತಿಂಗಳಲ್ಲಿಯೇ ಆ ಮಗು ತೀರಿಹೋಯಿತು. ಅಂದಿನಿಂದ ಅವನ ಹೆಂಡತಿ 'ಹಿಸ್ಟೀರಿಯಾ' ಜೇನೆಯಿಂದ ಬಳಲುತ್ತಿದ್ದಳು. ಯಾವಾಗ ಎಚ್ಚರ ತಪ್ಪುವದೆಂಬುದರ ನಿಯಮವಿದ್ದಿಲ್ಲ ಕಾರಣ ಹಗಲೂ ರಾತ್ರಿ ಯಾರಾದರೂ ಮನೆಯಲ್ಲಿ ಇರಬೇಕಾಗುತ್ತಿತ್ತು. ಭಾವೂಸಾಹೇಬನಾದರೋ ಎಮ್. ಎಸ್. ಎಮ್. ಇಲ್ಲವೆ ಜಿ. ಐ. ಪಿ ಯ ಸೆರೆಯಾಳಾಗಿದ್ದ. ಆದ ಕಾರಣ ಬೀಗರ ಮನೆಯ ಹತ್ತಿರದಲ್ಲಿಯೇ ಇರುವದು ವಾಸಿಯೆಂದು ಅವನು ಅಹಮ್ಮದನಗರದಲ್ಲಿದ್ದ ಮನೆಯನ್ನು ಕಿತ್ತಿದ್ದಿಲ್ಲ. ಮುಂದೆ ವರ್ಷಕ್ಕೊಂದು ಕೂಸು ಹುಟ್ಟುವದು ನಡೆದೇ ಇತ್ತು ಆದರೆ ಒಂದೂ ಬದುಕಿದ್ದಿಲ್ಲ.

"ಅಣ್ಣನ ಪತ್ರ ಉಪಚಾರದ ಪತ್ರ; ಅವನಿಗೆ ಬರೆದಿದ್ದೇನೆ,—ಬರುವದು ಸಾಧ್ಯವಿಲ್ಲವೆಂದು." ಎಂದು ವಿಷ್ಣು ಹೇಳಿದ

"ನಿಮ್ಮ ಬಗ್ಗೆ ಮೋಡಕರ ವೃತ್ತಿ ಬದಲಾದಂತೆ ಕಾಣುತ್ತದೆ. ರಂಗೂತಾಯಿಯವರಷ್ಟೇ ಅವರೂ ನಿಮ್ಮನ್ನು ಹಚ್ಚಿಕೊಂಡಿದ್ದಾರೆ." ನರಹರಿ ಕೇಳಿದ.

"ಹೌದು. ಕಾಲೇಜಿನಲ್ಲಿಯ ನನ್ನ ಪ್ರಗತಿಯನ್ನು ನೋಡಿ ಅವರಿಗೆ ಅಭಿಮಾನ ಹುಟ್ಟಿದೆ ಅವರಿಗೆ ಈಗ ಮಕ್ಕಳಾಗುವ ಆಸೆಯಿಲ್ಲ ನನ್ನನ್ನೇ ಮಗನಂತೆ ನಡೆಯಿಸಿಕೊಂಡು ವಿಲಾಯತಿಗೆ ಕಳಿಸುವ ವಿಚಾರದಲ್ಲಿದ್ದಾರೆ." ವಿಷ್ಣು ಉತ್ತರಕೊಟ್ಟ.

"ಏನು? ತಮ್ಮ ದುಡ್ಡು ಖರ್ಚು ಮಾಡಿ?" ನರಹರಿಯು ಅವಾಕ್ಕಾಗಿ ಕೇಳಿದ.

"ಹೌದು. ಅವಶ್ಯ ಬಿದ್ದರೆ,—ಫಂಡು ಸಿಗದೆ ಹೋದರೆ" ಎಂದು ವಿಷ್ಣು ಮುಗುಳುನಗೆ ನಕ್ಕ.

ಮೋಡಕರೂ ರಂಗೂತಾಯಿಯವರೂ ಮಕ್ಕಳಾಗುವ ಆಸೆಯನ್ನು ಈಗ ಸಂಪೂರ್ಣವಾಗಿ ಬಿಟ್ಟಿದ್ದರು ವಿಷ್ಣು ಬಂದು ಮನೆಯಲ್ಲಿ ಇರಹತ್ತಿದಂದಿನಿಂದ ಅವರ ಮನೆಯಲ್ಲಿ ಹೊಸತೊಂದು ಉತ್ಸಾಹವು ಅಂಕುರಿಸಿತ್ತು. ವಿಷ್ಣುವಿನ ಮೇಲೆ ಇಬ್ಬರ ಪ್ರೀತಿಯೂ ಬೆಳೆದು ಬಂದಿತ್ತು. ಅವಶ್ಯಬಿದ್ದರೆ

ತಾವು ಕೂಡಿಟ್ಟ ಹಣವನ್ನೆಲ್ಲ ವೆಚ್ಚ ಮಾಡಿ ವಿಷ್ಣೂನನ್ನು ವಿಲಾಯತಿಗೆ ಕಳಿಸುವ ವಿಚಾರದಲ್ಲಿ ಮೋಡಕರಿದ್ದರು. ಆ ಹಣ ಕೈಬಿಡುವದು ನಿಜ. ಆದರೆ ಅದರಿಂದ ಮೋಡಕರಿಗೆ 'ಕಲೆಕ್ಟರ'ನೊಬ್ಬನ ಮಾನಸಪಿತನಾಗಿ ಮೆರೆಯುವ ಸುಸಂಧಿಯು ದೊರೆಯುವದಲ್ಲ! ಈ ವಿಷಯದಲ್ಲಿ ರಂಗೂತಾಯಿ ಯವರು ಕಟೆದು ಕಟೆದು ಅವರನ್ನು ಮೂರ್ತಿಯನ್ನಾಗಿ ಮಾಡಿದ್ದರು. ಮೇಲಾಗಿ—ಮೋಡಕರ ಪಶ್ಚಾತ್—ಆ ಹಣದ ಉಪಯೋಗವೇನು?

ವೇದಾಂತದಿಂದ ವಿಷ್ಣೂನ ಐ. ಸಿ. ಎಸ್. ನ ವರೆಗೆ ಅನೇಕ ವಿಷಯ ಗಳನ್ನು ಚರ್ಚಿಸುತ್ತ ನರಹರಿಯ ವೇಳೆಯು ನಿರಾಯಾಸವಾಗಿ ಕಳೆಯು ತ್ತಿತ್ತು. ಆದರೆ ಆಗೀಗ ಅವನಿಗೆ ಮೊಗ್ಗಾವಿಯ ನೆನಪಾಗದೆ ಇರಲಿಲ್ಲ. ಈಗ ತನ್ನ ಮನೆಯಲ್ಲಿ ಏನು ನಡೆಯುತ್ತಿರಬಹುದು? ತಾನು ನಡುಮನೆ ಯಲ್ಲಿ ತೂಗು ಹಾಕಿದ ಅಕ್ಕನ ಫೋಟೊ ಇನ್ನೂ ಅಲ್ಲಿಯೇ ಇದೆಯೆ? ಕಿಟ್ಟುವನ್ನು ಈಗ ನೋಡಿಕೊಳ್ಳುವರಾರು? ಮನೆಯಲ್ಲಿ ಸುಬ್ಬಣಾ ಚಾರ್ಯರ ಪ್ರಸ್ಥ ಬೆಳೆದಿದೆಯೆ? ತಾನು ಮನೆಯಲ್ಲಿದ್ದಾಗಲೇ ಅವರು ಬಂದು ಬಾಗಿಲಿಗೆ ಹಾಯುತ್ತಿದ್ದರು. ಈಗ ಕೇಳುವದೇನು? ಅವರಿಗೆ ಸಾವಿರಾಗಿರ ಬಹುದಲ್ಲ ಆ ತಾಯಿ,—ಆ ಮಾತಾಯಿ!

ಹೀಗೆ ಜಾಗೃತವಾದ ನರಹರಿಯ ಕಲ್ಪನೆಯು ಜಾನಕಿಬಾಯರ ಮನೆ ಯೆದುರು ಹಾಯ್ದಾಗ,—ಅಲ್ಲಿ ಬಂದು ನಿಲ್ಲುತ್ತಿದ್ದಳು ಕುಸುಮಾ! ಸ್ವಾಮಿ ದಾಸರ ಸಾನ್ನಿಧ್ಯದಲ್ಲಿ ತುಸು ಮರೆತಿದ್ದ ಅವನ ಪ್ರೀತಿಯ ಆಧಿಕ್ಯವು ಈಗ ಮತ್ತೆ ಕೊನರಿತ್ತು. ತನ್ನ ಮೇಲಿನ ಅಪವಾದವನ್ನು ಕುಸುಮಾ ನಂಬಿರ ಬಹುದೇನು? ಛೇ! ಛೇ! ದೇಸಾಯರು ಸಿಜಸ್ಥಿತಿಯನ್ನು ಮನಗಂಡಿದ್ದ ರೆಂದು ಗಣಪತರಾಯರು ಹೇಳಿದ್ದರು. ಅವರು ತಮ್ಮ ಅಭಿಪ್ರಾಯವನ್ನು ಕುಸುಮಾನಿಗೂ ತಿಳಿಸಿರಬಹುದಲ್ಲ? ದೇಸಾಯರೇ ಒಂದು ರೀತಿಯಿಂದ ರಾಯರನ್ನು ಖಾಸಗಾವಿಗೆ ಕಳಿಸಿದ್ದರು. ನರಹರಿಯ ಮೇಲೆ ಅಷ್ಟು ಪ್ರೀತಿ ಅವರಿಗೆ! ಆದರೆ..........ಜಾನಕಿಬಾಯರ ಕೋಪಕ್ಕೆ ಬೆದರಿ, ಹುರುಳಿಲ್ಲದ ಅಪಾದನೆಯಾಗಿದ್ದರೂ ಜನಾಪವಾದಕ್ಕೆ ಬೆದರಿ ದೇಸಾಯರು ಇನ್ನೊಬ್ಬ ರೊಡನೆ ಕುಸುಮಾನ ಮದುವೆ ಮಾಡಲು ಸಿದ್ಧರಾಗಿದ್ದರೆ? ಇದು ಲಗ್ನ ಮಾಸ ಬೇರೆ. ಮನೆಯಲ್ಲಿ ಕೇಶವನ ಮದುವೆಯಾಗುವದಿತ್ತು. ಒಂದು ವೇಳೆ

ಯಲ್ಲಿ ಎರಡೂ ಅಕ್ಕೀಕಾಳು ಬಿದ್ದು ಹೋಗಿದ್ದರೆ........? ಈಗ ಮದುವೆಯ ತಯಾರಿಯು ನಡೆದಿರಬಹುದೆಂದು ನರಹರಿಗೆ ಬಲವತ್ತರವಾಗಿ ಎನಿಸಿತು. ಅದನ್ನು ತಡೆದುಬಿಡಲು ಗಾಡಿ ಹತ್ತಿ ಮೊಗ್ಗಾವಿಗೆ ಹೋಗಿಬಿಡಬೇಕೆಂದು ಕೋಣೆಯಲ್ಲಿ ನರಹರಿಯು ಗಡಬಡಿಸಿ ಎದ್ದು ನಿಂತ. ಆದರೆ ಮರುಕ್ಷಣ ತನ್ನ ಹುಚ್ಚುತನಕ್ಕೆ ತಾನೇ ನಕ್ಕು ತಿರುಗಿ ತನ್ನ ಜಾಗದಲ್ಲಿ ಕುಳಿತ.

ಶೀನೂ ಮೊಗ್ಗಾವಿಗೆ ಹೋದಂದಿನಿಂದ ಅವನಿಂದ ಪತ್ರವೇ ಬಂದಿರಲಿಲ್ಲ. ಕಾರಣವೇನಿರಬಹುದು? ಮನೆಗೆ ಹೋದ ಉತ್ಸವದಲ್ಲಿ ಶೀನೂ ಬರೆಯಲು ವಿಲಂಬವಾಗಿರಬಹುದೆಂಬ ಮಾತು ನರಹರಿಗೆ ಹೊಳೆಯಲಿಲ್ಲ. ಹೊಳೆದರೂ ಅದನ್ನು ಅವನು ಗಣನೆಗೆ ತರಲಿಲ್ಲ. ಕಲಿತ ವರನೆಂದು ದೇಸಾಯರು ಶೀನೂನನ್ನು...............ಆರಿಸಿದ್ದರೆ? ಕುಸುಮಾ ಅದಕ್ಕೆ ಒಪ್ಪಿದರೆ? ಶೀನೂ ಪುಣೆಯನ್ನು ಬಿಡುವಾಗಲೇ ತಾನು ಹೇಳಬೇಕಿತ್ತು,—ಕುಸುಮಾ ತನ್ನವಳೆಂದು. ಇದು ತನ್ನ ಮೂರ್ಖತನವೆಂದು ನರಹರಿಯು ತನ್ನನ್ನೇ ಹಳಿದುಕೊಂಡ.

ಒಂದು ದಿನ ಮಧ್ಯಾಹ್ನ ನರಹರಿಯು ಊಟ ಮಾಡಿ ಕೋಣೆಯಲ್ಲಿ ಅಡ್ಡಾಗಿದ್ದ ಹಾಗೆಯೇ ಅವನಿಗೆ ಜಂಪು ಹತ್ತಿತ್ತು. ತಾಸೆರಡು ತಾಸಿನ ವರೆಗೆ ಆ ಜಂಪು ಗಾಢನಿದ್ರೆಯಾಗಿ ಪರಿಣಮಿಸಿತು. ಆ ನಿದ್ರೆಯಲ್ಲಿ ನರಹರಿಯು ಕುಸುಮಾನನ್ನು ಕಂಡ. ಕುಸುಮಾ ಒಂದು ನದಿಯ ದಂಡೆಯ ಮೇಲೆ ನಿಂತಿದ್ದಳು. ನರಹರಿಯು ಆ ಹೊಳೆಯಲ್ಲಿ ಈಸುತ್ತಿದ್ದ. ಅವನ ಈಸಿನ ನಿರಾಯಾಸತೆಯನ್ನು ಕುಸುಮಾ ಮೆಚ್ಚಿ ನೋಡುತ್ತಿದ್ದಳು. ಈಸಿ ಈಸಿ ನರಹರಿಯು ದಣಿದ. ಕುಸುಮಾನ ಮುದ್ದು ಮೊಗವನ್ನು ನಿರಿಯಿಟ್ಟು ಮಾರುಗೈಯ್ಯಿಂದೀಸಿ ದಂಡೆಯನ್ನು ಮುಟ್ಟಲು, ನರಹರಿಯು ಹವಣಿಸುತ್ತಿದ್ದ. ಆ ಸಮಯಕ್ಕೆ ಸರಿಯಾಗಿ ಶೀನೂ ಅಲ್ಲಿಗೆ ಬಂದ. ನರಹರಿಯು ಹೊಳೆಯಲ್ಲಿ ಈಸಿ ಬರುತ್ತಿರುವದು ಅವನಿಗೆ ಗೊತ್ತಿರಲಿಲ್ಲ. ಕುಸುಮಾನನ್ನು ಅವನು ನಗೆಮೊಗದಿಂದ ಮಾತನಾಡಿಸಹತ್ತಿದ. ಇದನ್ನು ಕಂಡು ನರಹರಿಯ ಎದೆ ಯಲ್ಲಿ ಸಂಕಟವಾಯಿತು. ಅವನು ತೀವ್ರವಾಗಿ ಈಸಿ ದಂಡೆಯನ್ನು ಮುಟ್ಟ ಬೇಕೆಂದ. ಆದರೆ ಕೈ ಸಾಗದಾಯಿತು. ಗಟ್ಟಿಯಾಗಿ ಕೂಗಬೇಕೆಂದ. ಆದರೆ ದನಿ ಏಳದೆ ಮುಳುಗಹತ್ತಿದ. ನೀರನ್ನು ಗುಟಕರಿಸುತ್ತ ಸಾಧ್ಯವಿದ್ದಷ್ಟು

ವುಟ್ಟಿಗೆ ನರಹರಿಯು "ಅಲ್ಲ............ಇದಲ್ಲ........" ಎಂದು ಒದರಿಕೊಂಡ. ಆಗ ಅವನಿಗೆ ಎಚ್ಚರವಾಯಿತು.

ನರಹರಿಗೆ ಎಚ್ಚರವಾದಾಗ ಯಾರೋ ಅವನ ಕೋಣೆಯ ಬಾಗಿಲನ್ನು ತಟ್ಟುತ್ತಿದ್ದರು. ಪಾಟಣಕರನಿರಬೇಕೆಂದು ನರಹರಿಯು ಕಣ್ಣೊರಸಿಕೊಂಡು ಶರ್ಟ್ ಹಾಕಿಕೊಂಡು ಬಾಗಿಲು ತೆರೆದ. ಅಲ್ಲಿ ದೇಸಾಯರೂ ಕುಸುಮಾನೂ ಅವನ ಕಣ್ಣಿಗೆ ಬಿದ್ದರು!

---

ಪ್ರಕರಣ ೫೬.

## ಲಯವಲ್ಲ, ನಿಲಯ.

ಕುಸುಮಾ-ದೇಸಾಯರನ್ನು ಕಂಡು ನರಹರಿಯು ತನ್ನ ಕಣ್ಣನ್ನು ತಾನೇ ನಂಬದಾದ ಇದೇನು ಸತ್ಯವೋ ಸ್ವಪ್ನಸೃಷ್ಟಿಯೋ ಅವನಿಗೆ ತಿಳಿಯದಾಯಿತು. ಕಣ್ಣೊರಸಿಕೊಂಡು ಅವರನ್ನು ಮತ್ತೊಮ್ಮೆ ಕಣ್ತುಂಬ ನೋಡಿದ. "ಜಂಪು ಹತ್ತಿತ್ತೆಂದು ಕಾಣುತ್ತದೆ?" ಎಂದು ದೇಸಾಯರು ಮುದಸ್ಮಿತರಾಗಿ ಕೇಳಿದರು "ಇಲ್ಲ....! ಹೌದು....!" ಎಂದು ತಡವರಿಸುತ್ತ ನರಹರಿಯು ಕೋಣೆಯಲ್ಲಿಯ ಕುರ್ಚಿಗಳನ್ನು ಸರಿಪಡಿಸಿದ. ಏನು ಮಾಡಬೇಕು, ಏನು ಬಿಡಬೇಕೆಂಬುದು ತಿಳಿಯದಷ್ಟು ಅವನು ರೋಮಾಂಚಿತನಾಗಿದ್ದ. ಕುಸುಮಾ-ದೇಸಾಯರು ಒಂದು ಕುರ್ಚಿಗಳ ಮೇಲೆ ಕುಳಿತರು. ಕಾಟಿನ ಮೇಲಿನ ಹಾಸಿಗೆಯನ್ನು ಸರಿಪಡಿಸಿ ನರಹರಿಯು ಅದರ ಮೇಲೆ ತಾನು ಕುಳಿತುಕೊಂಡ.

ದೇಸಾಯರು ಮೊಗ್ಗಾವಿಯನ್ನು ಬಿಡುವುದಕ್ಕಿಂತ ಪೂರ್ವದಲ್ಲಿ ಗಣಪತರಾಯರನ್ನು ಕಂಡಿದ್ದರು ಪುಣೆಗೆ ಒಂದು ಮುಟ್ಟಿದ ಮೇಲೆ ನರಹರಿಯು ಅವರಿಗೊಂದು ಕುಶಲವಾರ್ತೆಯ ಪತ್ರವೊಂದನ್ನು ಒರೆದಿದ್ದ. ಅದರಲ್ಲಿ ದೇಸಾಯರಿಗೂ ವಂದನೆಗಳನ್ನು ತಿಳಿಸಿದ್ದ. ಅವನು ಕೊಟ್ಟ ವಿಳಾಸಕ್ಕೆ ರಾಯರು ನರಹರಿಗೆ ಸೂಟಿಯಲ್ಲಿ ಬೇಕಾಗುವಷ್ಟು ಹಣವನ್ನು

ಕಳಿಸಿದ್ದರು. ದೇಸಾಯರು ಅವರಿಂದ "ನರಹರಿಯ ವಿಳಾಸವನ್ನು ಪಡೆದು ಕೊಂಡದ್ದಲ್ಲದೆ ವೋಡಕರಿಗೆಂದು ಗಣಪತರಾಯ ತಾವಾಗಿಯೇ ಬರೆದು ಕೊಟ್ಟ ಪರಿಚಯ-ಪತ್ರವನ್ನು ಜೇಬಿನಲ್ಲಿಟ್ಟುಕೊಂಡರು. ತಾವು ಬರುವ ವಿಷಯವನ್ನು ನರಹರಿಗೆ ತಿಳಿಸಬೇಕೆಂದು ದೇಸಾಯರ ಮನಸ್ಸಿನಲ್ಲಿ ಬಂದಿತ್ತು. ಆದರೆ ಅನಿರೀಕ್ಷಿತರಾಗಿಯೇ ಅವನನ್ನು ಕಾಣುವುದು ಮೇಲೆಂದು ಅವರು ನಿಶ್ಚಯಿಸಿದರು. ದೇಸಾಯರ ನಿಕಟ ಪರಿಚಯದವರೊಬ್ಬರು ಮುಲ್ಕಿ ಖಾತೆಯಲ್ಲಿ ಪುಣೆಯಲ್ಲಿ ಕೆಲಸ ಮಾಡುತ್ತಿದ್ದರು. ಕುಸುಮಾ ಹಾಗೂ ರಂಗಾಸಾನಿಯೊಡನೆ ದೇಸಾಯರು ತಾತ್ಪೂರ್ತಿಕವಾಗಿ ಅವರ ಮನೆಯಲ್ಲಿ ಇಳಿದಿದ್ದರು. ಪುಣೆಗೆ ಬಂದ ಮರುದಿನ-ಈಗ-ಅವರು ಕುಸುಮಾನೊಡನೆ ನರಹರಿಯ ಕೋಣೆಯನ್ನು ಹುಡುಕಿಕೊಂಡು ಬಂದಿದ್ದರು.

"ಯಾವಾಗ ಬಂದಿದ್ದು?" ಎಂದು ನರಹರಿಯು ಉತ್ಸುಕನಾಗಿ ಕೇಳಿದ.

"ನಿನ್ನೆ ರಾತ್ರಿ ಬಂದೆವು." ಎಂದು ದೇಸಾಯರು ಹೇಳಿದರು.

ಯಾಕೆ, ಏನು, ಎಂಬ ಪ್ರಶ್ನೆಗಳನ್ನು ಕೇಳುವ ಅಗತ್ಯವೇ ನರಹರಿಗೆ ಎನಿಸಲಿಲ್ಲ. ಮನೆಗೆ ನಡೆದು ಬಂದ ದೇವರನ್ನು—ದೇವಿಯನ್ನು—ಯಾಕೆ, ಏನು ಎಂದು ಪ್ರಶ್ನಿಸಬಹುದೆ?

"ಸ್ವಲ್ಪ ಚಹ ಮಾಡುತ್ತೇನೆ." ಎಂದು ಎದ್ದು ನರಹರಿಯು ಸ್ಟೋವ್ ಹೊತ್ತಿಸಲು ಪ್ರಾರಂಭಿಸಿದ

"ನೀನೇಕೆ ಮಾಡುವುದು, ನರಹರಿ! ಕುಸುಮಾ ಇದ್ದಾಳಲ್ಲ. ಕುಸುಮಾ, ಚಹ ಮಾಡು, ನೋಡೋಣ." ಎಂದು ದೇಸಾಯರು ಹೇಳಿದರು.

ಕುಸುಮಾ ತುಸು ನಾಚಿದಳು ಆದರೆ ಒಡನೆ ಎದ್ದು ಹೋಗಿ ಸ್ಟೋವಿನೆದುರಿಗೆ ನಿಂತಳು "ಸ್ಪಿರಿಟ್ ಇಲ್ಲಿದೆ." ಎಂದು ನರಹರಿಯು ಬಾಟ್ಲಿ ತಂದು ಕೊಟ್ಟ. ಒಂದು ಮಿನುಗುವ ಮಂದಹಾಸವನ್ನು ಮೊಗದಲ್ಲಿ ತಳೆದು ಸ್ಟೋವಿನ ಬಟ್ಟಲದಲ್ಲಿ ಕುಸುಮಾ ತುಸು ಸ್ಪಿರಿಟ್ಟು ಸುರುವಿದಳು. ನರಹರಿಯು ಕಡ್ಡಿಪೆಟ್ಟಿಗೆಯನ್ನು ತಂದು ಕೊಟ್ಟ. ಕುಸುಮಾ ಒಂದು

ಕಡ್ಡಿ ಕೊರೆದು ಸ್ಟೋ ಹೊತ್ತಿಸಿಟಳು. ಇದನ್ನೆಲ್ಲ ನೋಡಿ ಒಳಗೊಳಗೇ ಹಿಗ್ಗಿ ನಗುತ್ತಿದ್ದ ದೇಸಾಯರು "ಏ! ನರಹರಿ! ಅರ್ಧ ಕೆಲಸ ಇನ್ನೂ ನೀನೇ ವಹಿಸಿಕೊಂಡಿದ್ದೆಯಲ್ಲ? ಇಲ್ಲಿ ಕೊಡು. ಕುಸುಮಾ ಎಲ್ಲ ಮಾಡು ತ್ತಾಳೆ. ಇನ್ನುಮೇಲೆ ಆಕೆ ತಾನೇ ಅಡಿಗೆಮಾಡಿಕೊಂಡು ನನಗೆ ಬಡಿಸಿ ಊಟಮಾಡಿ ಸಾಲೆಗೆ ಹೋಗಬೇಕು!" ಎಂದರು ದೇಸಾಯರು.

"ಅಂದರೆ?" ಎಂದು ನರಹರಿ ಕೇಳಿದ. ಇದೇನು ಕಟ್ಟುಕಥೆಯೋ ಸ್ವರ್ಣಸ್ವಪ್ನವೋ ಅವನಿಗೆ ತಿಳಿಯದಾಯಿತು. ಕುಸುಮಾನನ್ನು ದಿಟ್ಟಿಸಿ ನೋಡಿದ. ಆಕೆಯು ಮುಗುಳುನಗೆಯೊಂದನ್ನು ನಕ್ಕು ಕಡೆಗಣ್ಣಿನಿಂದ ಅವನನ್ನು ನೋಡಿದಳು. ಇದಕ್ಕಿಂತ ಹೆಚ್ಚಿನ ಸಹಾಯವು ಈ ವಿಷಯದಲ್ಲಿ ನರಹರಿಗೆ ಅವಳಿಂದ ದೊರೆಯಲಿಲ್ಲ. ಮುಂದೆ ದೇಸಾಯರೇ ಆ ಒಗಟವನ್ನು ಬಿಡಿಸಿದರು "ಇನ್ನುಮೇಲೆ ನಾವು ಪುಣೆಯಲ್ಲಿಯೇ ಇರಲು ಬಂದಿದ್ದೇವೆ. ರಂಗೂ ಸಹ ಬಂದಿದ್ದಾಳೆ. ಕುಸುಮಾನಿಗೆ ಮುಂದೆ ಕಲಿಸಬೇಕೆಂದು ಈ ಏರ್ಪಾಟಾಗಿದೆ ನಮಗೊಂದು ಮನೆ ನೋಡಬೇಕು ನೀನು"

ನರಹರಿಗೆ ಮಿತಿಮೀರಿ ಹರ್ಷವಾಯಿತು. ತಾನು ಒಂದು ಕೋಣೆಯ ಲ್ಲಿಲ್ಲ, ಕಲ್ಪವೃಕ್ಷದ ಕೆಳಗಿದ್ದೇನೆಂದು ತಿಳಿದೋ ಏನೋ ಅವನು ಜಂತಿಯ ಕಡೆ ನೋಡಿದ. ತನ್ನ ಮೇಲಿದ್ದ ಅಪವಾದ, ಅದರ ಬಗ್ಗೆ ದೇಸಾಯರ ಅಭಿಪ್ರಾಯ, ಹಾಗೂ ಕುಸುಮಾನ ಮನೋಭಾವ,—ಈ ವಿಷಯಗಳೆಲ್ಲ ಸಮುದ್ರದ ತಳವನ್ನು ಕಂಡವು ಪ್ರೇಮದ ಘೋರ ಸಾಗರದಲ್ಲಿ ಆನಂದದ ತರಂಗಗಳ ಮೇಲೆ ನರಹರಿಯು ಈಸಾಡಹತ್ತಿದ.

ಒಂದು ನಿಮಿಷವೇ ಕನಸಿನಲ್ಲಿ ಬಂದ ಶೀನೂ ನೆನಪಾದ. ಪಾಪ! ಎಂಥ ಗೆಳೆಯನಿಗೆ ಯಾವ ದ್ರೋಹ ಬಗೆದೆನಲ್ಲ, ಎಂದು ನರಹರಿಗೆನಿಸಿತು. ದೇಸಾಯರು ಹೇಳಿದ ಕೇಶವನ ಮದುವೆಯ ವೃತ್ತಾಂತವನ್ನು ನರಹರಿಯು ಆ ತೆರೆಗಳ ಮೇಲೆ ತಸುತ್ತಿರುವಾಗಲೇ ಕೇಳಿದ. ಇಷ್ಟರಲ್ಲಿ ಚಹವು ಸಿದ್ಧ ವಾಗಿತ್ತು. ಕುಸುಮಾ ಚಹವನ್ನು ಮೂರು ಕಪ್ಪುಗಳಲ್ಲಿ ಸೋಸಿ ತಂದೆಯ ಕೈಯಲ್ಲಿ ಒಂದು ಕಪ್ಪನ್ನಿಟ್ಟು ಇನ್ನೊಂದನ್ನು ಕೈಯಲ್ಲಿ ಹಿಡಿದುಕೊಂಡು ಹಿಂದುಮುಂದೆ ನೋಡಿದಳು. ತಂದೆಯ ಎದುರಿಗೆ ಅದನ್ನೊಯ್ದು ನರಹರಿಗೆ ಕೊಡುವ ಧೈರ್ಯವು ಅವಳಿಗಾಗಲಿಲ್ಲ ಅವಳ ಸಂಕೋಚವನ್ನರಿತ

ನರಹರಿಯು ಅವಳಿಗಿಂತ ಮೊದಲೇ ತಾನೇ ಹೋಗಿ ಆ ಕಪ್ಪನ್ನು ಇಸಿದು ಕೊಂಡ. ಚಹವನ್ನು ತುಟಿಗೆ ಹಚ್ಚಿದೊಡನೆ ಅದು ಅವನಿಗೆ ಅಮೃತ ವಾಯಿತು. ತಾನು ವಿಷ್ಣು, ಕುಸುಮಾ ಲಕ್ಷ್ಮಿ, ಕಪ್ಪಿನಲ್ಲಿರುವುದು ಅಮೃತ ಇವುಗಳನ್ನುಳಿದು ಬೇರೆ ಭಾವನೆಗಳೇ ಅವನಲ್ಲಿರಲಿಲ್ಲ. ಸಮುದ್ರ ರಾಜನಂತೆ ದೇಸಾಯರು ಶಾಂತರಾಗಿ ಕುಳಿತಿದ್ದರು.

"ಚಹಕ್ಕೆ ಸಕ್ಕರೆ ತುಸು ಹೆಚ್ಚಾಗಿದೆಯೇನು?" ಎಂದು ಕುಸುಮಾ ಕುತೂಹಲದಿಂದ ನಾಚುತ್ತ ನುಡಿದಳು.

"ಆಗಿದೆ ಆದರೆ ಹೀಗೆ ಹೆಚ್ಚಾಗಬೇಕು. ಅದು ನನಗೆ ಸೇರು ತ್ತದೆ." ಎಂದು ದೇಸಾಯರು ನಕ್ಕರು.

"ಹೆಚ್ಚಿಲ್ಲ ಎಲ್ಲವೂ ಹವಣಿಯಾಗಿದೆ." ಎಂದು ಚಹವನ್ನು ಹನಿ ಹನಿಯಾಗಿ ಸವಿಯುತ್ತ ನರಹರಿಯೆಂದ.

ಈ ಸುಮಾರಿಗೆ ವಿಷ್ಣು ಪಾಟಣಕರನು ಕೋಣೆಯೊಳಗೆ ಕಾಲಿಟ್ಟ. ಅಪರಿಚಿತರನ್ನು ನೋಡಿ ತಾನು ಹೀಗೆ ಅನೌಪಚಾರಿಕವಾಗಿ ಒಳಗೆ ಬಂದು ದಕ್ಕೆ- ಅವನು ನರಹರಿಯಲ್ಲಿ ಕ್ಷಮೆ ಬೇಡಿದ. ಸ್ನೇಹದ ಸಲುಗೆಯಿಂದ ನರಹರಿಯು ಅವನನ್ನು ಕರೆದು ಕೂಡಿಸಿ "ಹಾಗಲ್ಲ, ಪಾಟಣಕರ. ನಾವೀಗ ನಿಮ್ಮ ಕಡಿಗೆ ಬರುತ್ತಿದ್ದೆವು ಮೊಗ್ಗಾವಿಯಿಂದ ನಮ್ಮ ದೇಸಾಯರು ಬಂದಿದ್ದಾರೆ ಇವರು ದೇಸಾಯರ ಮಗಳು ದೇಸಾಯರಿಗೆ ಇರಲು ಒಂದು ಮನೆ ಬೇಕಾಗಿದೆ. ದೊರಕಿಸಿಕೊಡಲು ನೀವು ಮೋಡಕರಿಗೆ ಹೇಳಬೇಕು." ಎಂದ ನರಹರಿ.

ಮೂರನೆಯ ಚಹದ ಕಪ್ಪು ಮೇಜಿನ ಮೇಲೆಯೇ ಇತ್ತು. ಕುಸುಮಾ ಅದನ್ನು ಇನ್ನೂ ತೆಗೆದುಕೊಂಡಿದ್ದಿಲ್ಲ. ಆಕೆಯು ನರಹರಿಯ ಕಡೆಗೆ ಸೂಕ್ಷ್ಮವಾಗಿ—ಅರ್ಥಪೂರ್ಣವಾಗಿ—ನೋಡಿದಳು.

ನರಹರಿಯು ಎದ್ದು ಆ ಕಪ್ಪನ್ನು ತೆಗೆದುಕೊಂಡು ಪಾಟಣಕರನಿಗೆ ಕೊಟ್ಟ. "ನಿನಗೆ ಚಹ?" ಎಂದು ನರಹರಿಯು ಕುಸುಮಾನನ್ನು ಕೇಳಿದ. "ಮಾಡಿಕೊಳ್ಳುತ್ತೇನೆ" ಎಂದು ಮೆಲ್ಲನೆ ನುಡಿದು ಮತ್ತೆ ಸ್ಟೋವಿನ ಸಂಭ್ರಮದಲ್ಲಿ ತೊಡಗಿದಳು ಕುಸುಮಾ.

"ಇವರು ಯಾರು?" ಎಂದು ದೇಸಾಯರು ವಿಷ್ಣೂನನ್ನು ಉದ್ದೇಶಿಸಿ ಕೇಳಿದರು.

"ಇವರು ಮೋಡಕರ ಬೀಗ, ಹೆಂಡತಿಯ ತಮ್ಮ. ಈ ಸಲ ಇಂಟರಿಗೆ ಕೂತಿರುತ್ತಾರೆ. ಪ್ರಥಮ ಶ್ರೇಣಿಯಲ್ಲಿ ಬರುವುದು ನಿಶ್ಚಿತ. ಕೆಲವು ತಿಂಗಳ ಹಿಂದೆ ಮೊಗ್ಗಾವಿಗೂ ಬಂದಿದ್ದರು. ನನ್ನ ಜೀವದ ಗೆಳೆಯರಿವರು." ಎಂದ ನರಹರಿ.

ನರಹರಿಯ ಜೀವದ ಗೆಳೆಯನನ್ನು ಕುಸುಮಾ ಒಂದೇ ಸಲ ದೃಷ್ಟಿಸಿ ನೋಡಿದಳು. ದೇಸಾಯರು ಮುಂದುವರಿದರು: "ಮೋಡಕರಿಗೆ ನಾನು ಭೆಟ್ಟಿಯಾಗಬೇಕಾಗಿದೆ. ಗಣಪತರಾಯರು ಪರಿಚಯ-ಪತ್ರವೊಂದನ್ನು ಕೊಟ್ಟಿದ್ದಾರೆ."

"ಪರಿಚಯ-ಪತ್ರವೇಕೆ? ಪಾಟಣಕರನ ಮುಖಾಂತರ ಪರಿಚಯವಾದರಾಯಿತು. ಮೋಡಕ ದಂಪತಿಗಳಿಬ್ಬರೂ ಆಗ ನಿಮ್ಮ ಪರಮ ಆಪ್ತರಾಗುವರು." ಎಂದು ನರಹರಿಯು ತುಸು ನಕ್ಕ. ಹೀಗೆಯೇ ಮಾತೂ ಚಹವೂ ಮುಗಿದ ಮೇಲೆ ಎಲ್ಲರೂ ಮೋಡಕರ ಮನೆಗೆ ಹೋಗಲನುವಾದರು. ಆದರೆ ಕುಸುಮಾ ಇನ್ನೂ ಚಹವನ್ನೇ ತೆಗೆದುಕೊಂಡಿದ್ದಿಲ್ಲ ಇದು ನರಹರಿಗೆ ಗೊತ್ತಿತ್ತು.

"ಚಹ?" ಎಂದು ಅವನು ಕುಸುಮಾನೆಡೆಗೆ ಹೊರಳಿ ಕೇಳಿದ. ಕುಸುಮಾ ನಗೆಮೊಗದಿಂದ ಸುಮ್ಮನಿದ್ದಳು "ನೀನೇಕೆ ಚಹ ತೆಗೆದುಕೊಳ್ಳಲಿಲ್ಲ ಕುಸುಮಾ?" ಎಂದು ದೇಸಾಯರು ಕೇಳಿದರು.

ಈಗ ಅವಳಿಗೆ ಉತ್ತರ ಕೊಡಬೇಕಾಯಿತು. "ಹಾಲಿಲ್ಲ; ಶೀರಿವೆ." ಎಂದು ಹೇಳಿ ಆಕೆಯು ಮೆಲುನಗೆ ನಕ್ಕಳು.

ನರಹರಿಯು ನೂರುಸಲ ಗೌಳಿಗನನ್ನು ಮನದಲ್ಲಿಯೇ ಬೈದು ಶಪಿಸಿದ. ತನ್ನ ಮೂರ್ಖತನವನ್ನು ಹಳಿದುಕೊಂಡ ಹಾಲು ಶೀರಿದ್ದು ತನಗೆ ತಿಳಿಯಬಾರದೇ? ಶೀರಬಹುದೆಂದು ಹೊಳೆಯಬಾರದೆ?

"ಓಹೋ! ಈ ಹಾಲು ಚಹದ ಕೊರತೆಗೆ ನಾನೇ ಕಾರಣನೆಂದು ಕಾಣುತ್ತದೆ! ಇರಲಿ. ಮನೆಗೆ ಹೋದೊಡನೆ ಮೊದಲು ಈ ತಪ್ಪನ್ನು

ಸುಧಾರಿಸಿಕೊಳ್ಳುತ್ತೇನೆ." ಎಂದು ಪಾಟಣಕರನು ಉದ್ಗಾರ ತೆಗೆದ. ಆಗ ನರಹರಿಗೆ ಸಮಾಧಾನವಾಯಿತು.

ಎಲ್ಲರೂ ಹೊರಗೆ ಬಂದ ವೇಳೆ ನರಹರಿಯು ಕೋಣೆ ಬೀಗ ಹಾಕುತಿದ್ದ. ಕುಸುಮಾನೂ ದೇಸಾಯರೂ ತುಸು ಮುಂದೆ ನಡೆದಿದ್ದರು. ನರಹರಿಯ ಜೊತೆಗಿದ್ದ ಪಾಟಣಕರನು ಆಗ ಮೆಲ್ಲನೆ ಆತುರದಿಂದ "ಮುನವಳ್ಳಿ, ಇವರು ಯಾರು?" ಎಂದು ಕೇಳಿದ.

ಯಾರ ಒಗ್ಗೆ ಪಾಟಣಕರನು ಕೇಳುವನೆಂಬುದು ನರಹರಿಗೆ ಗೊತ್ತಿತ್ತು. "ಇವರೇ ನೀವು ಕೇಳುತ್ತಿದ್ದ ಆ ನನ್ನ ಕವನಗಳ ಸ್ಫೂರ್ತಿ; ನನ್ನ ಸ್ಫೂರ್ತಿಯ ಸೆಲೆ." ಎಂದು ಅವನು ಹೇಳಿದ.

"ನಾನು ಹಾಗೆಯೇ ತಿಳಿದಿದ್ದೆ. ಮುನವಳ್ಳಿ, ನೀವು ಧನ್ಯರು!" ಎಂದು ಪಾಟಣಕರನು ನರಹರಿಯ ಬೆನ್ನು ತಟ್ಟಿದ.

ಮೋಡಕರ ಮನೆ ಸಮೀಪಿಸಿದಾಗ ಪಾಟಣಕರನು ಲಗುಬಗೆಯಿಂದ ಮುಂದೆ ಹೋಗಿ ದೇಸಾಯರೂ ಅವರ ಮಗಳೂ ಒಂದಿರುವ ಸುದ್ದಿಯನ್ನು ಮೋಡಕ ದಂಪತಿಗಳಿಗೆ ತಿಳಿಸಿದನು.

ಉತ್ತಮರೀತಿಯ ಆದರಸತ್ಕಾರವು ಅವರಿಗಾಗಬೇಕೆಂದು ಅವನು ನೋಟೀಸೇ ಹೊರಡಿಸಿದನೆನ್ನಬಹುದು. ಅವರೆಲ್ಲ ಮೋಡಕರ ಮನೆ ಮುಟ್ಟಿದಾಗ ಚಹದ ಪಾತ್ರೆಯು ಆಗಲೇ ಹೊತ್ತಿದ ಒಲೆಯ ಮೇಲೆ ಕೂತಿತ್ತು. ಮೋಡಕರು ಅವರನ್ನು ಸ್ವಾಗತಿಸಲು ಗೇಟಿನಲ್ಲಿ ಸಿದ್ಧರಾಗಿದ್ದರು.

"ನಮಸ್ಕಾರ್, ದೇಸಾಯಿ ಸಾಹೇಬ್! ನಮಸ್ಕಾರ್! ನೀವು ನಮ್ಮ ಸಾರಖೀ ಗರೀಬರ ಮನಿಗೆ ಆಲಾಯಿಸಿದ್ದು ದೋಡ್ ಭಾಗ್ಯ! ಇಕಡೆ ಬರ್ರಿ. ಅಗs! ಹ್ಯಾನಾ ಆತ್ ಬೋಲಾವ್!" ಎಂದು ಕುಸುಮಾನನ್ನುದ್ದೇಶಿಸಿ ಅವರು ರಂಗೂತಾಯಿಗೆ ಹೇಳಿದರು. ರಂಗೂತಾಯಿಯವರು ಹಸನ್ಮುಖರಾಗಿ ಬಂದು ಕುಸುಮಾನನ್ನು ಒಳಗೆ ಕರೆದುಕೊಂಡು ಹೋದರು.

ನರಹರಿಯೂ ದೇಸಾಯರು ಮೋಡಕರ ಕೋಣೆಯಲ್ಲಿ ಹೋಗಿ ಕುಳಿತರು. ಪಾಟಣಕರನು ಆಸನಗಳನ್ನು ಸರಿಪಡಿಸುತ್ತಿದ್ದ. ಮೋಡಕರೂ ದೇಸಾಯರೆದುರಿಗೆ ಕುಳಿತಿದ್ದರು.

"ನಮ್ಮದು ಗಣಪತರಾಯರದೆಲ್ಲ ಠೀಕ್?" ಎಂದು ಮೋಡಕರು ಕೇಳಿದರು.

ದೇಸಾಯರಿಗೆ ಈ ಭಾಷೆಯು ಅರ್ಥವಾಗಲಿಲ್ಲ. ಅದರ ಮೇಲೆ ಏನಾದರೂ ಬೆಳಕು ಬಿದ್ದೀತೆಂದು ಅವರು ಒಂದು ಸಲ ನರಹರಿಯು ಕಡೆ ನೋಡಿದರು.

"ಹೌದು. ರಾಯರು ಒಂದು ಪರಿಚಯ-ಪತ್ರವನ್ನು ಕೊಟ್ಟಿದ್ದಾರೆ." ಎಂದು ಅವರು ಹೇಳುವುದರಲ್ಲಿದ್ದರು ಅಷ್ಟರಲ್ಲಿ ನರಹರಿಯು "ರಾಯರ ಮನೆಯಲ್ಲಿ ಎಲ್ಲರೂ ಕ್ಷೇಮವಾಗಿದ್ದಾರೆ. ದೇಸಾಯರು ಹೇಳಿದರು." ಎಂದು ಮೋಡಕರನ್ನು ಸಮಾಧಾನಪಡಿಸಿದನು.

"ಪುಣೆ ಶಹರದಾಗ ಬಿರ್ಹಾಡ ಮಾಡೋದು ಬಹಳ ಉತ್ತಮ್! ಏಣಾರಿ ಜಾಣಾರಿ ಮಂಡಳೀದು ತ್ರಾಸ್ ಆಗೋದು ಖರೇ. ಪಣ್ ಸೇಜಾರಿ ಚಲೊತ್ನ್ಯಾಗ್ ಜುಳಾಯಿಸತು, ಅಂದರ ಹರಕತ್ತಿಲ್ಲ. ಚಲೋ ಮನೀ ಶೋಧಕ್ಕ ಧಡಪಡಸೋನು. ಒಂದು ಚಲೊ ಮನಿ ಮಿಳಾಲೀ ಅಂದ್ರ ಕಾಮ್ ಆಟಪಾಯಿಸಿತು" ಮೋಡಕರೆಂದರು.

ಈ ಮಾತು ದೇಸಾಯರಿಗೆ ವೇದಕ್ಕಿಂತ ಗಹನವಾಯಿತು. ಅವರು ಸ್ಥಿತಪ್ರಜ್ಞರಂತೆ ಸುಮ್ಮನಿದ್ದರು.

"ನಾರಾಯಣ್ ಪೇಟ್ಯಾಗ ಮನಿ ಹಿಡಿಯೋನೋ ಏನ್ ಸದಾಶಿವ ದಾಗೊ? ಸಾತ ಆಠ ಖಣ್‌ದ ಮನಿ ಮಾಗಣಿ ಇದ್ದರ ಸದಾಶಿವದಾಗ ಚಲೊ." ಎಂದು ಮತ್ತೆ ಮೋಡಕರು ತಮ್ಮ ಅನುಭವದ ಲಾಭವನ್ನು ದೇಸಾಯರಿಗೆ ಕೊಟ್ಟರು

ಇನ್ನು ಸುಮ್ಮನಿದ್ದರೆ ವ್ಯೈಮೇಲೆ ಬರುವುದೆಂದು ತಿಳಿದ ದೇಸಾಯರು ಏನಾದರೂ ಮಾತಾಡಲು ಹಾತೊರೆದರು. ಮೇಲಾಗಿ ಈಗ ಮೋಡಕ ಮಾತಿನ 'ಒಟ್ಟಾರೆ' ಅರ್ಥವು ಅವರಿಗೆ ಆಗತೊಡಗಿತ್ತು.

"ಸದಾಶಿವ್ ಪೇಟ್ಯಾಗ ಮನಿ ಹಿಡದರ ಚಲೋ ಅಂತ ಹೇಳತಿದ್ರು ರಾಯರು." ಎಂದು ವಿನಯಪೂರ್ವಕವಾಗಿ ನಕ್ಕು ದೇಸಾಯರು ಹೇಳಿದರು.

"ಠೀಕ್! ಸದಾಶಿವದಾಗs ಹಿಡಿಯೋನು. ಸದಾಶಿವ್ ಅಂದರ ಏನಂತ ನಿಮ್ಮ ಸರ್‌ಜೂತಿ ಅದ, ದೇಸಾಯಿ ಸಾಹೇಬ್? ಥೋಡಕ್ಯಾತ್ ಅದು ಹಿಂದುಸ್ಥಾನ್ ಇದ್ದಾಂಗ. ಹೌಂದು ಮತ್ತ!" ಎಂದು ಮೋಡಕರೆಂದರು.

ಇಷ್ಟರಲ್ಲಿ ಚಹವು ಸಿದ್ಧವಾಗಿತ್ತು. ಒಳಗೆ ರಂಗೂತಾಯಿಯವರು ತಮಗೆ ಬಂದಷ್ಟು ಕನ್ನಡದಲ್ಲಿ ಕುಸುಮಾನನ್ನು ಮಾತನಾಡಿಸಲು ಪ್ರಯತ್ನಿಸಿದರು. ಕೊನೆಗೆ ಅವರು ಮರಾಠಿಯಲ್ಲಿ ಪ್ರಶ್ನೆ ಕೇಳುವುದು ಹಾಗೂ ಕುಸುಮಾ ಕನ್ನಡದಲ್ಲಿ ಉತ್ತರ ಕೊಡುವುದೂ,— ಈ ರೀತಿ ನಡೆಯಿತು ಚಹವು ಸಿದ್ಧವಾದ ಕೂಡಲೇ ರಂಗೂತಾಯಿಯವರು ವಿಷ್ಣೂನನ್ನು ಕರೆದು ಎಲ್ಲರಿಗೂ ಕೊಡಲು ಹೇಳಿದರು. ಚಹ ಕುಡಿಯುವಾಗ ಮೋಡಕರು ದೇಸಾಯರಿಗೆಂದರು "ನಮ್ಮ ವಿಷ್ಣು ಭಾಳ್ ಡೋಕೆವಾನ್ ಹಾನ. ಇಂಟರ್ ಪರೀಕ್ಷಾಕ್ಕ ಕೂತಾನ. ಪಹಿಲಾ ನಂಬರ್ ಬರೋದು ಖಾತ್ರಿ. ಅವನ್ನ ವಿಲಾಯಿತಿಗೆ ಕಳಸೋ ಹೂಕೀ ಅದ ಈಗಿಂದ ಪೈಸೆ ಗೋಳೆಮಾಡಲಿಕ್ಕೆ ಹತ್ತಿದೇನು."

"ಯೋಗ್ಯ ಮಾತು ವಿದ್ಯಾದ ಮ್ಯಾಲ ತಮಗಿಷ್ಟು ಅಭಿಮಾನ ಇದ್ದದ್ದು ಸ್ತುತ್ಯ ಅದ." ದೇಸಾಯರೆಂದರು.

"ನಾ ಪಹಿಲ್ಯೆಪಾಸೂನ್ ವಿದ್ಯಾಪಕ್ಷಪಾತಿ ಅದೇನು, ದೇಸಾಯಿ ಸಾಹೇಬ್! ಟಿಳಕ್, ಗೋಖಲೆ ಅಂಥಾ ಧೊರಲೀ ಮಂಡಳೀ ಸಮೂಪಿದ್ದ ಆ ಅಭಿಮಾನ ಇಲ್ಲಾ ಅಂದ್ರ ನನಗ ಕಮೂಪಣಾ ಅಲ್ಲ?" ಎಂದು ಮೋಡಕರು ಉತ್ಸಾಹಭರಿತರಾಗಿ ಪ್ರಶ್ನೆ ಮಾಡಿದರು.

"ವಿಲಾಯತಿಗೆ ಯಾವ ಅಭ್ಯಾಸಕ್ಕಾಗಿ ಕಳಸೋರು?" ದೇಸಾಯರು ಕೇಳಿದರು.

"ಇದೇನು? ಹೀಂಗ್ಯ್ ವಿಚಾರಸ್ತೀರಿ? ಐ. ಸಿ. ಯಸ್. ಕಲೀಲಿಕ್ಕೆ ಹೋಗೋದು ನಮ್ ದೇಶದಾಗಿನ ಬುದ್ಧಿವಂತರ ಮಾಮೂಲು ಅದ. ಐ. ಸಿ. ಯಸ್ಸಕ್ಕೆ ಹೋಗೋದs. ಪಾಸಾಗಿ ಬಂದು ಕಲೆಕ್ಟರ್ ಆಗೋದs! ಆಗ ನಾವು ಈ ಲಕಡೀ ಬ್ರಿಜ್ ಮ್ಯಾ ಬಂಗಲೇದಾಗ ಇರೋದಿಲ್ಲಾ, ದೇಸಾಯಿ

ಸಾಹೇಬ್! ಆಗ ನಮಗ ಇರಲಿಕ್ಕೆ ಶನಿವಾರವಾಡಾ ಇಲ್ಲಾ ಎಲ್‌ಫಿನ್‌ಸ್ಟನ್ ಸಾಹೇಬನ ಬಂಗಲಾ!" ಎಂದು ಮೋಡಕರು ಉದ್ರೇಕಗೊಂಡರು. "ಇರಲಿ ಬಿಡ್ರಿ, ಭಾವೂಜಿ! ಮನಸ್ಸಿನ್ಯಾಗ ಇಷ್ಟೊಂದು ಮುಂಡಿಗಿ ತಿನ್ನಬಾರದು." ಎಂದು ವಿಷ್ಣು ನುಡಿದನು. ಮೋಡಕರು ತನ್ನ ಕಲ್ಪಕರಕಿಯಲ್ಲಿ ಕಂಡ ಇಂದ್ರಪದವಿಯ ಚಿತ್ರವನ್ನು ನೋಡಿ ನೋಡಿ ಅವನಿಗೆ ಬೇಸರಾಗಿತ್ತು.

ಹೀಗೆ ಮಾತುಕಗಥೆಳಾದ ಮೇಲೆ ದೇಸಾಯರ ಸಲುವಾಗಿ ಮನೆಯನ್ನು ನೋಡಿ ತಿಳಿಸುವುದಾಗಿ ಮೋಡಕರು ಹೇಳಿದರು. ಸಂಜೆಯಾಗಿದ್ದರಿಂದ ಕುಸುಮಾ ಹಾಗೂ ದೇಸಾಯರು ಲಗುಬಗೆಯಿಂದ ಮನೆಯನ್ನು ಮುಟ್ಟ ಬೇಕಾಗಿತ್ತು. ರಂಗಾಸಾನಿಯನ್ನು ಬೇರೆ ಮನೆಯಲ್ಲಿಯೇ ಬಿಟ್ಟು ಬಂದಿದ್ದರು. ದೇಸಾಯರನ್ನು ಕಳಿಸಲು ವಿಷ್ಣು ಹಾಗೂ ಮೋಡಕರು ಕೆಲವು ಹೆಜ್ಜೆ ಮುಂದೆ ಹೋದರು ಸಾಧಿಸಿದರೆ ಸಮಯ ಸಾಧಿಸಬಹುದೆಂದು ನರಹರಿಯು ಸಹಜವಾಗಿ ಹಿಂದುಳಿದ ರಂಗೂತಾಯಿಯವರು ಕುಸುಮಾನಿಗೆ ಕುಂಕುಮ ಹಚ್ಚಿ ಕಳಿಸುವ ಸಮಯುದಲ್ಲಿ ತುಸು ವಿಲಂಬವಾಯಿತು. ಬೆಳ್ಳಿ ಕರಡಿಗೆ ಯೊಳಗಿಂದ ಕುಂಕುಮ ಹಚ್ಚಬೇಕೆಂದು ಅವರ ಇಚ್ಛೆ. ಆದರೆ ಹೊತ್ತಿಗೆ ಸರಿಯಾಗಿ ಅದು ಸಿಗಲೊಲ್ಲದು. ಅಂತೂ ಅವರು ಕುಂಕುಮ ಹಚ್ಚಿದ ಮೇಲೆ ಕುಸುಮಾ ಅವರನ್ನ ಬೀಳ್ಕೊಂಡು ಮುಂದೆ ನಡೆದಳು. ನರಹರಿಯು ತೀರ ಸಹಜವಾಗಿ ನಿಂತವನಂತೆ ಅವಳ ಜೊತೆಯಲ್ಲಿಯೇ ನಡೆದ.

"ಕುಸುಮಾ—ನರಹರಿಯವರಿಗೆ ಸಿಕ್ಕ ನಿಮಿಷಗಳು ಒಂದೆರಡು. ಅಷ್ಟರಲ್ಲಿಯೇ ಅವರು ತಮಗೆ ಬೇಕಾದುದನ್ನು ಮಾತಾಡಿಕೊಳ್ಳಬೇಕಾಗಿತ್ತು. ನರಹರಿಗಾದರೋ ಕೇಳುವ ಪ್ರಶ್ನೆಗಳು ನೂರೆಂಟಿದ್ದವು ಯಾವುದನ್ನು ಮೊದಲು ಕೇಳಲಿ ಎಂಬ ಗೊಂದಲದಲ್ಲಿ ಯಾವ ಪ್ರಶ್ನೆಯೂ ಅವನ ಬಾಯಿಂದ ಹೊರಡಲಿಲ್ಲ. ನೆನಪಿಗೆ ತಂದುಕೊಂಡು ಕೇಳುವಷ್ಟರಲ್ಲಿ ಕುಸುಮಾ ಒಂದು ಕಾಗದವನ್ನು ಮುಂದೆ ಮಾಡಿ "ಇದು ನಿನ್ನ ಕವಿತೆ ಯಲ್ಲಿಯ ಒಂದು ಶ್ಲೋಕ. ಕವಿಗಳಿಗೇನು? ಒಂದು ಶ್ಲೋಕ ಕಳೆದು ಹೋದರೂ ಇನ್ನೊಂದನ್ನು ಕಟ್ಟಬಲ್ಲರು! ನೀನು ಊರು ಬಿಟ್ಟ ಮುಂಜಾವಿ ನಲ್ಲಿ ಇದು ಕಿಟ್ಟೂನ ಕೈಯಲ್ಲಿತ್ತು. ಅದನ್ನು ನಾನು ಇಸಿದುಕೊಂಡೆ." ಎಂದು ಹೇಳಿ ತುಸು ನಕ್ಕಳು.

"ಓಹೋ! ನಾನು ಹೊರಡುವ ಅವಸರದಲ್ಲಿ ನನ್ನ ಕಾಗದಗಳಿಂದ ಇದು ಬಿದ್ದುಹೋಗಿರಬೇಕು. ನಿನಗೆ ಸಿಕ್ಕಿತೆಂದೇ ಉಳಿಯಿತು." ಎಂದು ನರಹರಿಯು ಸಂತುಷ್ಟನಾಗಿ ಅದನ್ನು ಸ್ವೀಕರಿಸಿದ.

"ಕನಸು–ಮನಸ್ಸಿನಲ್ಲಿಲ್ಲದೆ ದಿಗಿಲ್ಲನೆ ಒಮ್ಮೆಲೆ ಹೊರಟರೆ ಹೀಗಾಗದೇನು ಮಾಡೀತು?" ಎಂದು ಕುಸುಮಾ ಮತ್ತೆ ನಗೆಯನ್ನು ಸೂಚಿಸಿದಳು

ನರಹರಿಯೂ ನಕ್ಕ. "ಆದರೆ ಈ ಶ್ಲೋಕದಲ್ಲಿ ಒಂದು ತಿದ್ದುಪಡೆಯಾಗಬೇಕಾಗಿದೆ" ಎಂದು ಅವನು ಹೇಳಿದ.

"ಅದೇನು?" ಎಂದು ಉತ್ಸುಕಳಾಗಿ ಕೇಳಿದಳು ಕುಸುಮಾ.

"ತಾಳಲಯದಲಿ ತಾಳಕಿದ್ದಂತೆ ಲಯಕು ಸಹ
ಹಿರಿದಾದ ಸ್ಥಾನವಿಹುದು" ಎಂದು ಅಲ್ಲಿಯ ಕೊನೆಯ ಸಾಲಿದೆ.

'ತಾಳಲಯದಲಿ ತಾಳಕಿದ್ದಂತೆ ನಿಲಯಕೂ ಹಿರಿದಾದ
ಸ್ಥಾನವಿಹುದು' ಎಂದು ಅದನ್ನು ತಿದ್ದಬೇಕು"

ಎಂದು ಹೇಳಿ ನರಹರಿಯು ಅರ್ಥಪೂರ್ಣವಾಗಿ ಕುಸುಮಾನ ಮೊಗವನ್ನು ನೋಡಿದ. ಆ ಮೊಗದಿಂದ ಮಾತು ಹೊರಡಲಿಲ್ಲ. ಆದರೆ ತುಂಬು ಹುಣ್ಣಿಮೆಯ ಚಂದ್ರನ ರಾಜಕಳೆಯ ವಿಲಾಸವೊಂದು ಅಲ್ಲಿಂದ ಸೂಸಿತು.

ಇಷ್ಟರಲ್ಲಿಯೇ ದೇಸಾಯರು ಕುಸುಮಾನಿಗಾಗಿ ಕಾದು ನಿಂತಿದ್ದರು. ಆಕೆ ಬಂದೊಡನೆ ಅವರು ಮೋಡಕ–ಪಾಟಣಕರರನ್ನು ಬೀಳ್ಕೊಂಡು ಮುಂದೆ ಸಾಗಿದರು. ನರಹರಿಯೂ ಮನೆ ತನಕ ಅವರನ್ನು ಕಳಿಸಲು ನಡೆದದ್ದಲ್ಲದೆ ಮರುದಿನ ಮುಂಜಾನೆ ಭೆಟ್ಟಿಯಾಗುವುದಾಗಿ ಹೇಳಿದ.

---

ಪ್ರಕರಣ ೫೭.

## ನರಹರಿಯ ಪ್ರೀತಿಗೆ ವಡ್ಸ್‌ವರ್ಥನ ಕವಿತೆಯ ಟಿಸಿಲು

ಪುಣೆಯ ಹೃದಯವು ಮಿಡಿಯುತ್ತಿದ್ದ ಸದಾಶಿವ ಪೇಟೆಯಲ್ಲಿ ಕಡೆಗೆ ಚಿಕ್ಕ ಮನೆಯೊಂದು ದೇಸಾಯರಿಗೆ ದೊರೆಯಿತು. ದೊಡ್ಡ ದೊಡ್ಡ ವಾಡೆಗಳ

ನಡುವೆ ನಿಂತಿದ್ದ ಸಣ್ಣ ಮನೆಯದು. ರಸ್ತೆಗೇ ಅದರ ಗೇಟು ಇತ್ತು. ಮೂರು ನಾಲ್ಕು ಡಬ್ಬಿಗಳನ್ನು ಹಚ್ಚಿದ ಗಾಡಿಯಂತೆ ಒಂದರ ಹಿಂದೊಂದು ಕೋಣೆಗಳು. ಆ ಮನೆಯಲ್ಲಿದ್ದವು ಎಲ್ಲಕ್ಕೂ ಮುಂದಿನದನ್ನು ಬಂದವರನ್ನು ಸ್ವಾಗತಿಸಲು ಕಾದಿಡಲಾಗಿತ್ತು ಅದರ ಹಿಂದಿನದು ದೇಸಾಯರು ಕೂಡುವ ಕೋಣೆ. ಅದರ ಹಿಂದೆ ಕುಸುಮಾನ ಕೋಣೆ, ಅಡುಮನೆ, ಹೀಗೆ ವ್ಯವಸ್ಥೆ ಯಿತ್ತು. ಸ್ವಾಗತದ ಕೋಣೆಯ ಮಗ್ಗುಲಲ್ಲಿಯೇ (ಹೈದ್ರಾಬಾದಿನ ಕನ್ನಡದಲ್ಲಿ ಹೇಳುವದಾದರೆ 'ಬಗಲಲ್ಲಿಯೇ') ಅದೇ ಕಾಂಪೌಂಡಿನಲ್ಲಿ ಅಡುಮನೆ-ಸ್ನಾನಗೃಹಗಳಿಂದ ಕೂಡಿದ ಚಿಕ್ಕ ಕೋಣೆಯಿತ್ತು. ಅದನ್ನು ದೇಸಾಯರು ರಂಗಾಸಾನಿಗೆ ಕೊಟ್ಟರು.

ಹೀಗೆ ದೇಸಾಯರು ಹೊಸದಾಗಿ ಹೂಡಿರುವ ಸಂಸಾರ ಸಾಗಿರುವ ಅವಧಿಯಲ್ಲಿ ನರಹರಿಯು ಅನೇಕ ಸಲ ದೇಸಾಯರ ಮನೆಗೆ ಬಂದಿದ್ದ. ಮುಂಜಾವಿನಲ್ಲಿ ಕುಸುಮಾಸಿಗೆ ವೇಳೆ ದೊರೆಯುತ್ತಿರಲಿಲ್ಲ ಅಡುಮನೆಯ ಅನುದಿನದ ಕೆಲಸವನ್ನು ಆಕೆಯೇ ಸಾಗಿಸಬೇಕಾಗಿತ್ತು. ರಂಗಾಸಾನಿಯು ಮಗಳಂತೆ ಕುಸುಮಾನನ್ನು ನೋಡಿಕೊಳ್ಳುತ್ತಿದ್ದಳು ತನ್ನ ಅಡಿಗೆಯನ್ನು ತಾನು ಸಾಗಿಸಿಕೊಳ್ಳುವದಲ್ಲದೆ ಕುಸುಮಾನಿಗೆ ಪಲ್ಲೆ ಹೆಚ್ಚಿಕೊಡುವದು, ಮೇಲಿಂದ ಮೇಲೆ ಒಂದು ಮತ್ತಾವ ರೀತಿಯಿಂದಾದರೂ ನೆರವಾಗುವದು,—ಇದು ಅವಳ ದಿನದ ರೂಢಿಯಾಗಿಹೋಗಿತ್ತು. ಬಹುತೇಕ ಮನೆಯಲ್ಲಿಯ ಮೇಲ್ಗೆಲಸವನ್ನು ದೇಸಾಯರು ನೇಮಿಸಿದ ಕೆಲಸಗಿತ್ತಿಯೇ ಸಾಗಿಸಿಕೊಂಡು ಹೋಗುತ್ತಿದ್ದಳು ಹೀಗಾಗಿ ಕುಸುಮಾನಿಗೆ ಎಲ್ಲ ಕೆಲಸವೂ ಹಗುರಾಗಿತ್ತು. ಅಲ್ಲದೆ ತಾಯಿಯ ಅಮಲು ಇಲ್ಲಿಲ್ಲ. ತಂದೆಯ ಪ್ರೀತಿಯ ರಕ್ಷಾಕವಚದಲ್ಲಿ ಆಕೆ ಬೆಳೆಯುತ್ತಿದ್ದಳು. ಆಗೀಗ ಬಂದ ನರಹರಿಯೊಡನೆ ಆಡುವ ಮಾತಿನಲ್ಲಿ ಆಕೆಗೆ ಅನುಪಮ ಸುಖವಿತ್ತು. ಬೇಸಿಗೆಯ ಸೂಟಿ ಮುಗಿಯಲು ಬಂದಿತ್ತು. ಅದು ಮುಗಿದ ಮೇಲೆ ಹೆಣ್ಣುಮಕ್ಕಳ ಸಾಲೆಯಲ್ಲಿಯ ಇಂಗ್ಲಿಷು ಆರನೆಯ ಇಯತ್ತೆಗೆ ಹೋಗುವ ಹಾದಿಯನ್ನೇ ಕುಸುಮಾ ನೋಡುತ್ತಿದ್ದಳು.

ಸಾಲೆಯು ಪುನಃ ಪ್ರಾರಂಭವಾಗಿ ಆಕೆಯು ಸಾಲೆಗೆ ಹೋಗ ಹತ್ತಿದಾಗ,—ದೇಸಾಯರೂ ಸಹ ಒಂದೊಂದು ಸಲ ಆಕೆಗೆ ಅಪ್ರತ್ಯಕ್ಷವಾಗಿ ನೆರವಾಗುತ್ತಿದ್ದರು. ಆದರೆ ಕುಸುಮಾನಿಗೆ ಇದರ ಆವಶ್ಯಕತೆಯೇ ಇರಲಿಲ್ಲ.

ನಸುಕಿನಲ್ಲಿ ಐದು ಗಂಟೆಗೆದ್ದು ಒಲೆಯನ್ನು ಹೊತ್ತಿಕ್ಕಿ ಅನ್ನದ ತಪ್ಪೇಲಿ ಯನ್ನೂ ಸಾರಿನ ಕಲ್ಲುಗಡಿಗೆಯನ್ನೂ ಒಲೆಯ ಮೇಲಿಟ್ಟು ಕುಸುಮಾ ತನ್ನ ಹೆರಳು–ಮೈ–ಉಡಿಗೆಯನ್ನು ಮುಗಿಸಿಕೊಂಡು ಅಡಿಗೆಯ ಉಳಿದ ಪ್ರಕರಣ ಗಳನ್ನು ಪೂರೈಸಿ ಒಂದು ತಾಸಿನ ಸುಮಾರು ಓದುತ್ತಿದ್ದಳು ಆಮೇಲೆ ಎರಡು ತಾಟುಗಳಲ್ಲಿ ಎಲ್ಲವನ್ನೂ ಬಡಿಸಿ, ಬೇಕಾದ ಸಾಧನಗಳನ್ನು ಹತ್ತಿರದ ಲ್ಲಿಟ್ಟುಕೊಂಡು ಕುಸುಮಾನೂ ದೇಸಾಯರೂ ಕೂಡಿಯೇ ಊಟಕ್ಕೆ ಕೂಡು ತ್ತಿದ್ದರು ಊಟವಾದ ಮೇಲೆ ಕುಸುಮಾ ಸಾಲೆಗೆ ಹೋಗುತ್ತಿದ್ದಳು. ದೇಸಾಯರು ತಮ್ಮ ಪ್ರೀತಿಯ ಪುಸ್ತಕಗಳನ್ನು ಓದುತ್ತ, ರಂಗಾಸಾನಿಗೆ ಒಮ್ಮೊಮ್ಮೆ ತಮ್ಮ ಓದಿನ ವಿಷಯವನ್ನು ತಿಳಿಸಿ ಹೇಳುತ್ತ ಕಾಲಕಳೆಯು ತ್ತಿದ್ದರು. ಅವರ ಮಧ್ಯಾಹ್ನದ ಚಹವು ರಂಗಾಸಾನಿಯೊಡನೆ ಆಗುತ್ತಿತ್ತು. ಕುಸುಮಾ ಸಾಲೆಯಲ್ಲಿಯೇ ಮಧ್ಯಾಹ್ನದ ಫಲಾಹಾರವನ್ನು ಮುಗಿಸು ತ್ತಿದ್ದಳು ಸಾಲೆ ಬಿಟ್ಟು ಮನೆಗೆ ಬಂದಮೇಲೆ ದೇಸಾಯಿ–ರಂಗಾಸಾನಿಯ ರೊಡನೆ ಪರ್ವತಿಯ ಕಡೆಗೆ ತಿರುಗಾಡಿ ಬಂದು, ಅಡಿಗೆ-ಊಟ ಮುಗಿಸಿ ಕೂತಳೆಂದರೆ ಎರಡು-ಮೂರು ತಾಸಿನ ವರೆಗೆ ಅವಳ ಓದು ನಿರಾತಂಕವಾಗಿ ಸಾಗುತ್ತಿತ್ತು. ಇದಲ್ಲದೆ ರವಿವಾರಗಳೂ ಸೂಟಿಯ ದಿನಗಳೂ ಅವಳ ನೆರವಿಗೆ ಬಂದೊದಗುತ್ತಿದ್ದವು

ಒಂದು ರವಿವಾರ ಎರಡು-ಮೂರು ಗಂಟೆಯ ಸುಮಾರಿಗೆ ನರಹರಿಯು ದೇಸಾಯರ ಮನೆಗೆ ಬಂದ. ಅಷ್ಟರಲ್ಲಿ ಸಾಲೆ ಪ್ರಾರಂಭವಾಗಿ ಒಂದೆರಡು ವಾರಗಳಾಗಿದ್ದರೂ ಕಾಲೇಜು ಸುರುವಾಗಲು ಇನ್ನೂ ನಾಲ್ಕೈದು ದಿನಗಳಿ ದ್ದವು ಈಗ ನರಹರಿಯು ಕಾಲೇಜಿನ ವಸತಿಗೃಹದಲ್ಲಿ ಒಂದು ಕೋಣೆ ಯನ್ನು ಹಿಡಿದು ಅಲ್ಲಿಯೇ ವಾಸಿಸುತ್ತಿದ್ದ. ನರಹರಿಯು ಬಂದಾಗ ದೇಸಾಯರಿಗೆ ರಂಗಾಸಾನಿಯ ಮನೆಯಲ್ಲಿ ಜಂಪುಹತ್ತಿತ್ತು. ಕುಸುಮಾ ಹೊರಗಿನ ಕೋಣೆಯಲ್ಲಿ ಓದುತ್ತ ಕುಳಿತಿದ್ದಳು. ನರಹರಿಯು ಬಂದಾಗ ಕುಸುಮಾ ಏಳಲಿಲ್ಲ. ಮುಗುಳುನಗೆಯಿಂದ ಅವನನ್ನು ಸ್ವಾಗತಿಸಿದಳು. ನರಹರಿಯು ಬಂದು ಅವಳೆದುರಿನ ಕುರ್ಚಿಯ ಮೇಲೆ ಕುಳಿತು "ನೀನು ಹೇಳಿದ ಕವಿತೆಯನ್ನು ಕನ್ನಡಿಸಿದ್ದೇನೆ, ಕುಸುಮಾ!" ಎಂದು ಕಿಸೆಯೊಳ ಗಿಂದ ಒಂದು ಕಾಗದವನ್ನು ತೆಗೆದ.

"ಓದು, ನೋಡೋಣ! ಈಗಾದರೂ ಅದರ ಅರ್ಥ ನನಗಾಗುವದೋ ಇಲ್ಲವೋ!" ಎಂದು ಕುಸುಮಾ ತುಸು ನಕ್ಕಳು.

"ನಾನು ಮೊದಲೇ ಹೇಳಿದ್ದೆನಲ್ಲ; ನಮ್ಮ ಪ್ರೊಫೆಸರರು ಅದನ್ನು ಅರ್ಥಮಾಡಿದಂತೆ ಯಾರೂ ಮಾಡಲಾರರೆಂದು! ಮೊದಲು ಇದನ್ನು ಓದುತ್ತೇನೆ. ಆಮೇಲೆ ಕವಿತೆಯನ್ನು ಚರ್ಚಿಸೋಣ." ಎಂದು ನರಹರಿಯು ತಾನು ಕನ್ನಡಿಸಿದ ಕವನವನ್ನು ಓದಿದ:

ಮೊದಲೊಮ್ಮೆ ಕಣ್ಣೆದುರಿಗವಳು ಹೊಳೆದಂದು
ಸೌಂದರ್ಯದಾಪ್ಸರಿಯು ಶೋಭಿಸಿದಳೆಂದು.
ಒಂದು ನಿಮಿಷಕೆ ತೊಡಿಸಿದಂಥ ತೊಡವಿನೊಲು
ದೇವ ಕಳುಹಿದ ದಿವ್ಯ ದರ್ಶನವದಿರಲು,—
ಕಣ್ಣು ಸಂಧ್ಯೆಯ ವಿಮಲ ತಾರೆಯಂತೆ.
ನೀಲಕೇಶವು ಕೂಡ ಸಂಧ್ಯೆಯಂತೆ.
ಉಳಿದೆಲ್ಲ ಪಾಂಗಿನಲ್ಲಿ ಮೈ ನಿಲುವಿನಲ್ಲಿ
ಸುಗ್ಗಿ ಮೈಸಿರಿ, ನಸುಕಿನುಲ್ಲಾಸವಲ್ಲಿ.
ಕುಣಿಕುಣಿವ ರೂಪವಾಕೆಯು, ನಲಿವ ಗೊಂಬೆ,—
ಸುಳಿಯುವಳು, ಹೊಳೆಯುವಳು, ನೆಳೆವಳೇನೆಂಬೆ!

ಇನ್ನು ಸನಿಯಕೆ ನೋಡಿ, ನಾನರಿತೆನೆಂದು,—
ಅಹುದು ಚಿನ್ಮಯಿಯಹುದದೋರ್ವ ಸ್ತ್ರೀಯೆಂದು.
ಮನೆಗೆಲಸವದು ನಿರಾಯಾಸ, ಲೀಲೆ,—
ಕೊಡಗೂಸಿನಂದದಲ್ಲಿ ಸುಳಿಯುತಿರೆ ಬಾಲೆ!

ಚಿಕ್ಕಂದಿನುಕ್ಕಂದ, ಕಳೆಯು, ವಿಮಲತೆಯು,—
ಬಾಳ ಹಿರಿಮೆಯ ಸಂಚಕಾರವಿರೆ ಜೊತೆಯು—
ಸಂಬೆರಿಕೆಯಾಗೆ ಚೆಲುವಾಗಿಸಿದ ಮುಖವು;
ಆ ಮುಖವ ಮುದ್ದಿಸುವದೆಂಥ ಸುಖವು!
ಗುಣದಿ ಮಿಕ್ಕುತ ದಿವ್ಯ ತೇಜವುಕ್ಕಿ

ಮೆರೆವ ವ್ಯಕ್ತಿಯೆ, ಮರ್ತ್ಯ ನೇತ್ರವನು ಕುಕ್ಕಿ?
ಅನುಗುಣವಿದನುರೂಪ ದಿನವ ಬಾಳುವೆಗೆ,
ಜೊತೆಗೆ, ದುಃಖಕೆ, ಸುಖಕೆ, ಪ್ರಣಯದಾ ಬಗೆಗೆ,
ದಿನದಿನದ ದುಗುಡ, ಹೊಗಳಿಕೆಗೆ, ತೆಗಳಿಕೆಗೆ,
ಅನುರಾಗ, ಮುದ್ದು ಕಣ್ಣೀರು, ಮುಗುಳ್ನಗೆಗೆ.

ಈಗ ಶಾಂತ–ಪ್ರಶಾಂತ ನೋಟದಿಂದ
ನೋಡುತಿರೆ ಕಾಣುವದು ಆ ಸ್ಫುರಣದಂದ.
ನಮ್ಮಂತೆ ಉಸಿರಾಡಿಸುವ ಪ್ರಾಣಿಯಾಕೆ;
ಉಸಿರುಸಿರು ಬಗೆಯಾಗುತಿರೆ ಕುದಿಯುವಾಕೆ!
ಜನನ–ಮರಣದ ನಡುವೆ ನಡೆವ ಪಯಣಿಗಳು,—
ಜಾಣ್ಮೆ, ಚತುರತೆ, ಶಕ್ತಿ, ಬುದ್ಧಿ, ತಾಳ್ಮೆಗಳು,
ಮುನ್ನೋಟ, ದೃಢನಿಶ್ಚಯಾದಿಗಳು ಕೂಡಿ,—
ಇಲ್ಲಿ ಕಾಣ್ಪುದು ಸ್ತ್ರೀಯ ಪೂರ್ಣತೆಯ ಮೋಡಿ!
ಮಾರ್ಗದರ್ಶಕಳೆಂದು, ಮಹಾರಾಜ್ಞಿಯೆಂದು,
ಸುಖಶಾಂತಿದಾಯಿನಿಯದೀಕೆ ಇರಲೆಂದು
ದೇವ ಸೃಷ್ಟಿಸಿದಂಥ ಮರ್ತ್ಯ ಸ್ತ್ರೀಯಿವಳು!
ಮರ್ತ್ಯಳಿದ್ದರು ಮೊದಲು ಕಂಡ ದಿವ್ಯತೆಯು
ತೊಲಗಿಲ್ಲ,— ದೇವದೂತಿಯು ಕಾಂತಿ-ದ್ಯುತಿಯು.
ಸ್ತ್ರೀಯಾಗಿ, ಅಧಿದೇವಿಯಾಗಿ ತೊಳಗಿ
ಇಲ್ಲಿ ಬಾಳುವಳೀಕೆ ಬಾಳುವೆಯ ಬೆಳಗಿ.

ನರಹರಿಯು ಓದುವದು ಮುಗಿದಮೇಲೆ ಕುಸುಮಾ ನುಡಿದಳು: "ಅಡ್ಡಿ ಇಲ್ಲ. ಇದರಲ್ಲಿ ನಿನ್ನದಾದುದನ್ನೂ ಬೆರಿಸಿದ್ದೀಯೆ!"

"ಅದೇನು?" ಎಂದು ನರಹರಿಯು ಉತ್ಸುಕನಾಗಿ ಕೇಳಿದ.

"ನಿನ್ನ ದನಿ, ಅದನ್ನೋದುವಾಗ ನೀನು ತೋರಿಸುವ ತನ್ಮಯತೆ" ಎಂದಳು ಕುಸುಮಾ.

ನರಹರಿಯು ನಕ್ಕ. ಆಮೇಲೆ “ ಇದರರ್ಥ ಏನೆಂದು ನಿಮ್ಮ ಮಾಸ್ತರು ಹೇಳಿದ್ದಾರೆ ? ” ಎಂದು ಅವನು ಕೇಳಿದ.

“ ಇದು ವರ್ಡ್ಸ್‌ವರ್ಥನೆಂಬ ಕವಿಯ ಕವನ. ತನ್ನ ಪತ್ನಿಯನ್ನು ಕುರಿತು ಆತ ಬರೆದ ಕವನ ಇದು ಇಷ್ಟು ಹೇಳಿ ಶಬ್ದಾರ್ಥಕ್ಕೆ ಅವರು ಮುನ್ನುಗ್ಗಿದರು. ಆದರೆ ಇದರಿಂದ ನನಗೆ ಸಮಾಧಾನವಾಗಿಲ್ಲ. ನಿಮ್ಮ ಪ್ರೊಫೆಸರು ಏನು ಹೇಳಿದ್ದಾರೆ ? ” ಎಂದಳು ಕುಸುಮಾ.

“ ಇದು ಮದುವೆಯನ್ನು ಕುರಿತು ಬರೆದ ಕವನ. ಗಂಡು-ಹೆಣ್ಣಿನ ನಲುಮೆಯ ಬಾಳುವೆಯಲ್ಲಿ ಅವಸ್ಥಾತ್ರಯವನ್ನು ಕವಿಯು ಕಂಡುಹಿಡಿದ ದ್ದಾನೆ ” ನರಹರಿ ಹೇಳಿದ.

“ ಯಾವ ಯಾವ ಪರಿಗಳು ಅವು ? ” ಕುಸುಮಾ ಕೇಳಿದಳು.

“ ಮೊದನೆಯದು ದರ್ಶನದ ಸ್ಥಿತಿ. ಪ್ರೇಮಿಗೆ ತನ್ನ ಪ್ರೀತಿಯ ಹೆಣ್ಣಿನಲ್ಲಿ ದೇವತ್ವವು ಕಾಣುತ್ತದೆ ಆಕೆಯ ಒಂದು ಹೆಜ್ಜೆಗೆ ಇವನ ಹೃದಯವು ಕಂಪಿಸತ್ತದೆ ಆಕೆಯ ಪಾದಸ್ಪರ್ಶನಕ್ಕೆ ಪುಳುಕಿತವಾಗಿ ಬೀಳು-ನೆಲವು ಕೂಡ ಹೂವಾಗಿ ಅರಳುತ್ತದೆಂದು ಅವನ ಭಾವನೆಯಾಗಿರು ತ್ತದೆ ಆಕೆಯಿದ್ದ ತಾಣವೇ ಸ್ವರ್ಗ. ಆಕೆಯೇ ದೇವಿಯೆಂದು ಕಾದಲನು ತಿಳಿಯುತ್ತಾನೆ ” ನರಹರಿ ಹೇಳಿದ.

“ ಸರಿ, ಇದು ಒಂದು ಪರಿಯಾಯಿತು. ಇನ್ನೊಂದು ? ” ಕುಸುಮಾ ಕೇಳಿದಳು

“ ಇನ್ನೊಂದರಲ್ಲಿ ಪ್ರೀತಿಯು ಕೂಡಿಸಿದ ಸಂಸಾರವೇ ಪ್ರೀತಿಯ ಒರೆ ಗಲ್ಲಾಗುತ್ತದೆ. ತನ್ನ ಮನೆಯಲ್ಲಿದ್ದ ದೇವಿಯ ಮರ್ತ್ಯತೆಯು ಕಾದಲನಿಗೆ ಗೋಚರವಾಗುತ್ತದೆ ಈ ದೇವಿಯು ನಮ್ಮಂತೆ ಕಣ್ಣೀರು ಸುರಿಸುವ ವ್ಯಕ್ತಿ. ಮುನಿಸಿಗೂ ಕುನಸಿಗೂ ಅದು ಹೊರತಾಗಿಲ್ಲ. ಎರಡು ಜೀವಗಳೇನೋ ಒಂದನ್ನೊಂದು ಗುರುತಿಸಿವೆ ಆದರೆ ಎರಡು ಮನಸ್ಸುಗಳು ತಮ್ಮ ಸಾಮ ರಸ್ಯವನ್ನು ಕಂಡುಕೊಳ್ಳಬೇಕಾಗಿದೆ ಸಂಸಾರದ ಅನೇಕ ವಿರಸಗಳೊಳಗಿಂದ ಹಾಯ್ದು ಇವನ್ನು ದೊರಕಿಸುವಾಗ ಆಗುವ ಯಾತನೆಯನ್ನು ಸಹಿಸುವದೇ ಯೋಗ. ಇದು ಪ್ರೀತಿಯ ಎರಡನೆಯ ಪರಿ ” ನರಿಹರಿಯೆಂದ.

"ಮೂರನೆಯದನ್ನು ತಿಳಿಸಿಬಿಡು, ನರಹರಿ" ಎಂದು ಕುಸುಮಾ ಅಂದಳು. ಈ ವಿವರಗಳು ಅವಳನ್ನು ಆಕರ್ಷಿಸಿದ್ದವು.

"ಮೂರನೆಯದೆಂದರೆ ಗುಣ ಲಿಂಗ—ವಯಸ್ಸುಗಳನ್ನು ಮೀರಿದ ಸ್ಥಿತಿ. ಜನನ ಮರಣಗಳ ನಡುವೆ ಪಯಣ ಬೆಳೆಸುವ ಒಂದು ಜೀವವೆಂದರೆ ಪತಿ; ಇನ್ನೊಂದೆಂದರೆ ಪತ್ನಿ. ಸಂಸಾರವೆಂದರೆ ಮರ್ತ್ಯತೆಯನ್ನೂ ದೈವಿಕತೆಯನ್ನೂ ಕೂಡಿಸಿ ಒಂದಾಗಿಸಲು ಹಾಕಿದ ಮದುವೆಯ ಮಂಟಪ. ಇಂಥದೊಂದು ದರ್ಶನಸಾಫಲ್ಯವು ಆಗ ಎರಡು ಜೀವಿಗಳಿಗೂ ದೊರೆಯುವದು. ಇದೇ ಆ ಕವನದ ತಿರುಳು." ನರಹರಿಯು ತನ್ನ ಉಪನ್ಯಾಸವನ್ನು ಮುಗಿಸಿದ.

"ಇನ್ನು ನಾಳೆ ನಮ್ಮ ಮಾಸ್ತರರಿಗೆ ನಾನು ಉಪನ್ಯಾಸ ಕೊಡಬೇಕು!" ಎಂದು ಕುಸುಮಾ ನಕ್ಕಳು

"ನಮ್ಮ ಸಾಲೆಗಳಲ್ಲಿಯ ಹಣೆಯಬರಹವೇ ಹೀಗೆ ತಿಳಿದವರಿಗೆ ಕಲಿಸಲು,—ತಿಳಿಯದ ಶಿಕ್ಷಕರು!" ನರಹರಿಯೆಂದ

"ಈ ಮೂರು ಅವಸ್ಥೆಗಳಲ್ಲಿ ನಿನ್ನ ಅವಸ್ಥೆ ಯಾವುದು?" ಎಂದು ತುಂಟತನದ ಕಳೆಯು ಮೊಗದಲ್ಲಿ ಉಕ್ಕುತ್ತಿರಲು ಕುಸುಮಾ ನರಹರಿಯನ್ನು ಕೇಳಿದಳು.

"ಈ ಮೂರನ್ನೂ ಒಳಗೊಂಡ ದತ್ತಾತ್ರೇಯನ ಅವಸ್ಥೆ ನನ್ನದು. ತ್ರಿಮೂರ್ತಿಗಳಲ್ಲಿಯ ಬ್ರಹ್ಮನ ದರ್ಶನವು ಈಗಾಗಿದೆ ಮಹೇಶ್ವರ-ವಿಷ್ಣು ಇವರದು ಇನ್ನೂ ಆಗಬೇಕಾಗಿದೆ!" ಎಂದು ನರಹರಿ ಉತ್ತರ ಕೊಟ್ಟ.

"ಬ್ರಹ್ಮನ ದರ್ಶನವು ಆಗಿದ್ದು ಎಂದಿನಿಂದ?" ಎಂದು ಅದೇ ದನಿಯಲ್ಲಿ ಕುಸುಮಾ ಕೇಳಿದಳು.

"ನಿನ್ನನ್ನು ನೋಡಿದಾರಂಭದಿಂದ" ಎಂದ ನರಹರಿ.

"ಹೀಗೆ ಬ್ರಹ್ಮನನ್ನು ಕಂಡವರು ಒಮ್ಮೆಲೆ ಅವನನ್ನು ತ್ಯಜಿಸಿ ಹೋಗುವದುಂಟೆ?" ಎಂದು ಅಣಕದ ದನಿಯಲ್ಲಿ ಕುಸುಮಾ ಕೇಳಿದಳು.

"ಅದರದೊಂದು ಇತಿಹಾಸವೇ ಇದೆ, ಕುಸುಮಾ! ಆ ವಿಷಯದಲ್ಲಿ ನಿನ್ನೊಡನೆ ಒಮ್ಮೆ ಮಾತಾಡಬೇಕಾಗಿತ್ತು" ಎಂದ ನರಹರಿ.

"ಏನು ಮಾತು?" ಎಂದು ಏನೂ ಅರಿಯದವರಂತೆ ಕುಸುಮಾ ಕೇಳಿದಳು.

"ಇನ್ನು ವಿನೋದ ಸಾಕು. ಗೊತ್ತಿದ್ದೂ ಅಜ್ಞಾನವನ್ನು ನಟಿಸಿದರೆ ಮಾತು ಹೇಗೆ ಸಾಗಬಲ್ಲವು? ನನ್ನ ಪ್ರಶ್ನೆಗೆ ಉತ್ತರ ಕೊಡು." ಎಂದು ನರಹರಿಯು ಗಂಭೀರನಾದ

ಪ್ರತ್ಯುತ್ತರವಾಗಿ ಕುಸುಮಾನೂ ಗಂಭೀರಳಾದಳು. ಆದರೆ ಆ ಗಾಂಭೀರ್ಯವು ಬಹಳ ಹೊತ್ತಿನ ವರೆಗೆ ತಾಳಲಿಲ್ಲ. ಅತಿ ಪ್ರಯಾಸದಿಂದ ನಗೆಯನ್ನು ಬಿಗಿ ಹಿಡಿದ ಅವಳು ಕೊನೆಗೊಮ್ಮೆ ಖೊಳ್ಳನೆ ನಕ್ಕುಬಿಟ್ಟಳು ನರಹರಿಯೂ ಆ ನಗೆಯಲ್ಲಿ ಪಾಲುಗಾರನಾದ. ಬಳಿಕ ನರಹರಿಯೆಂದ: "ನಾನು ಅಂದು ರಾತ್ರಿ ಮೊಗ್ಗಾವಿಯನ್ನು ಬಿಟ್ಟು ನಡೆದಾಗ ನೀನು ಏನು ತಿಳಿದುಕೊಂಡೆ?"

"ಏನು ತಿಳಿದುಕೊಳ್ಳಲಿ? ನನ್ನನ್ನು ಇಷ್ಟು ತವಕದಿಂದ ಕಾಣುತ್ತಿದ್ದ ನರಹರಿ ಹೀಗೆ ಒಮ್ಮೆಲೆ ಭೆಟ್ಟಿಯಾಗದೆ ಹೋದದ್ದು ಹೇಗೆ? ಎಂದು ನಾನು ಕಳವಳಗೊಂಡೆ" ಕುಸುಮಾ ಗಂಭೀರಳಾಗಿ ಹೇಳಿದಳು.

"ಜನರು ನನ್ನ ಮೇಲೆ ಹೊರಿಸಿದ ಅಪವಾದ ನಿಜವಿರಬಹುದೆಂದು ಒಂದು ಕ್ಷಣವಾದರೂ ನಿನಗೆನಿಸಿತೆ?" ನರಹರಿ ಕೇಳಿದ.

"ನೀನು ಹಾಗೆ ಭೆಟ್ಟಿಯಾಗದೆ ಹೋದದ್ದರಿಂದ ನಾನು ದಿಙ್ಮೂಢಳಾದೆ. ಆದರೆ ಇದರಲ್ಲಿ ಬುಡದಲ್ಲಿಯೇ ತಪ್ಪಿದೆಯೆಂದು ನನಗೆ ಹೊಳೆದಿತ್ತು. ಅಪ್ಪನೂ ಈ ಅಭಿಪ್ರಾಯವನ್ನು ಸಮರ್ಥಿಸಿದ ಕೊನೆಗೆ ಈ ಪಾಪವೆಲ್ಲ ರಮಾಬಾಯರ ಕೊರಳಿನ ಸುತ್ತೆಂದು ನಾವು ನಿರ್ಧಾರಕ್ಕೆ ಬಂದೆವು. ಈಗ ಅದು ಜನರಿಗೂ ಗೊತ್ತಾಗುತ್ತಿರುವ ವಿಷಯ" ಎಂದಳು ಕುಸುಮಾ.

"ಅದು ಹೇಗೆ?" ನರಹರಿಯು ತಟಕ್ಕನೆ ಕೇಳಿದ.

"ಸುಬ್ಬಣಾಚಾರ್ಯರು ಈಗ ಮೊಗ್ಗಾವಿಯಲ್ಲಿಯೇ ಮನೆ ಮಾಡಿದ್ದಾರೆ." ಕುಸುಮಾ ಹೇಳಿದಳು.

ನರಹರಿಯ ಹೃದಯದಲ್ಲಿ ಕಳವಳವಾಯಿತು. ಕಳಚಿ ಬೀಳುತ್ತಿರುವ ತನ್ನ ಮನೆಯ ಕಳಸವನ್ನು ಅವನು ಕಣ್ಣಾರೆ ನೋಡಿದ. ಆದರೆ ಆ ಪತನವನ್ನು ತಡೆದು ನಿಲ್ಲಿಸುವ ವಿಷಯದಲ್ಲಿ ಅವನು ಅಸಹಾಯನಾಗಿದ್ದ.

"ನೀನು ಹೋದಾಗ ನನ್ನ ಇತಿಹಾಸವೆಲ್ಲ ಮುಗಿಯಿತೆಂದು ತಿಳಿದಿದ್ದೆ. ನಿನ್ನ ಸುದ್ದಿಗಾಗಿ ಬದುಕುವ ಹಂಬಲವೇ ನನ್ನನ್ನು ಉಳಿಸಿತು." ಕುಸುಮಾ ನಡುಗುವ ದನಿಯಲ್ಲಿ ಹೇಳಿದಳು.

"ಇಷ್ಟು ಬೇಗ ನಾನು ನಿನ್ನನ್ನು ಹೀಗೆ ಕಾಣುವೆನೆಂದು ನನಗೆನಿಸಿರಲಿಲ್ಲ. ದೇಸಾಯರಿಗೆ ನಾವಿಬ್ಬರೂ ಆಜನ್ಮ ಋಣಿ" ನರಹರಿಯೆಂದ.

"ನೀನು ಹೋದ ಅವಧಿಯಲ್ಲಿ ತಾಯಿಯು ನನಗೆ ಕೊಟ್ಟ ತೊಂದರೆ ಯೆಷ್ಟು! ತಂದೆಯವರ ತಲೆಯಲ್ಲಿ ಸಹ ವಿಚಾರ ಸುಳಿದಿತ್ತು,—ಶೀನೂಗೆ ನನ್ನನ್ನು ಕೊಡಬೇಕೆಂದು" ಕುಸುಮಾ ಸಹಜವಾಗಿ ನುಡಿದಳು.

"ಶೀನು?" ಎಂದು ಸಿಡಿಲು ಬಡಿದವರಂತೆ ನರಹರಿ ಕೇಳಿದ. ಅವನಿಗೆ ಬಿದ್ದ ಕನಸು ಮತ್ತೆ ಅವನೆದುರು ಎದ್ದಿತು ಶೀನೂನ ಹೆಸರು ಕೇಳಿದೊಡನೆ ನರಹರಿಗೆ ಇಷ್ಟೊಂದು ಉದ್ವೇಗವಾಗಬಹುದೆಂದು ಕುಸುಮಾನಿಗೆ ಅನಿಸಿರಲಿಲ್ಲ "ಹೌದು, ಆದರೆ ಅದು ಒಂದು ಕ್ಷಣ-ಸುಳಿದ ವಿಚಾರ ಮಾತ್ರ. ಮರುಕ್ಷಣದಲ್ಲಿಯೇ ಅವರು ನನ್ನ ಇಚ್ಛೆಯಂತೆ ನಡೆಯಲು ನಿರ್ಧರಿಸಿದರು" ಎಂದು ಆಕೆ ಹೇಳಿದಳು.

ಶೀನೂನ ಹೆಸರು ಕೇಳಿದೊಡನೆ ಬೇರೆ ವಿಚಾರತರಂಗಗಳು ನರಹರಿಯ ಮನಸ್ಸಿನಲ್ಲೆದ್ದವು. ಹಾಗೆಯೇ ತುಸು ಹೊತ್ತು ಅವನು ಕುಳಿತ.

ನಗೆಮೊಗದಿಂದ ಎದ್ದು ಕುಸುಮಾ "ಇನ್ನು ಚಹಾ ಮಾಡುತ್ತೇನೆ. ತಂದೆಯವರು ಏಳುವ ಹೊತ್ತಾಯಿತು" ಎಂದಳು

"ನಾನೂ ಸಹಾಯಕ್ಕೆ ಬರುತ್ತೇನೆ" ಎಂದು ನರಹರಿ ಏಳುವದರಲ್ಲಿದ್ದ.

"ಬೇಡ, ಇದು ಏನು ನಿನ್ನ ಕೋಣೆಯಲ್ಲ. ಮೇಲಾಗಿ ನೀನು ಸಹಾಯಕ್ಕೆ ಬಂದರೆ ಅಲ್ಲಿಯಂತೆ ಇಲ್ಲಿಯೂ ನನಗೆ ಚಹ ದೊರೆಯಲಿಕ್ಕಿಲ್ಲ!" ಎಂದು ನಗುತ್ತ ಕುಸುಮಾ ಒಳಗೆ ಹೋದಳು.

ಆಕೆ ಹೊರಗೆ ತಂದಿಟ್ಟ ಪುಸ್ತಕಗಳನ್ನೆಲ್ಲ ನೋಡುತ್ತ ನರಹರಿಯು ಅಲ್ಲಿಯೇ ಕುಳಿತ.

ದೇಸಾಯರಿಗೆ ಜಂಪು ಹತ್ತಿದ್ದೇನೋ ನಿಜ. ಆದರೆ ನರಹರಿಯು ಮನೆಗೆ ಬರುವ ಹೊತ್ತಿಗೆ ಅವರಿಗೆ ಎಚ್ಚರಾಗಿತ್ತು. ಕುಸುಮಾ-ನರಹರಿಯರ ಮಾತನ್ನು ಕೇಳುತ್ತ ಅವರು ರಂಗಾಸಾನಿಯ ಕೋಣೆಯಲ್ಲಿಯೇ

ಒರಗಿಕೊಂಡಿದ್ದರು. ಅವರ ಹತ್ತಿರದಲ್ಲಿಯೇ ಸಾನಿಯು ಕುಳಿತಿದ್ದಳು. ಮೊದಲಿನಿಂದ ಕೊನೆಯವರೆಗೆ ನಡೆದ ಸಂಭಾಷಣವನ್ನು ಕೇಳುತ್ತ ಕುಳಿತಿದ್ದ ಅವರಿಬ್ಬರೂ ಕುಸುಮಾ ಒಳಗೆ ಹೋಗಿ ಮಾತು ನಿಂತ ಮೇಲೆ ಒಬ್ಬರನ್ನೊಬ್ಬರು ನೋಡಿ ಅರ್ಥಪೂರ್ಣವಾಗಿ ಮುಗುಳುನಗೆ ನಕ್ಕರು.

"ನಮ್ಮ ಪ್ರೇಮವೇ ಇಲ್ಲಿ ಹೊಸ ಜನ್ಮವೆತ್ತಿದೆ. ಆದರೆ ನಮ್ಮದು ಸಮಾಜಬಾಹಿರವಾಗಿ ಕಾನನಕುಸುಮದಂತೆ ನಿಷ್ಪ್ರಯೋಜಕವಾಗಿದೆ. ಇವರ ಪ್ರೀತಿಯು ಫಲೋನ್ಮುಖವಾಗಲಿ!" ಎಂದು ದೇಸಾಯರು ಉದ್ಗಾರ ತೆಗೆದರು.

"ನನ್ನ ದುರ್ಭಾಗ್ಯ ನನ್ನ ಪಾಲಿಗೆ. ನನ್ನ ಎಲ್ಲ ಭಾಗ್ಯವನ್ನೂ ದೇವರು ಕುಸುಮಕ್ಕನಿಗೆ ಕೊಡಲಿ" ಸಾನಿ ಹೇಳಿದಳು.

---

ಪ್ರಕರಣ ೨೮

## ಜಾನಕಿಬಾಯರ ಸಮಸ್ಯೆ

ಕೇಶವನ ಮದುವೆಯಾದ ಕೆಲವು ದಿನಗಳಲ್ಲಿಯೇ ಮೇನಕಿಯು ಮನೆಗೆ ಬಂದಿದ್ದಳು ಬಂದಂದಿನಿಂದ ಮನೆಯಲ್ಲಿಯ ಪ್ರಭುತ್ವವು ಯಾರದೆಂಬುವದರ ಬಗ್ಗೆ ಎಳ್ಳಷ್ಟು ಸಂದೇಹವುಳಿದಿರಲಿಲ್ಲ. ಕೇಶವನು ಮೇನಕಿಯ ದಾಸಾನುದಾಸನಾಗಿದ್ದ. ಅವನು ಹಾಸಿಗೆಯಲ್ಲಿ ಎಚ್ಚರಾಗುವದು ೯–೧೦ ಗಂಟೆಗೆ. ಎಚ್ಚರಾದೊಡನೆ ಚಹದ ಕಪ್ಪನ್ನು ಕೈಯ್ಯಲ್ಲಿ ಹಿಡಿದುಕೊಂಡು ಕುಲುಕುಲು ನಗುತ್ತ ಮೇನಕಿಯು ನಿಂತುಕೊಂಡಿರುತ್ತಿದ್ದಳು. ಕೇಶವನೇನು ವಿಶ್ವಾಮಿತ್ರನಲ್ಲ ಪಾಮರನವ ವಿಶ್ವಾಮಿತ್ರನ ಪಾಡೇ ನಾಯಿಯ ಪಾಡಾದಾಗ ಕೇಶವನು ಯಾವ ಗಿಡದ ತೊಪ್ಪಲು? ಆ ಮನಮೋಹನ ಮೂರ್ತಿಯೊಂದೇ ಅವನಿಗೆ ಮನೆಯಲ್ಲಿ ಕಾಣುತ್ತಿತ್ತು. ಜಾನಕಿಬಾಯರ ಅಸ್ತಿತ್ವವನ್ನು ಅವನು ಮರೆತುಬಿಟ್ಟಿದ್ದನೆಂದರೂ ಸಲ್ಲುವದು. ಚಹ ಕುಡಿದು ಪೇಟೆಯಲ್ಲಿ ಅತ್ತಿತ್ತ ತಿರುಗಾಡಿ ಬರುವ ಹೊತ್ತಿಗೆ ಸುಮಾರು

ಹನ್ನೆರಡು ಗಂಟೆಯಾಗುತ್ತಿತ್ತು. ಆಗ ಬಿಸಿನೀರು ತೋಡಿಕೊಂಡು ಎಣ್ಣೆಯ ಬಟ್ಟಲವನ್ನಿಟ್ಟುಕೊಂಡು ಕೇಶವನಿಗೆ ಅಭ್ಯಂಗಸ್ನಾನ ಮಾಡಿಸಲು ಮೇನಕೆಯು ಸಿದ್ಧಳಾಗಿರುತ್ತಿದ್ದಳು. ಸ್ನಾನವಾದ ಮೇಲೆ ಊಟಕ್ಕೆ ಅವಳೇ ಬಡಿಸಬೇಕು. ಒಮ್ಮೊಮ್ಮೆ ಮಡಿಯ ತಾಕಲಾಟವಾದರೆ ಕನಿಷ್ಟ ಪಕ್ಷಕ್ಕೆ ಉಪ್ಪು-ತುಪ್ಪ-ಮೊಸರನ್ನಾದರೂ ಮೇನಕಯು ಬಡಿಸಲೇಬೇಕು ಇಲ್ಲದಿದ್ದರೆ ಕೇಶವನಿಗೆ ಊಟ ಹೋಗುತ್ತಿರಲಿಲ್ಲ. ಊಟವಾಗುವಷ್ಟರಲ್ಲಿಯೇ ಮಧ್ಯಾಹ್ನದ ಸಕ್ಕರೆ-ಜಂಪಿಗಾಗಿ ಕೇಶವನಿಗೆಂದು ಹಾಸಿಗೆಯು ಸಿದ್ಧವಾಗಿರುತ್ತಿತ್ತು ಅವನ ಕೈಯಲ್ಲಿ ತಾಂಬೂಲವನ್ನು ಕೊಟ್ಟು ಹಾಸಿಗೆಯ ಮೇಲೆ ಕುಳ್ಳಿರಿಸಿ ನಾಲ್ಕು ನಲುಮೆಯ ಮಾತನಾಡಿ ಅವನ ಹೃದಯವನ್ನು ರಮಿಸಿ ಮೇನಕೆಯು ತನ್ನ ಊಟಕ್ಕೆಂದು ಹೋಗುತ್ತಿದ್ದಳು. ಒಮ್ಮೊಮ್ಮೆ ಮಧ್ಯಾಹ್ನದ ಚಹಕ್ಕಾಗಿ ಭೀಮು ಆಗಲಿ ಇಲ್ಲವೆ ಕೇಶವನ ಊರಿನ ಗೆಳೆಯರಾಗಲಿ ಬಂದಿರುತ್ತಿದ್ದರು ಆಗ ಸಮಯಕ್ಕೆ ಸರಿಯಾಗಿ ವಿಧವಿಧದ ತಿಂಡಿ-ತಿನಿಸುಗಳನ್ನು ಮಾಡುವದರಲ್ಲಿ ಮೇನಕೆಯು ಚತುರಳಾಗಿದ್ದಳು ಆಮೇಲೆ ಮತ್ತೆ ಕೇಶವನ ಸಂಜೆಯ ತಿರುಗಾಟ, ರಾತ್ರಿಯ ಊಟ,—ಹೀಗೆ ಮೊದಲಾಗಿ ದಿನದ ಚಕ್ರ ಉರುಳುತ್ತಿತ್ತು ಎಲ್ಲದರಲ್ಲಿ ಮೇನಕೆಯನ್ನು ಮೀರಿದವರೇ ಇಲ್ಲ ತಾನು ತಿಳಿಯದ ಯೋಗ್ಯತೆಯ ಜೀವವೊಂದನ್ನು ಮದುವೆಯಾಗಿ ಅಗ್ನಿಕುಂಡದಂತಹ ಮನೆಯಲ್ಲಿ ತಂದು ಅವಳನ್ನು ಅನರ್ಥಕ್ಕೆ ಗುರಿಮಾಡಿದ ಕೇಶವನು ಸುಖವೆಂದರೇನೆಂಬುದನ್ನು ಕಂಡಿದ್ದಿಲ್ಲ ಹೀಗಿರುವಾಗ ಮೇನಕೆಯಂತಹ ಸುಖಪ್ರಿಯಳೂ ಅವನ ಮಟ್ಟದವಳೂ ಬಂದು ಸುಖವೇನೆಂಬುದರ ಅನುಭವವನ್ನು ನಿತ್ಯವೂ ಅವನಿಗೆ ಕೊಡುತ್ತಿರುವಾಗ ಕೇಶವನು ಮೇನಕೆಯ ದಾಸಾನುದಾಸನಾಗಿದ್ದು ಆಶ್ಚರ್ಯವಲ್ಲ.

ಆದರೆ ಜಾನಕಿಬಾಯಿಯರೊಡನೆ ಮೇನಕೆಯ ವರ್ತನೆಯು ಇದಕ್ಕೆ ತೀರ ವಿರುದ್ಧವಾಗಿತ್ತು. ಪದ್ಮಾವತಿಯನ್ನು ಎಬ್ಬಿಸುವಂತೆ ಮೇನಕೆಯು ಮನೆಗೆ ಬಂದ ಮರುದಿನ ಇನ್ನೂ ನಸುಕು ಹರಿಯುವದಕ್ಕಿಂತ ಮೊದಲು ಜಾನಕಿಬಾಯಿಯರು ಅವಳನ್ನು ಎಬ್ಬಿಸಲು ಹೋದರು ಕೇಶವನ ಕೋಣೆಯ ಬಾಗಿಲಲ್ಲಿ ನಿಂತು ಕಿರುದನಿಯಲ್ಲಿ. ದೊಡ್ಡ ದನಿಯಲ್ಲಿ, ಚೀರುದನಿಯಲ್ಲಿ, ಅವರು ಒದರಿಯೇ ಒದರಿದರು ಆದರೆ ಯಾರೂ ಎಚ್ಚರಿಯಲಿಲ್ಲ. ಕೇಶವನೇ ಹಾಸಿಗೆಯಲ್ಲಿ ಮಿಸು

ಕಾಡಿ "ಯಾರು? ಏನು?" ಎಂದ. ಆಗ ಮೇನಕಿಯು ದನಿಯೇರಿಸಿ "ಹೊತ್ತಿಲ್ಲದ ಹೊತ್ತಿನ್ಯಾಗ ಈ ಮುದುಕರ ಒದರ್‍ಯಾಟ ಬೇರೆ! ಎರಡನೆ ಕೆಲಸೇನದ ಅವರಿಗೆ! ಇಷ್ಟು ನಡೂ ರಾತ್ರ್ಯಾಗ ಎದ್ದು ಏನು ಛಳಿ ಹತ್ತಿ ಸಾಯಂತೀರೇನು?" ಎಂದು ಗದ್ದರಿಸಿದಳು

ಆ ಗದ್ದರಿಕೆಗೆ ಕೇಶವನು ನಿದ್ದೆ ಹೋದ ಜಾನಕೀಬಾಯರು ಬಾಗಿಲು ತಟ್ಟುವುದನ್ನು ಬಿಟ್ಟು ಹೋಗಿ ಮನೆಯ ಮುಂದಿನ ರಂಗವಲ್ಲಿಯನ್ನು ತಾವೇ ಹಾಕಿದರು. ಹೊಸ ಸೊಸೆಯು ಮನೆಗೆ ಬಂದ ಮೇಲೆ ಈ ಕೆಲಸವು ತಮ್ಮನ್ನು ಬಿಡುವದೆಂದು ತಿಳಿದಿದ್ದ ಅವರಿಗೆ ಈ ವಿಚಾರವು ಬರಿ ಕನಸಾಯಿತು.

ಎದ್ದ ಮೇಲೆ ಕೇಶವನಿಗಾಗಿ ಚಹ ಮಾಡಿ ಮೇನಕಿಯು ಅವನೊಡನೆ ಚಹ ಕುಡಿಯುತ್ತ ಹರಟೆ ಹೊಡೆಯುತ್ತ ಕುಳಿತಳೆಂದರೆ ಒಂದು ತಾಸಾದರೂ ಏಳುತ್ತಿರಲಿಲ್ಲ. ಬಚ್ಚಲೊಲೆ, ಅಡಿಗೆಯ ಒಲೆ,—ಎಲ್ಲ ಒಲೆಗಳನ್ನೂ ಜಾನಕಿ ಬಾಯರೇ ಹೊತ್ತಿಸಬೇಕಾಗುತ್ತಿತ್ತು "ಮುಂಜೇನೆ ಎದ್ದು ಒಲಿ ಹೊತ್ತಿಸ ಲಿಕ್ಕೆ ನಾ ಈ ಮನಿಯೊಳಗ ಕೊಳ್ಳೇ ದೆವ್ವಾಗೇನಿ!" ಎಂದು ಮೇನಕೆಗೆ ಕೇಳು ವಂತೆ ಒಮ್ಮೆ ಜಾನಕಿಬಾಯರೆಂದರು. "ಇನ್ನೂ ಆ ಯೋಗ್ಯತಾ ಬಂದಿಲ್ಲ ನಿಮಗ! ಯಾವಾಗ ಬರತದೋ ದೇವರಿಗೆ ಗೊತ್ತು!" ಎಂದು ತಟ್ಟನೆ ಮೇನಕಿಯು ಉತ್ತರ ಕೊಟ್ಟಿದ್ದಳು. ಅಂದಿದ್ದನ್ನು ಅನಿಸಿಕೊಂಡು ಸುಮ್ಮನೆ ಕೂಡುವ ಪದ್ಮಾವತಿಯಲ್ಲ ಮೇನಕಿ!

ಮೇನಕಿಯು ದಿನಾಲು ಮೈ ತೊಳೆದುಕೊಂಡು ಮಡಿಯಾಗಿ ಮಧ್ಯಾಹ್ನದ ಅಡಿಗೆಯಲ್ಲಿ ತಮಗೆ ನೆರವಾಗಬೇಕೆಂದು ಜಾನಕಿಬಾಯರ ನಿರೀಕ್ಷೆ ಯಾಗಿತ್ತು. ಆದರೆ ಕೇಶವನಿಗೆ ನೀರು ತೋಡುವರಾರು? ಸ್ನಾನಕ್ಕೆ ಹಾಕುವ ರಾರು? ಅದೆಲ್ಲ ಬಗೆಹರಿಯುವುದಿಲ್ಲೆಂದು ಮೇನಕಿಯು ಅತ್ತೆಗೆ ಸ್ಪಷ್ಟವಾಗಿ ಹೇಳಿಬಿಟ್ಟಿದ್ದಳು.

ಹತ್ತಿ ಬತ್ತಿ ಹೊಸೆಯುವುದು, ಮುತ್ತಲೆಲೆ ಹಚ್ಚುವದು, ಮಸಾಲೆ-ಬೇಳೆ ಮಾಡಿಕೊಂಬುವದು,—ಇವೆಲ್ಲ ಇಳಿಹೊತ್ತಿನ ಮೇಲ್ಗೆಲಸಗಳಾಗಿದ್ದವು. ಆದರೆ ಇವಾವೂ ತನಗೆ ಸಾಧ್ಯವಿಲ್ಲವೆಂದು ಮೇನಕಿಯು ಕಿವಿಯ ಮೇಲೆ ಕೈ ಇಟ್ಟುಕೊಂಡಳು. ಕೇಶವನ ಚಹ, ಅವನೊಡನೆ ಹರಟೆ,—ಇವು ಮುಖ್ಯ

ವಾಗಿದ್ದವು. ಮೇನಕಿಯೇನು ಮುತ್ತಲೆಲೆಯನ್ನು ಮದುವೆ ಮಾಡಿಕೊಂಡಿರಲಿಲ್ಲವಲ್ಲ?

ದಿನಾಲು ಸಂಜೆಗೆ ಕೇಶವದೇವರ ಗುಡಿಗೆ ಹೋಗಿ ಬರುವದು ಜಾನಕಿಬಾಯರ ಪರಿಪಾಠವಾಗಿತ್ತು. ಒಂದೆರಡು ಸಲ ಮೇನಕಿಯು ಅವರೊಡನೆ ಗುಡಿಗೆ ಹೋಗಿ ಬಂದಳು. ಆದರೆ ಹಾದಿಯಲ್ಲೆಲ್ಲ ನಿಲ್ಲುವದು, ಭೆಟ್ಟಿಯಾದವರೊಡನೆ ಅವರಿವರ ಬಗ್ಗೆ ಮಾತನಾಡುವದು, ಸುಮ್ಮ ಸುಮ್ಮನೆ ಗುಜು ಗುಜು ಮಾತು,–ಇವೆಲ್ಲಕ್ಕೆ ಕೇಶವದೇವರು ಬರಿ ನಿಮಿತ್ತವಾಗಿದ್ದ. ಅಲ್ಲದೆ ಇನ್ನೊಬ್ಬರೆದುರಿಗೆ ಸೊಸೆಯ ಮೇಲೆ ದರ್ಪವನ್ನು ತೋರಿಸುವದು ಜಾನಕಿಬಾಯರ ರಕ್ತದಲ್ಲಿ ಬೆರೆತ ಗುಣವಾಗಿತ್ತು. ಸರಿ. ಮುಂದೆ 'ನೀವೊಬ್ಬರೆ ಹೋಗಿ ಬರ್ರಿ. ಅಡಿಗೆಗೆ ನನಗೆ ಹೊತ್ತಾಗುತ್ತದೆ. ದಿನಾಲು ಸಂಜೆಗೆ ಈ ಮೆರವಣಿಗೆ ಯಾರಿಗೆ ಬೇಕಾಗಿದೆ?" ಎಂದು ನಿಷ್ಠುರಳಾಗಿ ನುಡಿದು ಮೇನಕಿಯು ಗುಡಿಗೆ ಹೋಗುವದನ್ನು ನಿಲ್ಲಿಸಿದಳು. ಜಾನಕಿಬಾಯರು ಕೇಶವನೆದುರಿಗೆ ದೂರು ಹೇಳದಾಗ: "ಇರ್ಲಿ ಬಿಡವಾ! ಗುಡಿ ಅಂತ ಗುಂಡಾರ ಅಂತ! ಹೆಂಡಂದಿರಿಗೆ ಗಂಡಂದರಽ ದೇವರು! ಇನ್ನೆಲ್ಲಿ ದೇವರನ್ನ ತಂದಿ!" ಎಂದು ಅವನು ಮಾತು ಹಾರಿಸಿ ಬಿಡುತ್ತಿದ್ದ.

ರಾತ್ರಿ ಊಟಕ್ಕೆ ಕೂಡುವಾಗ ತಮಗೆ ಬಡಿಸಿ ಸೊಸೆ ಆಮೇಲೆ ಕೂಡಬೇಕೆಂದು ಜಾನಕಿಬಾಯರ ಅಪೇಕ್ಷೆಯಾಗಿತ್ತು ಮೇನಕಿಯು ಇದಾವುದನ್ನೂ ಹಚ್ಚಿಕೊಳ್ಳಲಿಲ್ಲ ಎರಡೂ ಎಲೆ ಬಡಿಸಿ ಮೇಲೆ ಬೇಕಾಗುವದನ್ನು ಹತ್ತಿರದಲ್ಲಿಯೇ ಇಟ್ಟು ತಾನು ಎಲೆಯ ಮೇಲೆ ಕೂತು "ಊಟಕ್ಕೆ ಬರ್ರಿ!" ಎಂದು ಅತ್ತೆಯವರನ್ನು ಕರೆಯುತ್ತಿದ್ದಳು ಇದು ಅಸಂಬದ್ಧವೆಂದು ಒಂದೆರಡು ಸಲ ಜಾನಕಿಬಾಯರು ಹೇಳಿ ನೋಡಿದರು ಆದರೆ ಮೇನಕಿಯ ಉತ್ತರವು ಸಿದ್ಧವಾಗಿಯೇ ಇತ್ತು." ಯಾಕೆ? ನನ್ನೊಡನೆ ಊಟ ಮಾಡಲು ಮಾನ ಸಾಲುವದಿಲ್ಲವೇನು? ಮುದುಕರಿಗೆ ವೇಳೆಯ ಕಲ್ಪನೆಯೇ ಇಲ್ಲ! ಅರ್ಧ ಗಂಟೆ ಹೊತ್ತು ವ್ಯರ್ಥ ಹೋಗುವದಲ್ಲ!" ಎಂದಳು ಮೇನಕಿ. ಜಾನಕಿಬಾಯರು ನಿರುಪಾಯರಾದರು. ಮುಂದೆ ತಮ್ಮೆಲೆಯನ್ನು ತಾವೇ ಬಡಿಸಿಕೊಳ್ಳುವ ರೂಢಿಯನ್ನು ಅವರಿಟ್ಟರು. ಬಡಿಸಿಕೊಂಡರೆ ಬಡಿಸಿಕೊಂಡಿರೆಂದು ಮೇನಕಿಯು ಸುಮ್ಮನಿದ್ದಳು.

ಒಟ್ಟಿನ ಮೇಲೆ ಜಾನಕಿಬಾಯರಿಗೆ ಸೋಜು ಬಂದಿತ್ತು. ಗಂಡನನ್ನು ತಿರಸ್ಕರಿಸಿದ್ದ ಅವರು ಮಗನೊಡನೆ ಹೊಂದಿಕೊಂಡಿರಬೇಕೆಂದರೆ,—ಈ ಮೇನಕಿ ಅಡ್ಡಬರುತ್ತಿದ್ದಳು; ಕೇಶವನೆದುರಿಗೆ ಅವರು ಮೂಗನ್ನು ಸಹ ತಿಕ್ಕಬಹುದಾಗಿತ್ತು. ಆದರೆ ಈ ಮೇನಕಿ,—ಸಾಧ್ಯವಿದ್ದರೆ ಅದೆಂದಿಗೋ ಅವಳ ಮೂಗನ್ನು ಕೊಯ್ದು ಅವರು ಅವಳ ಕೈಯಲ್ಲಿ ಕೊಡುತ್ತಿದ್ದರು ಒಂದು ದಿನ ಒಂದು ಪ್ರಸಂಗ ನಡೆಯಿತು. ಮೇನಕಿಯು ಊಟಕ್ಕೆ ಕೂತಾಗ ಬೆಕ್ಕು ಬಂದು ಅವಳ ಮೊಸರನ್ನಕ್ಕೆ ಬಾಯಿ ಹಾಕಿತು. ನೀರಿನ ಥಾಲಿಯಿಂದ ಅದರ ತಲೆಗೆ ಮೇನಕಿಯು ಬಲವಾಗಿ ಏಟು ಕೊಟ್ಟಳು ಕಣ್ಣಿಗೆ ಕತ್ತಲುಗೂಡಿಸಿದಂತಾಗಿ ಎಂತಹ ಮಹತ್ಪಾಪವನ್ನು ಮಾಡುತ್ತೇನೆಂಬುದರ ಅರಿವಿಲ್ಲದೆ ಆ ಬೆಕ್ಕು ಜಾನಕಿಬಾಯರ ಎಲೆಯೊಳಗಿಂದ ಹಾಯ್ದು ಓಡಿ ಹೋಯಿತು ಜಾನಕಿಬಾಯರು ಊಟ ಬಿಟ್ಟೆದ್ದು ಮುಸುರೆಗೈಯಿಂದ ಕೇಶವನ ಕೋಣೆಗೆ ಹೋಗಿ "ಕೇಶವಾ! ನನಗ ಈ ಮನ್ಯಾಗ ಇನ್ನ ಇರಲಿಕ್ಕೆ ಆಗೂದುಲ್ಲ ಇಷ್ಟು ದಿನಾ ಸುಮ್ಮನಿದ್ದೆ ನನಗ ಊಟಕ್ಕ ಬಡಿಸಿದರ ನಿನ್ನ ಹೆಂಡತಿ ಕೈ ಸವೆತಾವ! ಅದು ಹೋಗಲಿ ಸಾಸ್ಗ ಬಡಿಸಿಕೊಂಡು ಕೂತರ ಬೆಕ್ಕಿನ್ನ ಬ್ಯಾರೆ ಹೊಡೆದು ನನ್ನ ಎಲ್ಯಾಗ ಹಾಯಿಸತಾಳ, ನಾ ಅರಹೊಟ್ಟೀಲೆ ಏಳಬೇಕು ಅಂತ!" ಎಂದು ಅಳಹತ್ತಿದರು

ಮೇನಕಿ ಒಳಗೆ ಸುಮ್ಮನೆ ತನ್ನ ಊಟವನ್ನು ಸಾಗಿಸಿದಳು. ಕೇಶವನನ್ನು ಪರೀಕ್ಷಿಸಬೇಕೆಂದು ಅವಳು ಮನಸ್ಸಿನಲ್ಲಿಯೇ ಅಂದುಕೊಂಡಿರಬೇಕು. ಅಡುಮನೆಯ ಕಡೆಗೆ ನೋಡುತ್ತ ಕೇಶವ ಹೇಳಿದ: "ಅವ್ವಾ,—ಬೇಕಂತ ಇನ್ನೊಬ್ಬರೆಲಿಯೊಳಗಿಂದ ಬೆಕ್ಕು ಯಾರು ಹಾಯಿಸತಾರ? ಆ ಬೆಕ್ಕಿಗೇನು ಸ್ವಂತ ಬುದ್ಧಿ ಇರೂದುಲ್ಲ? ಮದುವಿ ಆಗೋದಕಿಂತಾ ಮುಂಚೆ ನೀ ಏನು ವಚನಾ ಕೊಟ್ಟೀ ನೆನಪಿಡು! ಮತ್ತ ಮೊದಲಿನ್ಹಂಗ ಮನಿ ನರಕಾಗಬೇಕಂತೀ ಏನು?"

ಹೀಗೆ ಮಾತು ಮಾತಿಗೆ ಜಾನಕಿಬಾಯರು ಭೂತಕಾಲದಲ್ಲಿ ತೋರಿಸಿದ ಪರಾಕ್ರಮದ ಭೂತವು ಥಿಗ್ಗನೆ ಅವರೆದುರಿಗೆ ಬಂದು ನಿಲ್ಲುತ್ತಿತ್ತು. "ಆಗಲಿ ಬಿಡಪಾ! ನನ್ನ ದೈವ ಖೊಟ್ಟಿ ಇದ್ದರ ನೀ ಏನು ಮಾಡೀ!" ಎಂದು ಅಳುತ್ತ ಹೋಗಿ ಕೈ ತೊಳೆದುಕೊಂಡು ಆ ರಾತ್ರಿ ಊಟವಿಲ್ಲದೆ ಜಾನಕಿಬಾಯರು ಮಲಗಿಕೊಂಡುಬಿಟ್ಟರು.

ದಿನಗಳು ಕಳೆದ ಹಾಗೆ ಇದೊಂದು ಅವರಿಗೆ ಕೂಟಪ್ರಶ್ನೆಯಾಯಿತು. ಕ್ರಮೇಣ ದುಡಿಯುವ ಆಳಲ್ಲದೆ ಮನೆಯಲ್ಲಿ ತಮಗೆ ಬೇರೆ ಸ್ಥಾನವಿಲ್ಲೆಂದು ಅವರಿಗೆನಿಸತೊಡಗಿತು. ಆದರೆ ಮಾಡುವದೇನು? ದಾರಿಯಾವುದು ಹೊರಗೆ? ಈಗಿನಂತೆ ಅವರ ಸ್ವಾಭಿಮಾನಕ್ಕೆ ಅದೆಂದಿಗೂ ಕುಂದು ಬಂದಿದ್ದಿಲ್ಲ ಒಳಗಿಂದೊಳಗೇ ಕುದ್ದು ಕುದ್ದು ಜಾನಕಿಬಾಯರು ಸಣ್ಣಗಾಗುತ್ತಿದ್ದರು ಒಂದೆರಡು ಸಲ ಸಂಜೆಗೆ ಗುಡಿಗೆ ಹೋಗುವಾಗ ಹಾದಿಯಲ್ಲಿ ಅವರಿಗೆ ಸುಬ್ಬಣಾ ಚಾರ್ಯರ ಭೆಟ್ಟಿಯಾಗಿತ್ತು. ಸುಬ್ಬಣಾಚಾರ್ಯರು ಮೊಗ್ಗಾವಿಯಲ್ಲಿ ಮನೆ ಮಾಡಿದ್ದು, ಪೂಜೆಗೆಂದು ರಮಾಬಾಯರ ಮನೆಗೆ ಅವರು ಬರುತ್ತಿರುವದು,– ಕಣ್ಣಲ್ಲಿ ಕಣ್ಣಿಟ್ಟು ನೋಡುವ ಅವರಿಗೆ ಇವೆಲ್ಲ ಗೊತ್ತಾಗಿದ್ದವು. ಮೊದಲಿ ನಂತೆ ತಮ್ಮ ಸ್ಥಿತಿಯಿದ್ದರೆ ಯಾವುದಾದರೊಂದು ವ್ಯಂಗ್ಯೋಕ್ತಿಯಿಂದ ಅವರು ಆಚಾರ್ಯರ ಮನಸ್ಸನ್ನು ನೋಯಿಸದೆ ಬಿಡುತ್ತಿರಲಿಲ್ಲ. ಆದರೆ ಈಗ ಆಚಾ ರ್ಯರು ಮರುಸವಾಲು ಹಾಕಿದರೆ? ಪುಣೆಗೆ ನಾಸಿಯೊಡನೆ ಹೋದ ಗಂಡ ನನ್ನು ಹತ್ತಿರ ಇಟ್ಟುಕೊಳ್ಳುವ ಗುಣವಿಲ್ಲವೆಂದು ಅವರು ನುಡಿದರೆ? ಗುಡಿಗೆ ಹೋಗುವಾಗ ಸೊಸೆಯೇಕೆ ಜೊತೆಗಿಲ್ಲವೆಂದು ಅವರು ಕೇಳಿದರೆ? ಆಗ ರಸ್ತೆ ಯಲ್ಲಿಯೇ ತಮ್ಮ ಅಪಮಾನವಾಗುವದಲ್ಲ? ಆದಕ್ಕಾಗಿ ಜಾನಕಿಬಾಯರು ಆಚಾರ್ಯರನ್ನು ಮಾತಾಡಿಸದೆ ಸುಮ್ಮನೆ ಮುಂದೆ ಸಾಗಿದ್ದರು. ಈ ಹೆಣ್ಣು ಮಗಳನ್ನು ತಡವುವದು ತರವಲ್ಲವೆಂದು ತಿಳಿದ ಆಚಾರ್ಯರು ಜಾನಕಿಬಾಯ ರನ್ನು ನೋಡಿದರೂ ನೋಡದಂತೆ ಮುಂದೆ ನಡೆದರು ಹೀಗೆ ಮನೆಯ ಒಳಗೂ ಹೊರಗೂ ಸೋಲು ಜಾನಕಿಬಾಯರ ಬೆನ್ನನ್ನು ಒಂದೇ ಸಮನೆ ಹತ್ತಿತ್ತು.

---

## ಪ್ರಕರಣ ೫೯

## ಪುನರಾಗಮನ

ಅಂದು ಮೆರವಣಿಗೆಯಲ್ಲಿ ಶೀನು ಕುಸಮಾನನ್ನು ನೋಡಿದಾಗಿನಿಂದ ಅವನ ಆಂತರಿಕ ಜೀವನದಲ್ಲಿ ವಿಲಕ್ಷಣವಾದ ಆಂದೋಲನವೆದ್ದಿತ್ತು. ಆದಕ್ಕೂ

ಮೊದಲು ಕುಸುಮಾನನ್ನು ಅವನು ಅನೇಕ ಸಲ ನೋಡಿದ್ದ. ಆದರೆ ಕುಸುಮಾ ಈಗಿನಂತೆ ಬೆಳೆದ ಹುಡಿಗೆಯಾಗಿರಲಿಲ್ಲ. ಈಗ ಅವಳ ಮುಖ ವನ್ನು ತುಂಬಿದ ದಿವ್ಯ ಸೌಂದರ್ಯವು ಆಗ ಇನ್ನೂ ಮೊಗ್ಗೆಯ ಸ್ಥಿತಿಯಲ್ಲಿತ್ತು. ಮೆರವಣಿಗೆಯ ಆ ಕುಸುಮಾನನ್ನು ಶೀನು ಮರೆಯುವದು ಸಾಧ್ಯವಿರಲಿಲ್ಲ.

ದೇಸಾಯರ ತಲೆಯಲ್ಲಿ ಅವನ ಬಗ್ಗೆ ಹೊಳೆದ ಕಲ್ಪನೆಗಳ ವಿಚಾರವು ಶೀನೂಗೆ ಇರಲಿಲ್ಲ. ಅವನಿಗೆ ಸಹಜವಾಗಿಯೇ ಅನಿಸಿತು,—ದೇಸಾಯರು ಕುಸುಮಾನಿಗೆ ತನ್ನನ್ನು ವರನಾಗಿ ಆರಿಸಬಾರದೇಕೆ? ಈ ವಿಷಯದಲ್ಲಿ ತಂದೆ ಯವರ ಸಲಹೆಯನ್ನೂ ಪಡೆಯಬೇಕೆಂದು ಅವನಿಗೆ ಹೊಳೆಯಿತು. ಆದರೆ ಇಷ್ಟರಲ್ಲಿಯೇ ದೇಸಾಯರು ಕುಸುಮಾನ ಮುಂದಿನ ವಿದ್ಯಾಭ್ಯಾಸಕ್ಕಾಗಿ ಪುಣೆ ಯಲ್ಲಿ ಮನೆ ಮಾಡುವರೆಂಬ ಸುದ್ದಿಯು ಸತ್ಯಸ್ವರೂಪವನ್ನು ತಾಳಿತು. ಕೇಶ ವನ ಮದುವೆಯಾದೊಡನೆ ದೇಸಾಯರು ಹೊರಟೇ ನಿಂತರು ಶೀನೂನ ಯಾವ ವಿಚಾರಗಳ ನಿಷ್ಕರ್ಷೆಗೂ ಆಸ್ಪದ ಸಿಗಲಿಲ್ಲ. ಹೇಗಿದ್ದರೂ ದೇಸಾಯಿ ಹಾಗೂ ಕುಸುಮಾ ಪುಣೆಯಲ್ಲಿಯೇ ಇರುವರಲ್ಲ! ಅಲ್ಲಿಯೇ ತನ್ನ ದೈವವನ್ನು ಪರೀಕ್ಷಿಸಿದರಾಯಿತೆಂದು ಶೀನು ಸಮಾಧಾನ ಹಚ್ಚಿಕೊಂಡ. ಹಚ್ಚಿ ಕೊಂಡು, ತನ್ನ ಪರೀಕ್ಷೆಯ ಪರಿಣಾಮ ಯಾವಾಗ ತಿಳಿಯುವದೋ ತಾನು ಪುಣೆಗೆ ಯಾವಾಗ ಹೋಗುವೆನೋ ಎಂಬುದರ ಹಾದಿಯನ್ನೇ ನೋಡುತ್ತ ಕುಳಿತ.

ಆಸೆ ಹಿಡಿಯಲು ಶೀನೂಗೆ ಒಂದು ಪುಟ್ಟ ಕಾರಣವೂ ದೊರಕಿತು. ದೇಸಾ ಯರು ಪುಣೆಗೆ ಹೊರಟು ನಿಂತಾಗ ಅದೇ ಸಮಯದಲ್ಲಿ ಸಹಜವಾಗಿ ಎನ್ನು ವಂತೆ ಶೀನು ಬಸ್ಸು ನಿಲ್ದಾಣಕ್ಕೆ ಹೋಗಿದ್ದ. ಅಲ್ಲಿ ಭೆಟ್ಟಿಯಾದ ದೇಸಾಯರು "ಇನ್ನೇನಪ್ಪಾ, ಶೀನೂ; ನಾವೂ ಪುಣೆಯ ರಹವಾಸಿಗಳಾಗುತ್ತೇವೆ! ಅಲ್ಲಿ ಮೇಲಿಂದ ಮೇಲೆ ಭೆಟ್ಟಿಯಾಗುವದು. ಸೂಟಿ ಮುಗಿದು ಬಂದ ಮೇಲೆ ನಿಮ್ಮ ಕಾಲೇಜನ್ನಷ್ಟು ನನಗೆ ತೋರಿಸು!" ಎಂದಿದ್ದರು. "ಬರಿ ನಾ ತೋರಿಸುವ ದೇಕೆ? ಇನ್ನು ಮೇಲೆ ಮೆಟ್ರಿಕ್ ಆಗಿ ಕುಸುಮಾ ಕಾಲೇಜಿಗೆ ಬರುತ್ತಾಳಲ್ಲ. ಆಕೆಯ ಪ್ರವೇಶದ ಸಲುವಾಗಿ ನೀವೂ ಆಕೆಯೊಡನೆ ಕಾಲೇಜಿಗೆ ಬಂದೇ ಬರುವಿರಿ!" ಎಂದು ನಗುತ್ತ ನುಡಿದು ಶೀನು ಕಡೆಗಣ್ಣಿನಿಂದ ಕುಸುಮಾನ ಕಡೆಗೆ ನೋಡಿದ್ದ. ಕುಸುಮಾ ಪ್ರತ್ಯುತ್ತರವಾಗಿ ಮುಗುಳುನಗೆ

ನಕ್ಕಿದ್ದಳು. ಆ ನಗೆಯೇ ಶೀನೂನ ಪ್ರತೀಕ್ಷೆಯ ಸಭೋಮಂಡಲದಲ್ಲಿ ಮಿನು ಗುವ ಕಿರುತಾರೆಯಾಗಿತ್ತು.

ಈ ಮಧ್ಯೆ ಇನ್ನೊಂದು ವಿಚಾರವು ಶೀನೂನನ್ನು ಗಾಸಿಗೊಳಿಸಿತ್ತು. ಈ ವಿಷಯದಲ್ಲಿ ನರಹರಿಯನ್ನು ಕುರಿತು ಆದ ಬೆಳುವಣಿಗೆಗಳು ಅವನಿಗೆ ಗೊತ್ತಿರಲಿಲ್ಲ. ಮೊದಲಿನಿಂದ ಕುಸುಮಾನನ್ನು ಗೌರವಪೂರ್ವಕವಾಗಿ ನರ ಹರಿಯು ಕಾಣುತ್ತಿರುವನೆಂಬುದು ಶೀನೂಗೆ ಗೊತ್ತಿತ್ತು. ಮೇಲಾಗಿ ಕುಸು ಮಾನ ಬಗ್ಗೆ ಒಂದೆರಡು ಸಲ ಅವರು ಮಾತನಾಡಿದ್ದರು. ಈಗ ಕುಸುಮಾ ನನ್ನು ನರಹರಿಯೂ ಪ್ರೀತಿಸಿದರೆ? ಇಲ್ಲವೆ ಪ್ರೀತಿಸುತ್ತಿದ್ದರೆ? ಆಗ ಸ್ನೇಹಕ್ಕೂ ಪ್ರೇಮಕ್ಕೂ ತನ್ನ ಜೀವನದಲ್ಲಿ ಒಂದು ಬಗೆಯ ವಿರೋಧವು ಪ್ರಾರಂಭವಾಗಬಹುದಲ್ಲವೆ? ಆಗೇನು ಮಾಡಬೇಕು? ಈ ಜಟಿಲ ಸಮಸ್ಯೆಯ ಉತ್ತರವೇ ಶೀನೂಗೆ ದೊರಕಿದ್ದಿಲ್ಲ. ಆ ಸಮಸ್ಯೆಯು ಕಣ್ಣೆದುರಿಗೆ ಒಂದಷ್ಟು ಸಲ ಶೀನು ಅದನ್ನು ಮುಂದೂಡುತ್ತಿದ್ದ.

ಪರೀಕ್ಷೆಯ ಪರಿಣಾಮವು ತಿಳಿಯುವದಕ್ಕಿಂತ ಮೊದಲು ಸಹ ಪುಣೆಗೆ ಹೋಗಬೇಕೆಂದು ಸೀನು ಹಾತೊರೆದ. ಆದರೆ ಗಣಪತರಾಯರ ಹಾಗು ಮನೆ ಯಲ್ಲಿ ಉಳಿದವರ ಆಗ್ರಹಕ್ಕಾಗಿ ಅವನು ನಿಂತುಕೊಂಡ.

ತಾನು ಪರೀಕ್ಷೆಯಲ್ಲಿ ಎರಡನೆಯ ತರಗತಿಯಲ್ಲಿ ಪಾಸಾಗಿರುವೆನೆಂದು ತಿಳಿದ ಕೂಡಲೆ ನಿಜವಾಗಿ ಅವನಿಗೆ ಆನಂದವಾಯಿತು. ಪಾಟಣಕರನು ಮೊದಲನೆಯ ವರ್ಗದಲ್ಲಿ ಬಂದಿದ್ದ. ಕುಡಚಿಯೂ ಕುಮಾರಿ ಪಂಡಿತಳೂ ರಾಮಗಿರಿಯೂ ಪಾಸಾಗಿದ್ದರು ಮಗನ ಪ್ರಗತಿಯಿಂದಾದ ಸಂತೋಷದ ಕುರುಹೆಂದು ಗಣಪತರಾಯರು ಊರಲ್ಲಿಯ ಸ್ನೇಹಿತರಿಗೆಲ್ಲ 'ಫೇಡೆ' ಹಂಚಿ ದರು. ಮತ್ತೆ ಅಭ್ಯಾಸವನ್ನು ಮುಂದುವರಿಸಲು ಶುಭ ಮುಹೂರ್ತದಲ್ಲಿ ಶೀನು ಪುಣೆಗೆ ಪಯಣ ಬೆಳೆಸಿದ.

ಶೀನು ಹೊರಡುವ ಪೂರ್ವದಲ್ಲಿ ನರಹರಿಗೆ ಪತ್ರ ಬರೆದಿದ್ದ. ಇಷ್ಟು ದಿನ ಬರೆಯದೆ ಇರುವ ಕಾರಣ ಕೇವಲ ದೇಹದ ಹಾಗು ಮನಸ್ಸಿನ ಆಲಸ್ಯವೆಂದು ಸೂಚಿಸಿ ತಾನು ಪುಣೆಗೆ ಬರುವ ದಿನವನ್ನು ತಿಳಿಸಿದ್ದ. ಅವನು ಹೇಳಿದಂತೆ ನರಹರಿಯು ಅವನಿಗಾಗಿ ತನ್ನ ಕೋಣೆಯ ಹತ್ತಿರದಲ್ಲಿಯೇ ವಸತಿಗೃಹದಲ್ಲಿ ಒಂದು ಕೋಣೆಯನ್ನು ಕಾಯ್ದಿಡುವ ವ್ಯವಸ್ಥೆ ಮಾಡಿದ್ದ. ಪುಣೆಯ ನಿಲ್ದಾನೆ

ಯನ್ನು ಗಾಡಿ ಮುಟ್ಟಿದಾಗ ಶುದ್ಧಾಂತಃಕರಣದಿಂದ ಗೆಳೆಯರು ಭೆಟ್ಟಿಯಾದರು. ಪುಣೆ--ಮೊಗ್ಗಾವಿಯಲ್ಲಿಯ ಸುದ್ದಿ-ಸುಧಾರಣೆಗಳನ್ನು ಚರ್ಚಿಸಿದರು. ಆದರೆ ಕುಸುಮಾ-ದೇಸಾಯರ ವಿಷಯದಲ್ಲಿ ಒಬ್ಬರೂ ಚಕಾರ ಶಬ್ದವನ್ನು ನುಡಿಯಲಿಲ್ಲ.

ಅದೇ ಗಾಡಿಯಿಂದ ಕುಮಾರಿ ಪಂಡಿತಳೂ ಕುಡಚಿಯೂ ಇಳಿದರು ಕುಮಾರಿಯು ಅರ್ಥಾತ್ ಹೆಣ್ಣುಮಕ್ಕಳ ಇಂಟರು ಡಬ್ಬಿಯಲ್ಲಿಯೇ ಕುಳಿತಿದ್ದಳು. ಕುಡಚಿಯು ಅದರ ಹತ್ತಿರದ ಇಂಟರನ್ನು ಹಿಡಿದಿದ್ದ. ಸೂಟಿಯಲ್ಲಿ ಬಹುತೇಕ ಕುಮಾರಿಯು ಖಾಸ್‌ಗಾಂವಿಯಲ್ಲಿಯೇ ತಂದೆಯವರೊಡನಿದ್ದಳು. ನಾಲ್ಕೈದು ದಿನ ಮಾತ್ರ ತಂದೆಯೂ ಆಕೆಯೂ ಕೂಡಿ ಮಹಾಬಳೇಶ್ವರಕ್ಕೆ ಹೋಗಿ ಬಂದಿದ್ದರು ಕುಮಾರಿಯ ಸೂಟಿಯು ಹಾ! ಹಾ! ಎನ್ನುವಷ್ಟರಲ್ಲಿ ಕಳೆದುಹೋಗಿತ್ತು ಕುದುರೆಯ ಸವಾರಿ, ತೋಟದ ನಿರೀಕ್ಷೆ, ತಂದೆಯವರಿಗೆ ಯಾವುದಾದರೊಂದು ಕಾದಂಬರಿಯನ್ನು ಓದುವುದು, ಗೆಳತಿಯರಿಗೆ ಪತ್ರ ಬರೆಯುವದು,—ಎರಡು ತಿಂಗಳು ಇಷ್ಟೆಲ್ಲ ಕೆಲಸಕ್ಕೆ ಸಾಕಾಗದೆ ಹೋಗಿದ್ದವು ಪರೀಕ್ಷೆಯ ಪರಿಣಾಮ ತಿಳಿದ ಮೇಲಂತೂ ಆನಂದದಲ್ಲಿ ಒಂದು ದಿನವು ಒಂದು ಗಳಿಗೆಯಾಯಿತು 'ಮಾಂಸಿ'ಯಾದ ವಿಠೂಬಾಯರಿಗೆ ಜೀವನದಲ್ಲಿ ಏನು ಸುಖವಿರಬೇಕು? ಪ್ರಮೀಲೆಯು ಪರೀಕ್ಷೆಯಲ್ಲಿ ಪಾಸಾಗಿದ್ದೇ ಒಂದು ಸಂತೋಷ. ಪಂಡಿತರ ಸಂತೋಷದಲ್ಲಿ ಅವರೂ ಪಾಲುಗಾರರಾದರು ಪಂಡಿತರಿಗೆ ಒಂದು ಪ್ರಶ್ನೆ ಬಿದ್ದಿತ್ತು,-ಪ್ರಮೀಲೆಯ ಮದುವೆಯನ್ನು ಯಾವಾಗ ಮಾಡಬೇಕು? ಈಗ ಮಾಡುವದೇ ವಿಹಿತವೆಂದು ಅವರಿಗೆ ತೋರಿತು. ಆದರೆ ಬಿ ಎ. ಅಭ್ಯಾಸವನ್ನು ತಾನು ಮುಂದುವರಿಸಲೇಬೇಕೆಂಬ ಪ್ರಮೀಲೆಯ ಹಟದ ಮುಂದೆ ಅವರು ತಮ್ಮ ಅಭಿಪ್ರಾಯವನ್ನು ಬದಲಿಸಬೇಕಾಯಿತು.

ಅದೇನು ಕಾರಣವೋ ಏನೋ! ನರಹರಿಯು ಮೇಲಿಂದ ಮೇಲೆ ಪ್ರಮೀಲೆಯ ವಿಚಾರಪಥದಲ್ಲಿ ಸುಳಿಯುತ್ತಿದ್ದ. ಅವನ ಬಗ್ಗೆ ಆಕೆಗೆ ವಿಲಕ್ಷಣ ಪ್ರೀತಿಯುಂಟಾಗಿತ್ತು. ಧ್ಯೇಯದ ಸಮರ್ಥನೆಗಾಗಿ ಮನೆ ಬಿಟ್ಟು ಹೊರ ಬೀಳುವ ಧೈರ್ಯವಿದ್ದವ, ಹೊರಬಿದ್ದು ಸಾಧುಸಂತರೊಡನೆ ವೇಳೆಯನ್ನು ಕಳೆಯಬಲ್ಲ ಆದರ್ಶವಾದಿ, ಹೀಗಿದ್ದರೂ ಸ್ಕಾಲರ್, ಉತ್ತಮ ಭಾಷಣಕಾರ, ವಿನಯಶಾಲಿ, ಐ. ಸಿ ಎಸ್. ಗೆ ಹೋದರೆ ನಿಶ್ಚಯವಾಗಿ ಪಾಸಾಗಿ ಬರತಕ್ಕವ!

ಇನ್ನೇನು ಬೇಕು? ನರಹರಿಯ ನಿರ್ವ್ಯಾಜವಾದ ಸಹೃದಯತೆಯು ಪಡು ವಣದ ಸಂಸ್ಕೃತಿಗೆ ಮನಸೋತಿದ್ದ ಪ್ರಮೀಲೆಯನ್ನು ಮೋಹಿಸಿತ್ತು. ಅವಳ ಹಾದಿಯಲ್ಲಿಯ ಒಂದೇ ಒಂದು ಆತಂಕವೆಂದರೆ ನರಹರಿಯು ದೇಶಸ್ಥ, ಕನ್ನಡಸ್ಥ. ಆದರೆ ತನ್ನ ತಂದೆಯವರಿಗೆ ಈ ಕಾರಣವು ಕ್ಷುಲ್ಲಕವೆನಿಸುವದೆಂಬುದು ಪ್ರಮೀ ಲೆಗೆ ಗೊತ್ತಿತ್ತು. ದಿನದಿನಕ್ಕೆ ನರಹರಿಯ ವಿಷಯದಲ್ಲಿಯ ಅವಳ ಆಸಕ್ತಿಯು ಹೆಚ್ಚಿತು ಒಂದು ದಿನ ಮಾರುತಿಯೊಡನೆ ತಮ್ಮ ತೋಟಕ್ಕೆ ಹೋಗಿ ಪ್ರಮೀ ಲೆಯು ಒಂದು ಮರದ ನೆಳಲಿನಲ್ಲಿ ವಿಚಾರ ಮಾಡುತ್ತ ಕುಳಿತಿದ್ದಳು. ತನ್ನ ಬಾಳುವೆಯ ಐತಿಹ್ಯವನ್ನು ಪರೀಕ್ಷಿಸುತ್ತಿರುವಾಗ ಅವಳಿಗೆ ದುಃಖವಾಯಿತು. ತಾಯಿಯಿಲ್ಲದ ಹುಡಿಗೆ ತಾನು. ತನ್ನ ಸಲುವಾಗಿ ತಂದೆಯವರು ಎಷ್ಟು ಕಷ್ಟಪಟ್ಟಿದ್ದರು! ಈಗ ತನ್ನ ಮದುವೆಯ ವಿಚಾರದಲ್ಲಿ ಎಷ್ಟೊಂದು ಚಿಂತೆಗೆ ಒಳಗಾಗಿದ್ದರು! ತಂದೆಯ 'ಅಚ್ಚಿ'ಯಲ್ಲಿ—ಅಕ್ಕರೆಯಲ್ಲಿ—ಬೆಳೆದ ಹುಡಿಗೆ ತಾನು, ತಾಯಿಯಿದ್ದ ಹುಡಿಗೆಗೆ ಬರುವ ನಾಜೂಕು ತನ್ನಲ್ಲಿರಲಿಲ್ಲ ಅದಕ್ಕೆ ವಿರುದ್ಧವಾಗಿ ಗಂಡುಮಗನಂತೆ ಆಕೆ ಮನೆಯಲ್ಲಿ ಬೆಳೆದಿದ್ದಳು ತಂದೆಯ ಅಕ್ಕರೆಯ ಮೂಲಕ ಇಲ್ಲದ ಹಟಮಾರಿತನವು ಅವಳಲ್ಲಿ ಮನೆಮಾಡಿ ಕೊಂಡಿತ್ತು. ಅವಳಂದಿದ್ದೇ ಪೂರ್ವವೆಂಬಂತೆ ಪ್ರಮೀಲೆಯು ಹೇಳಿದ ಎಲ್ಲ ಮಾತುಗಳನ್ನು ಕೇಶವರಾಯರು ನಡೆಯಿಸಿಕೊಂಡು ಬಂದಿದ್ದರು ತಂದೆಯ ಶಿಕ್ಷಣಪ್ರಿಯತೆಯ ಮೂಲಕ ಅವಳಿಗೆ ಉತ್ತಮ ಶಿಕ್ಷಣವು ದೊರಕಿತ್ತು. ಆದರೆ... ಈಗ....ಈ ಎಲ್ಲ ಗುಣಸಮುಚ್ಚಯವನ್ನು ಯಾರಿಗೆ ಒಪ್ಪಿಸಬೇಕು? ತನ್ನ ವರ ಯಾರು?

ಸಂಜೆಗೆ ಸಹಜವಾಗಿ ತಿರುಗಾಡುತ್ತ ಬಂದನೋ ಏನೋ ಎನ್ನುವ ಹಾಗೆ ಕುಡಚಿಯು ಆ ವೇಳೆಗೆ ಸರಿಯಾಗಿ ತೋಟದಲ್ಲಿ ಕಾಲಿಟ್ಟ. ಅವನದು ಪ್ರೇಮ ವಲ್ಲ, ಕಾಮ. ಪ್ರೇಮವೆಂದರೇನೆಂಬುದು ಕುಡಚಿಗೆ ಗೊತ್ತಿದ್ದಿಲ್ಲವೆಂದೇ ಹೇಳ ಬಹುದು. ಕಾಲೇಜಿನಲ್ಲಿಯ 'ಫ್ಯಾಶನ್' ಹುಡುಗಿಯರಿಗೆ ಮರುಳಾಗುವದು ಅವನ ಸ್ವಭಾವಗುಣವಾಗಿತ್ತು. ಪ್ರಮೀಲೆಯು ಇಂಥವರಲ್ಲಿ ಒಬ್ಬಳಿದ್ದಳೆಂದು ಬೇರೆ ಹೇಳಬೇಕಾಗಿಲ್ಲ ಹತ್ತಿರ ಮನೆಯಿದ್ದುದರಿಂದ ಬೆಳೆಯುವ ಸಲಿಗೆ ಬೇರೆ ಇವೆಲ್ಲವುಗಳ ಮೂಲಕ ಒಮ್ಮೊಮ್ಮೆ ಚೇಷ್ಟೆಗಾಗಿ ಪ್ರಮೀಲೆಯು ಕುಡಚಿ ಯನ್ನು 'wild beast,' ('ಕಾಡುಪಶು') ಎಂದು ಕರೆಯುತ್ತಿದ್ದಳು. ಆಗ

'beauty and the beast (ಸುಂದರಿಯೂ ಕಾಡುಪಶುವೂ) ಎಂಬ ಕಥೆಯ ತಲೆಕಟ್ಟಿನ ನೆನಪು ಕೊಟ್ಟು ಕುಡಚಿಯು ನಗುತ್ತಿದ್ದ. ಹೀಗೆ ಕುಟಚಿಯ ಸ್ವಭಾವವು ತನಗೆ ಸೇರದಿದ್ದರೂ ಕುಡಚಿಯೊಡನೆ ಮುಕ್ತಕಂಠಳಾಗಿ ಮಾತನಾಡಲು ಪ್ರಮೀಲೆಯು ಬೇಸರಿಯುತ್ತಿದ್ದಿಲ್ಲ. ಸ್ತ್ರೀಸ್ವಾತಂತ್ರ್ಯ, ಸಮಾಜದಲ್ಲಿ ಸ್ತ್ರೀ–ಪುರುಷರ ನಡುವೆ ಇರಬೇಕಾದ ಸಮಾನತೆ,—ಇವೆಲ್ಲ ವಿಷಯಗಳಲ್ಲಿ ಪ್ರಮೀಲೆಯ ಮನಸ್ಸಿನಲ್ಲಿದ್ದ ವಿಚಾರಗಳೇ ಇದಕ್ಕೆ ಕಾರಣವಾಗಿದ್ದವು ಕುಡಚಿಯದು ಸರ್ವಸಾಧಾರಣ ಮನೆತನವಾಗಿದ್ದರಿಂದ ಅನೇಕ ವರ್ಷಗಳ ವರೆಗೆ ಪಂಡಿತರ ಮನೆಯಲ್ಲಿ ಅವನಿಗೆ ಪ್ರವೇಶವಿರಲಿಲ್ಲ. ಕಾಲೇಜಿಗೆ ಹೋಗಹತ್ತಿದಂದಿನಿಂದ ಪ್ರಮೀಲೆಯೇ ಅವನನ್ನು ಆಗೀಗ ಊಟಕ್ಕೆಂದು ಬರಮಾಡಿಕೊಳ್ಳುತ್ತಿದ್ದಳು ಇದೊಂದು ತನ್ನ .ಮೇಲಿನ ಮೋಹವೆಂದು ಕುಡಚಿಯು ಅದಕ್ಕೆ ಮರುಳಾಗಿದ್ದ

"ಇದೇನು ? ಜು. ಬಿ. ಎ ದ ಕನಸುಗಳನ್ನು ಕಾಣುತ್ತಿದ್ದಿರೇನು ?" ಎಂದು ವಿಚಾರಪರಳಾಗಿ ಕುಳಿತಿದ್ದ ಪ್ರಮೀಲೆಯನ್ನು ಕುರಿತು ಕುಡಚಿ ನಗೆಯಾಡಿದ.

ಒಮ್ಮೆಲೆ ವಿಚಾರದ ಸಮಾಧಿಯಿಂದ ಜಾಗೃತ ಜಗತ್ತಿಗೆ ಪ್ರಮೀಲೆಯು ಬಂದಳು. ಕುಡಚಿಯು ಇಷ್ಟು ಹೊತ್ತಿಗೆ ಈಗ ಇಲ್ಲಿಗೇಕೆ ಬಂದನೆಂಬ ವಿಚಾರವು ಮನದಲ್ಲಿ ಸುಳಿದರೂ ಪ್ರಮೀಲೆಯು ಅದಕ್ಕೆ ಮಹತ್ವ ಕೊಡಲಿಲ್ಲ. ಸುಮ್ಮನೆ ತಿರುಗಾಡುತ್ತ ಹೊರಟಾಗ ತನ್ನನ್ನು ನೋಡಿ ಇಲ್ಲಿ ಬಂದಿರಬಹುದೆಂದು ತಿಳಿದಳು.

"ಬರ್ರಿ ! ನೀವೂ ಅಷ್ಟೇ ತಾನೆ ? ಅರ್ಥಶಾಸ್ತ್ರವೋ, ಇಂಗ್ಲೀಷೋ, ಸಂಸ್ಕೃತವೋ ?" ಎಂದು ಪ್ರಮೀಲೆಯು ಕೇಳಿದಳು.

"ಅರ್ಥಶಾಸ್ತ್ರ ಪರೀಕ್ಷೆ ಪಾಸಾಗಲು ಅದೇ ಸರಳ ದಾರಿ. ಇಂಟರಿನಲ್ಲಿಯಂತೆ ಮೂರನೆಯ ವರ್ಗದಲ್ಲಿಯಾದರೂ ಪಾಸಾಗಲು ಅಡ್ಡಿಯಿಲ್ಲ. ನೀವು ?"

"ನನ್ನದು ಇನ್ನೂ ನಿಶ್ಚಯವಾಗಿಲ್ಲ ಪುಣೆಗೆ ಹೋದ ಮೇಲೆ ನಿರ್ಣಯಿಸುತ್ತೇನೆ." ಪ್ರಮೀಲೆಯೆಂದಳು.

“ಅದೇಕೆ? ಸ್ಕಾಲರರನ್ನು ಕೇಳಬೇಕೇನು? ನರಹರಿಯಂತೂ ಹಿಂದುಳಿದ. ನಾವು ತುಳಿದ ಹಾದಿಯೆಡೆಗೆ ಈಗ ಅವನು ತಿರುಗಬೇಕು!” ಕುಡಚಿಯೆಂದ

ಪ್ರಮೀಳೆಯ ಮೊಗವು ತುಸು ಕೆಂಪೇರಿತು. ಆಕೆ ವಿಶೇಷ ಮಾತನಾಡಲಿಲ್ಲ. “ನಾನು ಬಹುಶಃ ಇಂಗ್ಲಿಷು ತೆಗೆದುಕೊಳ್ಳುತ್ತೇನೆ” ಎಂದು ತುಸು ಹೊತ್ತಿನ ಮೇಲೆ ಹೇಳಿದಳು.

“ಓಹೋ! ಹೀಗೇನು? ಹಾಗಾದರೆ ನೀವೂ ಸ್ಕಾಲರರನ್ನು ಕೂಡಿದಂತಾಯಿತು. ಪಾಟಣಕರನೂ ಇಂಗ್ಲಿಷು ತೆಗೆದುಕೊಳ್ಳುವೆನೆಂದು ಹೇಳುತ್ತಿದ್ದ!” ಎಂದು ಕುಡಚಿಯು ಮಾತು ಮುಂದುವರಿಸಿದ. ಪರೀಕ್ಷೆಯಾದ ಮೇಲೆ—ಐ. ಸಿ. ಎಸ್. ದ ಸಲುವಾಗಿ ಅರ್ಥಶಾಸ್ತ್ರವನ್ನೇ ತೆಗೆದುಕೊಳ್ಳಬೇಕೆಂದು ಪಾಟಣಕರನು ನಿರ್ಧರಿಸಿದ್ದ ಇದು ಕುಡಚಿಗೆ ಗೊತ್ತಿರಲಿಲ್ಲ.

“ಈ ಸಲ ಇರುವದೆಲ್ಲಿ? ಬಾಗೈಮಾ ವಸತಿಗೃಹದಲ್ಲಿ ತಾನೆ? ಕುದುರೆಯ ಸವಾರಿ ದಿನಂಪ್ರತಿ ನಡೆಯುವದಷ್ಟೆ?” ಕುಡಚಿಯು ಕೆಣಕಿ ಕೇಳಿದ.

“ಕುದುರೆಯ ಸವಾರಿ ಬಿಟ್ಟದ್ದಲ್ಲ ಗಂಡಸರಿಗೆ ಪಾರ ಕಲಿಸಬೇಕಾಗಿದೆ, ಅವರಿಗಿಂತ ಒಂದು ಹೆಜ್ಜೆ ಮುಂದೆ ಹೆಂಗಳೆಯರು ಹೋಗಬಲ್ಲರೆಂದು!” ಎಂದು ಅಭಿಮಾನಪೂರ್ವಕವಾಗಿ ಪ್ರಮೀಳೆಯೆಂದಳು.

“ಪುಣೆಯಲ್ಲಿ ಮನೆಯೇಕೆ ಮಾಡುವದಿಲ್ಲ?” ಕುಡಚಿ ಕೇಳಿದ

“ಮಾಡಿದರೆ ಇಲ್ಲಿ ತೋಟಪಟ್ಟಿಗಳನ್ನು ನೋಡಿಕೊಳ್ಳುವರಾರು? ಈ ಮಾರುತಿಯ ಮೇಲೆ ಎಲ್ಲವನ್ನೂ ಬಿಟ್ಟು ಹೋಗೋಣವೆ?” ಎಂದು ಅಲ್ಲಿಯೇ ವೀಳ್ಯದೆಲೆಯ ಬಳ್ಳಿಯಿಂದ ಕೆಲವೆಲೆಗಳನ್ನು ತೆಗೆಯುತ್ತಿರುವ ಮಾರುತಿಯನ್ನು ತೋರಿಸಿ ಪ್ರಮೀಳೆಯು ನಕ್ಕಳು.

“ಅಲ್ಲ, ಮಿಸ್ ಪಂಡಿತ್! ಹೆಂಗಸರು ಇಷ್ಟೊಂದೇಕೆ ಕಲಿಯಬೇಕು? ಮುಂದೆ ನಿವೇನು ಕೆಲಸ ಮಾಡುವಿರಾ? ಆ ಮಿಸ್——ರು ಭೂಗರ್ಭಶಾಸ್ತ್ರವನ್ನು ಕಲಿಯುತ್ತಿದ್ದಾರೆ ಅದರಿಂದ ಅವರಿಗೇನು ಪ್ರಯೋಜನ? ನೀವು ಬಿ. ಎ. ಆದ ಮೇಲೆ ಮುಂದೇನು? ಮದುವೆ. . .—” ಎಂದು ಕುಡಚಿಯು ಮಾತನಾಡುವದರಲ್ಲಿದ್ದ.

ಪ್ರಮೀಲೆಯು ನಡುವೆ ಬಾಯಿಹಾಕಿ "ಅದೆಲ್ಲದರ ಗೊಡವೆ ನಿಮ ಗೇಕೆ? ನೀವು ಭೂಗರ್ಭಶಾಸ್ತ್ರವನ್ನು ಕಲಿತು ಏನು ಮಾಡುತ್ತೀರೋ ಅದನ್ನೇ ಮಿಸ್—ರೂ ಮಾಡುತ್ತಾರೆ. ಗಂಡಸರಿಗಷ್ಟೆ ಜ್ಞಾನದ ಏಜನ್ಸಿಯಿದೆ ಯೇನು? ನನ್ನ ಮದುವೆಯ ವಿಚಾರವೇಕೆ? ನಾನು ಯಾರನ್ನು ಮದುವೆ ಯಾದರೂ ಕುಡಚಿ ಸ್ಟೇಷನ್ನಿನಿಂದ ನೂರು ಮೈಲು ದೂರ ಇರುತ್ತೇನೆ!" ಎಂದು ಪ್ರಮೀಲೆಯು ನಕ್ಕಳು.

ಇದೇ ಸುಮಾರಿಗೆ ಅಲ್ಲಿ ಪಂಡಿತರು ಬಂದರು ಅವರೂ ಮಗಳೊಡನೆ ತಿರುಗಾಡಲು ಹೊರಟು ನಿಂತಿದ್ದರು. ಆದರೆ ಪರಿಚಿತರು ಕೆಲವರು ಭೆಟ್ಟಿ ಯಾಗಲು ಬಂದಿದ್ದರಿಂದ ಮನೆಯಲ್ಲಿ ಕೆಲವು ಹೊತ್ತು ನಿಲ್ಲಬೇಕಾಯಿತು. ಮಾತು ಮುಗಿದೊಡನೆ ಅವರು ತೋಟದೆಡೆಗೆ ಬಂದಿದ್ದರು. ಕುಡಚಿಯನ್ನು ತೋಟದಲ್ಲಿ ನೋಡಿ ಅವರಿಗೆ ನೊಣ ಕಡಿದ ಹಾಗಾಯಿತು. ಆದರೆ ಅವರು ಮಾತನಾಡುವಷ್ಟರಲ್ಲಿಯೇ ಪ್ರಮೀಲೆಯು "ಎಷ್ಟು ಹೊತ್ತು ಬರಲಿಕ್ಕೆ ಬಾಬಾ! ನಿಮ್ಮ ದಾರಿ ಕಾಯುತ್ತ ಇಲ್ಲಿಯೇ ಕುಳಿತಿದ್ದೆ. ಕುಡಚಿ ತಿರುಗಾಡುತ್ತ ಹೊರಟಿದ್ದರು. ನನ್ನನ್ನು ನೋಡಿ ಇಲ್ಲಿ ಬಂದರು. ಮುಂದಿನ ವರ್ಷದ ಅಭ್ಯಾಸದ ವಿಷಯಗಳನ್ನು ಚರ್ಚಿಸುತ್ತ ಕುಳಿತಿದ್ದೆವು." ಎಂದು ಹೇಳಿ ಎಲ್ಲವನ್ನೂ ಸರಿಪಡಿಸಿದಳು. ಕುಡಚಿಯು ಅವರನ್ನು ಬೀಳ್ಕೊಂಡು ಮುಂದೆ ನಡೆದ. ತಂದೆ-ಮಗಳಿಬ್ಬರೂ ತೋಟದಲ್ಲಿ ಸುತ್ತಾಡಿ ಮಾರುತಿಯ ಕೆಲಸದ ಮೇಲೆ ಮಾಡಬೇಕಾದ ಟೀಕೆ-ಟಿಪ್ಪಣಿಗಳನ್ನೆಲ್ಲ ಮಾಡಿದರು.

ಅಂತೂ ಈಗ ಪ್ರಮೀಲೆಯು ಮತ್ತೆ ಪುಣೆಗೆ ಬಂದಿದ್ದಳು ಹಮಾಲನ ಕೈಯ್ಯಲ್ಲಿ ಆಕೆ ತನ್ನ ಸಾಮಾನು ಕೊಡುತ್ತಿರುವಾಗಲೇ ಪ್ರಮೀಲೆಯು ನರಹರಿಯನ್ನು ನೋಡಿದ್ದಳು. ತುಸು ಹೊತ್ತಿನ ಮೇಲೆ ನರಹರಿಯೂ ಆಕೆಯನ್ನು ನೋಡಿದ ಕುಶಲಪ್ರಶ್ನೆಗಳಾಗಿ ಶೀನೂನೊಡನೆ ಗಣಪತ ರಾಯರ ಕ್ಷೇಮದ ಬಗ್ಗೆ ಮಾತಾದ ಮೇಲೆ ಒಂದು ಟಾಂಗ ಗೊತ್ತು ಮಾಡಲು ನರಹರಿಯು ಪ್ರಮೀಲೆಗೆ ನೆರವಾದ. ಆಕೆ ಕೂತು ಹೋಗುತ್ತಿರುವಾಗ ಇನ್ನೊಂದು ಟಾಂಗದಲ್ಲಿ ತನ್ನ ಸಾಮಾನು ಇಡಿಸುತ್ತಿದ್ದ ಕುಡಚಿಯು ನರಹರಿಯ ಕಣ್ಣಿಗೆ ಬಿದ್ದ.

"ಇದೇನು, ಕುಡಚಿ! ನೀವೂ ಇದೇ ಗಾಡಿಗೆ ಬಂದಿರಾ?" ಎಂದು ನರಹರಿಯು ಸಲಿಗೆಯಿಂದ ಕೇಳಿದ

"ಹೌದು ದೊಡ್ಡವರ ಸ್ವಾಗತದಲ್ಲಿ ನನ್ನನ್ನು ನೋಡಲು ವೇಳೆಯೆಲ್ಲಿ ನಿಮಗೆ?" ಎಂದು ಕುಡಚಿಯು ಕೊಂಕುಬಾಣವನ್ನು ಬಿಟ್ಟ.

"ನೀವು ಹೀಗೆ ಹೇಳಬಹುದೆ?" ಎಂದು ನರಹರಿ-ಶೀನರು ವಿಷಾದ ದಿಂದ ನಕ್ಕರು. ಕೊಂಕುಮನಸ್ಸಿನ ವ್ಯಕ್ತಿ ಬೆಳೆದರೂ ಆ ಮನಸ್ಸಿನ ಕೊಂಕು ಹೋಗುವದಿಲ್ಲವೆಂದು ಚೆನ್ನಾಗಿ ಅರಿತಿದ್ದ ನರಹರಿಯು ಕುಡಚಿಯ ವಿಷಯವನ್ನು ಅಲ್ಲಿಗೇ ಬಿಟ್ಟು ಶೀನೂನೊಡನೆ ಟಾಂಗದಲ್ಲಿ ಕೂಡುತ್ತ ಬೇರೆ ಮಾತು ಬೆಳಸಿದ.

---

## ಪ್ರಕರಣ ೬೦

## ಪ್ರೀತಿಯ ತೊಡಕು

ದೇಸಾಯರು ಪುಣೆಗೆ ಬಂದು ನಿಂತು ಕೆಲವು ದಿನಗಳಾದ ಮೇಲೆ ಗಣಪತರಾಯರಿಗೆ ಪತ್ರ ಬರೆದು ತಮ್ಮ ಕುಶಲವನ್ನು ತಿಳಿಸಿ ಎಲ್ಲವೂ ಸುಸೂತ್ರವಾಗಿ ಸಾಗಿದೆಯೆಂದು ಬರೆದಿದ್ದರು. ಗಣಪತರಾಯರು ಇದಕ್ಕೆ ತಮ್ಮ ಸಂತೋಷವನ್ನು ವ್ಯಕ್ತಪಡಿಸಿ ಶೀನೂ-ನರಹರಿಯರ ಪ್ರಗತಿಯನ್ನು ನೋಡಿಕೊಳ್ಳಬೇಕೆಂದೂ ತಮ್ಮ ಮಗನಿಗೆ ಈಗ ಪುಣೆಯಲ್ಲಿ ಒಬ್ಬ ಹಿರಿಯರು ದೊರೆತಂತಾಯಿತೆಂದೂ ತಮಗಾದ ಸಮಾಧಾನವನ್ನು ಸೂಚಿಸಿದ್ದರು.

ರಂಗಾಸಾನಿಗೆ ಜೀವಿತದಲ್ಲಿ ಬೇರೆ ಆಸೆಯಿರಲಿಲ್ಲ. ದೇಸಾಯರ ಪ್ರೇಮವು ಅವಳ ಸರ್ವಸ್ವವಾಗಿತ್ತು. ಇತ್ತೀಚೆಗೆ ಕುಸುಮಾನ ಪ್ರಗತಿಯು ಅವಳಿಗೆ ಹೆಮ್ಮೆಯ ವಿಷಯವಾಗಿತ್ತು. ಮನೆಗೆ ಬಂದ ಶೀನು-ನರಹರಿಯ ರೊಡನೆ ಅವಳು ಯಾವಾಗಲಾದರೂ ಮಾತನಾಡುತ್ತಿದ್ದಳು. ಸಂಜೆಗೆ ಸಾನಿಯೂ ದೇಸಾಯರೂ ಕುಸುಮಾನೊಡನೆ ತಿರುಗಾಡಲು ಹೋಗುತ್ತಿದ್ದರು. ಸಾನಿಯನ್ನು 'ಸಾನಿ'ಯೆಂದು ಯಾರೂ ತಿಳಿಯುವ ಹಾಗಿರಲಿಲ್ಲ ಅವಳ ರೀತಿ-ನಡತೆಗಳೂ ನೀತಿ-ಗುಣಗಳೂ ಓರ್ವ ಗೃಹಿಣಿಯವಾಗಿದ್ದವು.

ದೇಸಾಯರಿಗೆ ಆಗೀಗ ಮೊಗ್ಗಾವಿಯಲ್ಲಿಯ ಮನೆಯ ವಿಚಾರ ಬರದೆ ಹೋಗುತ್ತಿರಲಿಲ್ಲ. ತಮ್ಮ ಹೆಂಡತಿಯು ಇಲ್ಲದ ಕರ್ಮಕಾಂಡದಲ್ಲಿ ಸಿಕ್ಕು ತಮಗೆ ಹೇಗೆ ಎರವಾಗಿದ್ದಳು! ತಮ್ಮ ಸಂಸಾರವನ್ನೆಲ್ಲ ತನಗೆ ತಿಳಿಯದೆ ಹೇಗೆ ಮಣ್ಣುಗೂಡಿಸಿದ್ದಳು! ಮಗನು ಮುಂದಾಗಬೇಕೆಂದರೆ ಅವನ ಅಜ್ಞಾನ-ಹಟ-ಕಷ್ಟ,—ಎಲ್ಲ ಕೂಡಿ ಅವನನ್ನು ಬೇರೆ ಹಾದಿಗೆಳೆದಿದ್ದವು. ಶ್ರೇಷ್ಠ ಗುರಿಗಳನ್ನು ಎದುರಿಗಿಟ್ಟುಕೊಂಡು ನಡೆದ ತಮ್ಮ ಜೀವನವು ಧ್ಯೇಯ ಚ್ಯುತವಾದುದೆಂದೂ ಪತನದ ಮಾದರಿಯೆಂದೂ ದೇಸಾಯರು ತಿಳಿದಿದ್ದರು. ಕುಸುಮಾನೇ ತಮ್ಮ ಎಲ್ಲ ಪುಣ್ಯದ ಫಲವೆಂದು ಅವರಿಗೆ ಮನವರಿಕೆಯಾಗಿತ್ತು.

ವರ್ಷಕ್ಕೊಮ್ಮೆ ಅವರಿಗೆ ಮೊಗ್ಗಾವಿಗೆ ಹೋಗುವ ಪ್ರಸಂಗ ಬರಬಹುದಾಗಿತ್ತು. ಲಾವಣಿಯ ವಸೂಲಿಯಾಗಿ ತಮಗೆ ಬೇಕಾದ ಹಣವನ್ನು ಅಲ್ಲಿಂದ ದೇಸಾಯರು ತರಬೇಕಲ್ಲ? ಆದರೆ ದೇಸಾಯರಿಗೆ ಮೊಗ್ಗಾವಿಗೆ ಹೋಗುವ ಮನಸ್ಸಿರಲಿಲ್ಲ ಕೇಶವನಿಗೆ ಪತ್ರ ಬರೆಯಬೇಕೆಂದೂ ಅವನು ಕಳಿಸದಿದ್ದರೆ ಮಾತ್ರ ತಾವೇ ವರ್ಷಕೊಮ್ಮೆ ಮೊಗ್ಗಾವಿಗೆ ಹೋಗಿಬರಬೇಕೆಂದೂ ದೇಸಾಯರು ಗೊತ್ತುಮಾಡಿಕೊಂಡಿದ್ದರು

ಪುಣೆಯಲ್ಲಿಯ ಸಾರ್ವಜನಿಕ ವಾಚನಾಲಯಗಳಿಂದ ತಮಗೆ ಬೇಕಾದ ಗ್ರಂಥಗಳನ್ನು ತಂದು ಓದುವದು ದೇಸಾಯರ ರೂಢಿಯಾಗಿತ್ತು. ಮನಃಶಾಂತಿಯಿರದ ಮೂಲಕ ಮೊಗ್ಗಾವಿಯಲ್ಲಿ ಇದು ಅವರಿಗೆ ಸಾಧಿಸಿರಲಿಲ್ಲ ಇಲ್ಲಿ ಅವರು ದಿನಾಲು ಅನೇಕ ತಾಸು ಓದದೆ ಇರುತ್ತಿರಲಿಲ್ಲ ಕಥೆ-ಕಾದಂಬರಿಗಳು, ತತ್ವ-ದರ್ಶನ ಸಂಗ್ರಹಗಳು, ಮೂಡಣ-ಪಡುವಣದ ಸಂಸ್ಕೃತಿಯನ್ನು ಅರಳಿಸಿ ತೋರಿಸುವ ಕಾವ್ಯ-ನಾಟಕಗಳು,—ಇಂಗ್ಲಿಷಾಗಲಿ ಮರಾಠಿಯಾಗಲಿ,—ಇಂತಹ ಅನೇಕ ಗ್ರಂಥಗಳನ್ನು ದೇಸಾಯರು ಮನನ ಮಾಡಿ ಜೀರ್ಣಿಸಿದ್ದರು. ಮಾಗಿ ನಿಂತಿದ್ದ ಅವರ ಮನಸ್ಸಿಗೆ ಈ ಅಭ್ಯಾಸವು ಸೂರ್ಯರಶ್ಮಿಯಂತೆ ಸಹಾಯಕಾರಿಯಾಯಿತು. ಕೆಲವು ತಿಂಗಳಲ್ಲಿಯೇ ಅವರ ಅಂತರಂಗದ ಆಶೆಯೂ ದೃಷ್ಟಿಯ ವಿಶಾಲತೆಯೂ ಇಮ್ಮಡಿಯಾಗಿದ್ದವು

ಪುಣೆಯಲ್ಲಿಯ ಎಲ್ಲ ಸಂಸ್ಥೆಗಳನ್ನು ದೇಸಾಯರು ನೋಡಲು ಉತ್ಸುಕರಾಗಿದ್ದರು. ಒಮ್ಮೆ ಅವರು ಗಾಯಕವಾಡ ವಾಡೆಯಲ್ಲಿ ಕೇಸರಿ ಕಚೇರಿಯನ್ನು

ನೋಡಲು ಹೋದಾಗ ಅಕಸ್ಮಾತ್ತಾಗಿ ಲೋಕಮಾನ್ಯರ ದರ್ಶನವಾಗಿತ್ತು. ಲೋಕಮಾನ್ಯರು ವಾಡೆಯ ಆವಾರದಲ್ಲಿ ಯಾರ ಜೊತೆಯಲ್ಲಿಯೋ ಮಾತ ನಾಡುತ್ತ ನಿಂತಿದ್ದರು. ಅವರನ್ನು ಕಂಡೊಡನೆ ದೇಸಾಯರಿಗೆ ತಾವು ನೋಡಿದ ಫೋಟೋಗಳ ನೆನಪಾಯಿತು. ಇವರೇ ಲೋಕಮಾನ್ಯರಿರಬೇಕೆಂದು ಅವರಿಗೆ ಎನಿಸಿತು. ಲೋಕಮಾನ್ಯರ ಜೊತೆಯಲ್ಲಿ ನಿಂತವರ ಮೊಗದಲ್ಲಿ ಮಿನುಗುವ ಆದರ-ಭಕ್ತಿಗಳನ್ನು ನೋಡಿಯಂತೂ ದೇಸಾಯರಿಗೆ ಸಂದೇಹವೇ ಉಳಿಯಲಿಲ್ಲ. ಅತ್ಯಾದರದಿಂದ ಅವರು ಲೋಕಮಾನ್ಯರಿಗೆ ಕೈಮುಗಿದರು. ಮಾತನಾಡು ವಾಗಲೇ ಮಂದಸ್ಮಿತರಾಗಿ ಲೋಕಮಾನ್ಯರು ತಿರುಗಿ ಅವರಿಗೆ ನಮಸ್ಕರಿಸಿದರು. ದೇಸಾಯರ ಜೀವನದಲ್ಲಿ ಇದೊಂದು ಮಹತ್ವದ ಘಟನೆಯಾಗಿ ಪರಿಣಮಿಸಿತು. ದೇಸಾಯರು ಲೋಕಮಾನ್ಯರೊಡನೆ ಮಾತನಾಡಿದ್ದಿಲ್ಲ ಏನೆಂದು ಮಾತ ನಾಡುವದು? ಅವರ ಲೇಖನಗಳನ್ನೂ ಭಾಷಣಗಳನ್ನೂ ದೇಸಾಯರು ಪಾರಾಯಣ ಮಾಡಿದ್ದರು. ಅವರ ವಿಚಾರಗಳೆಲ್ಲ ದೇಸಾಯರ ಮನಸ್ಸನ್ನು ಮೋಹಿಸಿದ್ದವು ಭಗವದ್ಗೀತೆಯ ಮೇಲಿನ ಅವರ ಗ್ರಂಥವು ದೇಸಾಯರ ನಿತ್ಯದ ಸ್ಫೂರ್ತಿಯಾಗಿತ್ತು. ಇಂಥ ರಾಷ್ಟ್ರನಾಯಕರೊಡನೆ ಮಹಾ ಪುರುಷರೊಡನೆ—ತಾವೇನು ಮೊಗ್ಗಾವಿಯ ಬಗ್ಗೆ ಮಾತನಾಡಬೇಕೆ? ಅವ ರನ್ನು ಕಂಡದ್ದೇ ಒಂದು ಪುಣ್ಯವೆಂದು ದೇಸಾಯರು ಭಾವಿಸಿದರು.

ರಂಗಾಸಾನಿಗೂ ಕುಸುಮಾನಿಗೂ ದೇಸಾಯರು ಫರ್ಗ್ಯುಸನ್ ಕಾಲೇ ಜನ್ನು ತೋರಿಸಬೇಕಾಗಿತ್ತು. ಮನೆಗೆ ಆಗೀಗ ಬಂದ ಶೀನು, ದೇಸಾಯರು ಮೊಗ್ಗಾವಿಯ ಬಸ್ಸು ನಿಲ್ದಾಣದಲ್ಲಿ ಹೇಳಿದ ಮಾತಿನ ನೆನಪು ಕೊಟ್ಟು ಕಾಲೇಜಿಗೆ ಯಾವಾಗ ಹೋಗೋಣವೆಂದು ಕೇಳುತ್ತಿದ್ದ. ಜೊತೆಗೆ ನರಹರಿಯೂ ಬೇಕೆಂದು ಬಗೆದ ದೇಸಾಯರು ಆ ವಿಷಯವನ್ನು ಹಾಗೇ ಮುಂದುವರಿಸಿದ್ದರು. ನರಹರಿಗೆ ಇದು ಹೊಳೆದಿರಲಿಲ್ಲ. ಅನೇಕ ಸಲ ಅವನು ದೇಸಾಯ-ಕುಸುಮಾರೊಡನೆ ಕಾಲೇಜಿನ ಹತ್ತಿರದ ಬೆಟ್ಟದ ಕಡೆಗೆ ಹೋಗಿದ್ದ. ಕಾಲೇಜಿನ ಒಳಗೆ ನೋಡುವದೇನಿದೆಯೆಂದು ಅವನು ಸುಮ್ಮನಿದ್ದ. ಆದರೆ ಶೀನೂನ ಸಲುವಾಗಿಯಾದರೂ ದೇಸಾಯರಿಗೆ ಹೋಗಬೇಕಾಯಿತು. ಒಂದು ದಿನ ಸಂಜೆಗೆ ಶೀನು ಬಂದಾಗ "ನರಹರಿ ಎಲ್ಲಿ? ಇಂದು ಕಾಲೇಜಿಗೆ ಹೋಗ ಬಹುದಾಗಿತ್ತಲ್ಲ?" ಎಂದು ಕೇಳಿದರು.

“ಅಲ್ಲಿಯೇ ವಸತಿಗೃಹದಲ್ಲಿದ್ದಾನೆ. ಅಲ್ಲಿ ಹೋಗಿ ಅವನನ್ನು ಕರೆಯು ಬಹುದಲ್ಲ?” ಎಂದು ಶೀನು ಸೂಚಿಸಿದ.

ಆಗ ಹೊರಡಲು ದೇಸಾಯರು ಸಮ್ಮತಿಯಿತ್ತರು. ನರಹರಿಯಿಲ್ಲದೆ ಹೋಗುವದು ಕುಸುಮಾನ ಮನಸ್ಸಿನಲ್ಲಿರಲಿಲ್ಲ. ಆದರೆ ಕಾಲೇಜಿನಲ್ಲಿಯೇ ಅವನು ತಮ್ಮನ್ನು ಕೂಡಿಕೊಳ್ಳುವನೆಂದು ಭರವಸೆಯಿದ್ದುದರಿಂದ ಆಕೆ ಹಿಂದು ಮುಂದು ನೋಡಲಿಲ್ಲ. ಎಲ್ಲರೂ ಕೂಡಿ ಕಾಲೇಜಿಗೆ ಹೊರಟರು.

ಕಾಲೇಜು ಹಾದಿಯಲ್ಲಿಯೇ ಇದ್ದುದರಿಂದ ಅದನ್ನು ನೋಡಿ ವಸತಿ ಗೃಹದ ಕಡೆಗೆ ಹೋಗುವದೆಂದು ಶೀನು ಕಾಲೇಜಿನ ಒಳಕ್ಕೆ ಪ್ರವೇಶಿಸಿ, ಬೇರೆ ಬೇರೆ ವರ್ಗಗಳನ್ನು ಅವರಿಗೆ ತೋರಿಸುತ್ತಿದ್ದ. ಇದೇ ಸುಮಾರಿಗೆ ವಸತಿ ಗೃಹದಲ್ಲಿಯ ತನ್ನ ಕೋಣೆಯಿಂದ ಹೊರಬಿದ್ದು ನರಹರಿಯು ದೇಸಾಯರ ಮನೆಯ ಕಡೆಗೆ ನಡೆದಿದ್ದ. ಆಗ ಎಲ್ಲರೂ ಶೀನೂನೊಡನೆ ಕಾಲೇಜಿನ ಒಳಕ್ಕೆ ಪ್ರವೇಶಿಸುವದು ಅವನ ಕಣ್ಣಿಗೆ ಬಿದ್ದಿತು. ಅದೇಕೋ ನರಹರಿಯ ಮನಸ್ಸಿಗೆ ನೊಣ ಕಡಿದ ಹಾಗಾಯಿತು. ಇದೊಂದು ಸಹಜವಾದ ಘಟನೆ ಯೆಂದು ಅವನಿಗೊಮ್ಮೆ ಹೊಳೆಯಿತು ನಿಜ. ಆದರೆ ಕಾಲೇಜು ನೋಡುವ ಮನಸ್ಸಿದ್ದರೆ ದೇಸಾಯರು ತನಗೇಕೆ ಹೇಳಲಿಲ್ಲ? ಕುಸುಮಾ ಒಮ್ಮೆಯಾ ದರೂ ಇದನ್ನು ಸೂಚಿಸಬಹುದಾಗಿತ್ತಲ್ಲ? ಈಗ ತನ್ನನ್ನು ಬಿಟ್ಟು ಶೀನೂ ನೊಡನೆ ಕಾಲೇಜು ನೋಡಲು ಎಲ್ಲರೂ ಬಂದಿದ್ದರ ಅರ್ಥವೇನು? ಶೀನು ತನ್ನ ಗೆಳೆಯ. ತನಗೆಂದಿಗೂ ಅವನು ಎರಡು ಬಗೆಯಲಾರ ಆದರೆ ತನ್ನ ಹಾಗು ಕುಸುಮಾನ ನಡುವೆ ಇದ್ದ ಅನನ್ಯವಾದ ಪ್ರೀತಿಯ ವಿಷಯ ಅವನಿಗೆ ಗೊತ್ತಿದೆಯೆ? ಶೀನು........ಐ ಸಿ ಎಸ್. ಗೆ ಹೋಗುವವ. ದೇಸಾಯರು ತಮ್ಮ ಮನಸ್ಸನ್ನು ಬದಲಿಸಿರಬಹುದೆ? ಅನೇಕ ವಿಚಾರಗಳು ಅವನ ತಲೆ ಯಲ್ಲಿ ತಾಕಲಾಡಹತ್ತಿದವು. ತಾನೂ ಹೋಗಿ ಅವರನ್ನು ಕೂಡಿಕೊಳ್ಳ ಬೇಕೆಂದು ಒಮ್ಮೆ ನರಹರಿಗೆನಿಸಿತು ಆದರೆ ಮತ್ತೆ ಅವನ ವಿಚಾರಕ್ರಮವು ಪಲ್ಲಟಗೊಂಡಿತು. ತಾನು ಜೊತೆಗೆ ಹೋಗಬೇಕಾಗಿದ್ದರೆ ತಾನಾಗಿಯೇ ಏಕೆ ಹೋಗಬೇಕು? ಈ ಭಾವನೆಯ ಭರದಲ್ಲಿ ತನ್ನ ದಿಕ್ಕನ್ನು ಬದಲಿಸಿ ನರ ಹರಿಯು ಕಾಲೇಜಿನ ಹತ್ತಿರದ ದಿನ್ನೆಯ ಕಡೆಗೆ ನಡೆದುಬಿಟ್ಟ. ಕಾಲೇಜನ್ನು ನೋಡಿ ಎಲ್ಲರೂ ವಸತಿಗೃಹದ ಕಡೆಗೆ ನಡೆದಾಗ,—ಅಲ್ಲಿ ನರಹರಿ ಇರಲಿಲ್ಲ;

ಕುಸುಮಾನಿಗೆ ಇದರಿಂದ ಬಲು ಕೆಡಕೆನಿಸಿತು. ಆದರೆ ಸಹಜವಾಗಿ ತಿರುಗಾಡಲು ಹೋಗಿರಬಹುದೆಂದು ಆಕೆ ಸಮಾಧಾನ ಹಚ್ಚಿಕೊಂಡಳು ಮುಂದಿನ ಸಲ ಮನೆಗೆ ಹೋದಾಗ "ಅಲ್ಲೋ, ನರಹರಿ! ಕಾಲೇಜು ನೋಡಲೆಂದು ನಾವೆಲ್ಲರೂ ಹೋಗಿ ನಿನ್ನ ಕೋಣೆಗೆ ಬಂದೆವು. ನೀನು ಕೋಣೆಯಲ್ಲಿಯೇ ಇರಲಿಲ್ಲ!" ಎಂದು ದೇಸಾಯರು ನಗುತ್ತ ಕೇಳಿದರು. "ತಿರುಗಾಡಲು ಹೋಗಿದ್ದೆ." ಎಂದು ನರಹರಿಯು ಮಾತು ಹಾರಿಸಿಕೊಂಡ. ಅವನ ಹೃದಯದಲ್ಲಿಯ ಆಳವಾದ ವಿಷಾದದ ಕಲ್ಪನೆಯು ದೇಸಾಯರಿಗಾಗಲಿಲ್ಲ ಕುಸುಮಾನಿಗೂ ಆಗಲಿಲ್ಲ.

ವಸತಿಗೃಹದಲ್ಲಿ ಶೀನು-ನರಹರಿಯರು ಹೊಂದಿಕೊಂಡ ಕೋಣೆಗಳಲ್ಲಿ ವಾಸಿಸಿದ್ದರು. ಅವರ ಸ್ನೇಹದಲ್ಲಿ ಮತ್ತಾವ ತೊಡಕೂ ಬಂದಿರಲಿಲ್ಲ ಅವರ ಚಹವು ಕೂಡಿಯೇ ಆಗುತ್ತಿತ್ತು. ಎಲ್ಲ ವಿಷಯಗಳನ್ನು ಅವರು ಮುಕ್ತ ಮನಸ್ಕರಾಗಿ ಚರ್ಚಿಸುತ್ತಿದ್ದರು. ಆದರೆ ದೇಸಾಯರ ಇಲ್ಲವೆ ಕುಸುಮಾನ ಬಗ್ಗೆ ಅವರು ಒಂದು ಚಕಾರ ಶಬ್ದವನ್ನು ಎತ್ತಿರಲಿಲ್ಲ ಒಮ್ಮೆ ನರಹರಿಗೆನಿಸಿತ್ತು,—ನಾನು ಕುಸುಮಾನನ್ನು ಪ್ರೀತಿಸುತ್ತಿದ್ದೇನೆ; ಆಕೆ ನನ್ನನ್ನು ಪ್ರೀತಿಸುತ್ತಿದ್ದಾಳೆ, ಎಂದು ಶೀನೂಗೆ ಹೇಳಿಬಿಡಬೇಕೆಂದು ಆದರೆ ಶೀನೂನ ತಲೆಯಲ್ಲಿ ಕುಸುಮಾನ ಬಗ್ಗೆ ಯಾವ ವಿಚಾರವೂ ಇರದಿದ್ದರೆ? ಸುಮ್ಮನೆ ಸಂಶಯವನ್ನು ವ್ಯಕ್ತಪಡಿಸಿದ ಹಾಗಾದೀತಲ್ಲ? ಮೇಲಾಗಿ ದೇಸಾಯರ ಮನಸ್ಸಿನಲ್ಲಿ ಬೇರೆ ವಿಚಾರಗಳು ಸುಳಿದಿದ್ದರೆ? ಹೀಗಾಗಿ ನರಹರಿಯು ತನ್ನ ಮೌನ ವ್ರತವನ್ನು ಮುರಿದಿರಲಿಲ್ಲ. ಇತ್ತ ಶೀನೂನಿಗೆ ಅನೇಕ ಸಲ ಅನಿಸಿತ್ತು,—ನಾನು ಕುಸುಮಾನನ್ನು ಪ್ರೀತಿಸುತ್ತೇನೆ, ಈ ವಿಷಯದಲ್ಲಿ ನಿನ್ನ ವಿಚಾರಗಳು ನನಗೆ ತಿಳಿದಿಲ್ಲ; ಇದಕ್ಕೆ ನಿನ್ನ ಅಡ್ಡಿ ಇಲ್ಲವಷ್ಟೆ? ಎಂದು ನರಹರಿಯನ್ನು ಕೇಳಬೇಕೆಂದು. ಆದರೆ ಹೀಗೆ ಕೇಳಲು ಶೀನೂನಿಗೆ ಧೈರ್ಯವಾಗಿದ್ದಿಲ್ಲ. ಆಕಸ್ಮಾತ್ತಾಗಿ ನರಹರಿ: "ಹೌದು. ನಾನೇ ಅವಳನ್ನು ಪ್ರೀತಿಸುತ್ತೇನೆ!" ಎಂದು ಹೇಳಿಬಿಟ್ಟರೆ? ಆಗ ತನ್ನ ಸ್ವರ್ಣಸ್ವಪ್ನಗಳೆಲ್ಲ ಮಣ್ಣುಗೂಡುವವಲ್ಲ? ತನ್ನ ಜೀವಿತವೇ ನಿರರ್ಥಕವಾಗುವದಲ್ಲ? ಸುಮ್ಮನೆ ಪ್ರಶ್ನೆ ಕೇಳಿ ಜೀವಿತವನ್ನು ಹಾಳುಮಾಡಿಕೊಳ್ಳುವದೆ? ಅದಕ್ಕಾಗಿ ಶೀನು ಸುಮ್ಮನಿದ್ದ.

ಇಬ್ಬರೂ ಕೂಡಿಯೇ ಅವರು ಇಲ್ಲಿಯ ವರೆಗೆ ದೇಸಾಯರ ಮನೆಗೆ ಹೋಗಿರಲಿಲ್ಲ ಶೀನು ಒಬ್ಬನೆ ಬಂದರೆ: "ನರಹರಿಯನ್ನು ಬಿಟ್ಟೇಕೆ ಬಂದೆ, ಶೀನ? ಅವನನ್ನೂ ಕರೆಯಬೇಕಿತ್ತು." ಎಂದು ಕೇಳುತ್ತಿದ್ದರು "ನರಹರಿ ಅಭ್ಯಾಸದಲ್ಲಿದ್ದ" ಎಂದು ಶೀನು ಪ್ರಶ್ನೆ ತಪ್ಪಿಸುತ್ತಿದ್ದ. ನರಹರಿಯು ಬಂದಾಗ ಶೀನೂನ ಬಗ್ಗೆ ದೇಸಾಯರು ಬಹಳ ಸಲ ಕೇಳುತ್ತಿರಲಿಲ್ಲ ಒಂದೆರಡು ಸಲ ಮಾತ್ರ "ಶೀನು ಏನು ಮಾಡುತ್ತಿದ್ದ?" ಎಂದು ಔಪಚಾರಿಕವಾಗಿ ಕೇಳಿದ್ದರು. ಈ ಉಪಚಾರದ ಪ್ರಶ್ನೆಗಳೇ ನರಹರಿಯ ಮನಸ್ಸಿನಲ್ಲಿ ಅಳಿಕಿದ್ದವು. ಪರಿಣಾಮವು ಹೀಗಾಗಬಹುದೆಂದು ದೇಸಾಯರ ಕನಸು-ಮನಸಿನಲ್ಲಿಯೂ ಹೊಳೆದಿರಲಿಲ್ಲ

ಒಂದು ಸಲ ಅಕಸ್ಮಾತ್ತಾಗಿ ನರಹರಿಯಿದ್ದ ಹೊತ್ತಿನಲ್ಲಿಯೇ ಶೀನ ದೇಸಾಯರ ಮನೆಗೆ ಬಂದ ನರಹರಿಯನ್ನು ನೋಡಿದೊಡನೆ ಶೀನೂ ಅವಾಕ್ಕಾದ ಶೀನೂನನ್ನು ನೋಡಿ ನರಹರಿಗೆ ಪ್ರಶಸ್ತವೆನಿಸಲಿಲ್ಲ ಇಬ್ಬರೂ ಏನಾದರೊಂದು ಕುಂಟ ನೆವವನ್ನು ತೆಗೆದು ಹೋಗಲು ಪ್ರಯತ್ನಿಸಿದರು. ಆದರೆ ದೇಸಾಯರು ಅವರನ್ನು ಹೋಗಗೊಡಲಿಲ್ಲ "ನಿಮ್ಮಿಬ್ಬರ ಬಿಡುವಿನ ಸಮಯ ಕೂಡಿಬರುವದೇ ಅಪರೂಪ. ಇವತ್ತು ಅನಾಯಾಸವಾಗಿ ಬಂದಿದ್ದೀರಿ. ಎಲ್ಲರೂ ಕೂಡಿ ತಿರುಗಾಡಿ ಬರೋಣ!" ಎಂದು ದೇಸಾಯರು ಹೊರಡಲನುವಾದರು ಆದರೆ ಅಂದು ಎಲ್ಲರೂ ಹೊರಡುವ ಹಾಗಿರಲಿಲ್ಲ. ರಂಗಾಸಾನಿಯ ಮೈಯ್ಯಲ್ಲಿ ನೆಟ್ಟಗಿರಲಿಲ್ಲ ಅವಳ ಜೊತೆಯಲ್ಲಿಯೇ ಮನೆಯಲ್ಲಿ ಉಳಿಯುವದಾಗಿ ಕುಸುಮಾ ಹೇಳಿದಳು ದೇಸಾಯರೊಬ್ಬರೇ ನರಹರಿ-ಶೀನರೊಡನೆ ತಿರುಗಾಡಿ ಬಂದರು. ಅದೊಂದು ರೀತಿಯಿಂದ ಇಬ್ಬರು ಸ್ನೇಹಿತರಿಗೂ ಹಗುರಾಯಿತೆಂದು ಎನಿಸಿರಬೇಕು.

ಇಂಥ ಕೆಲವು ಸಣ್ಣ ಪುಟ್ಟ ಸನ್ನಿವೇಶಗಳಿಂದ ಮನಸ್ಸಿನಲ್ಲಿ ಏನೇನೊ ಕಲ್ಪಿಸಿಕೊಂಡು ನರಹರಿಯು ದುಃಖಪಡುತ್ತಿದ್ದ. ತನಗೆ ತಿಳಿಯದೆ ತನ್ನ ಅನೇಕ ತರ್ಕಜಾಲಗಳಲ್ಲಿ ಅವನು ಸಿಕ್ಕುಬಿದ್ದಿದ್ದ. ನರಹರಿಯು ಒಳಗಿಂದೊಳಗೆ ಯಾವುದೋ ಚಿಂತೆಗೆ ಸಿಕ್ಕು ಕೊರಗುತ್ತಿರುವನೆಂದು ಕುಸುಮಾನಿಗೆ ಒಂದೆರಡು ಸಲ ಹೊಳೆದಿತ್ತು. ಆದರೆ ಅದರ ವಿವರಗಳನ್ನು ಪರೀಕ್ಷಿಸಲು ಅವಳಿಗೆ ಸಾಧ್ಯವಾಗಿರಲಿಲ್ಲ. ಮನೆಗೆಲಸ, ಅಭ್ಯಾಸ ಮೊದಲಾದ ದಿನ

ಚರ್ಯೆಯಲ್ಲಿ ಅವಳ ಹೊತ್ತು ಹೋಗುತ್ತಿತ್ತು. ಆಗೀಗ ನರಹರಿಯು ಬಂದಾಗ ವಾಡಿಕೆಯಾಗಿ ದೇಸಾಯರೊಡನೆ ಅವರು ತಿರುಗಾಡಲು ಹೋಗುತ್ತಿದ್ದರು. ತಮ್ಮಿಬ್ಬರಿಗೇ ಸಿಕ್ಕ ಕೆಲವು ನಿಮಿಷಗಳಲ್ಲಿ ಇಂಥ ಪ್ರಶ್ನೆಗಳನ್ನೆತ್ತಲು ಕುಸುಮಾನಿಗೆ ಒಂದು ಬಗೆಯ ಸಂಕೋಚವೆನಿಸುತ್ತಿತ್ತು. ತನ್ನ ಇಲ್ಲವೆ ತಮ್ಮ ಹೊಂದಿಕೆಯನ್ನು ಕುರಿತು ಇಂಥ ವಿಚಾರಗಳು ನರಹರಿಯ ತಲೆಯಲ್ಲಿ ಸುಳಿಯುತ್ತಿರಬಹುದೆಂಬುದರ ಕಲ್ಪನೆಯೇ ಅವಳಿಗಾಗಿರಲಿಲ್ಲ.

ಹೀಗಿರಲು ದೀಪಾವಳಿಯ ಸೂಟಿಯು ಬಂದಿತು. ನಿರ್ವಾಹವಿಲ್ಲದೆ ತಂದೆಯ ಕರೆಯನ್ನು ಮನ್ನಿಸಿ ಶೀನು ಮೊಗ್ಗಾವಿಗೆ ಹೋದ. ನರಹರಿಯು ವಸತಿಗೃಹದಲ್ಲಿಯೇ ಉಳಿದ. ಮೇಲೆ ಉಲ್ಲೇಖಿಸಿದ ಅನೇಕ ಅಸಿಸಿಕೆಗಳ ಮೂಲಕ ಮೊದಲನೆಯ ಟರ್ಮಿನಲ್ಲಿ ಅವನ ಅಭ್ಯಾಸವು ಸಮಾಧಾನಕರವಾಗಿ ಆಗಿರಲಿಲ್ಲ. ಅದನ್ನೆಲ್ಲ ಈ ಸೂಟಿಯಲ್ಲಿ ತುಂಬಿಕೊಳ್ಳುವದೆಂದು ನರಹರಿಯು ನಿಶ್ಚಯಿಸಿದ್ದ. ಅದರಂತೆ ಕೆಲವು ದಿನ ಅವನ ಅಭ್ಯಾಸವೂ ನಡೆಯಿತು. ಶೀನೂನೊಡನೆ ಮೊಗ್ಗಾವಿಗೆ ಬರಬೇಕೆಂದು ಗಣಪತರಾಯರು ಅವನಿಗೆ ಪತ್ರ ಬರೆದಿದ್ದರು. ನರಹರಿಯು ಅವರ ಕ್ಷಮೆ ಬೇಡಿದ್ದ. ಅಲ್ಲಿ ಜರಗುತ್ತಿರುವ ಘಟನೆಗಳನ್ನು ನೆನೆದು ನರಹರಿಯು ಈಗ ಮೊಗ್ಗಾವಿಗೆ ಬರುವದು ಸಾಧ್ಯವಿಲ್ಲವೆಂಬುದು ಗಣಪತರಾಯರಿಗೆ ಗೊತ್ತಿತ್ತು. ಶೀನು ಸಹ ಬರಬೇಕೆಂದು ನರಹರಿಯನ್ನು ಬಲವಂತಪಡಿಸಿದ. ಯಾರಿಗೂ ಮೊಗ್ಗಾವಿಯ ಬಗ್ಗೆ ನರಹರಿಗಿದ್ದ ಭಾವನೆಯು ಸಮಂಜಸವೆನಿಸುವ ಹಾಗಿತ್ತು. ಕಡೆಗೆ ತಾನೊಬ್ಬನೇ ಶೀನು ಮೊಗ್ಗಾವಿಗೆ ಹೋದ.

ದೀಪಾವಳಿಯ ತಯಾರಿಯನ್ನು ದೇಸಾಯರು ಹುರುಪಿನಿಂದ ಮಾಡಿದ್ದರು. ಯಥೋಚಿತವಾಗಿ ನರಹರಿಗೂ ಆಮಂತ್ರಣವು ಹೋಯಿತು. ದೀಪಾಳಿಯ ಆರತಿಗೆಂದು ನಸುಕಿನಲ್ಲಿ ದೇಸಾಯರೂ ನರಹರಿಯೂ ಕುಳಿತಾಗ ಅದೆಷ್ಟು ಹಿಗ್ಗಿ ಕುಸುಮಾ ಎಲ್ಲವನ್ನೂ ಸಿದ್ಧಪಡಿಸಿದಳು! ನೀಲಾಂಜನೆಗಳಲ್ಲಿ ಶಾಂತವಾಗಿ ಬೆಳಗುವ ಆ ಎರಡು ದೀಪಗಳ ಕುಡಿಗಳೊಡನೆ ಅವಳ ಕಣ್ಣಲ್ಲಿಯ ನಗೆಯೂ ಮೊಗದ ಮೇಲಿನ ಕಳೆಯೂ ಹೇಗೆ ಸ್ಪರ್ಧಿಸುತ್ತಿದ್ದವು! ತನ್ನ ಅಮೃತಹಸ್ತದಿಂದ ಅವಳು ತನ್ನ ತಲೆಗಿಟ್ಟ ಎಣ್ಣೆಯ ಬೊಟ್ಟು ಅದೆಂತಹ ದಿವ್ಯಸ್ಫೂರ್ತಿಯಾಗಿ ದೇಹದಲ್ಲೆಲ್ಲ ಸಂಚರಿಸಿತು! ದೇಸಾಯರು

ತೋರಿಸಿದ ಪ್ರೀತಿಯಲ್ಲಾಗಲಿ ಕುಸುಮಾನ ನಲುಮೆಯಲ್ಲಾಗಲಿ ನರಹರಿಗೆ ಅನಂತಸಮೃದ್ಧಿಯು ಕಂಡಿತೇ ಹೊರತು ಕೊರತೆ ಕಾಣಲಿಲ್ಲ ಅವನ ಅನಿಸಿಕೆಗಳೆಲ್ಲ ಗ್ರೀಷ್ಮಾಗಮನವನ್ನು ಕಂಡ ಹಿಮದಂತೆ ಮಾಯವಾದವು. ಮತ್ತೆ ಅದೇ ಮೋಹಕವಾದ ಸಂಭಾಷಣೆ, ವಿನೋದ, ಚರ್ಚೆ, ಅಭ್ಯಾಸ, ವಿವರಣೆ ಅಕಸ್ಮಾತ್ತಾಗಿ ಮುಗಿಲಿನಷ್ಟು ಮೇಲಕ್ಕೆ ಹೋಗಿದ್ದ ಸ್ವರ್ಗವು ಮತ್ತೆ ನರಹರಿಯ ಸುತ್ತಲು ಕಾಣಿಸಿಕೊಂಡಿತು. ದೀಪಾವಳಿಯ ದಿನಗಳಲ್ಲಿ ಸಂಜೆ ಮಾಡಿ ಅವನು ವಸತಿಗೃಹಕ್ಕೆ ಹೋಗುತ್ತಿದ್ದ. ಹಗಲೆಲ್ಲ ದೇಸಾಯರ ಮನೆಯಲ್ಲಿಯೇ ಇರುತ್ತಿದ್ದ. ಒಂದೊಂದು ದಿನ ಪಗಡಿಯಾಟವಾಗುತ್ತಿತ್ತು. ದೇಸಾಯಿ – ನರಹರಿಯರು ಒಂದು ಕಡೆಗಾಗಿ ರಂಗಾಸಾನಿ – ಕುಸುಮಾ ಇನ್ನೊಂದು ಕಡೆಗಾಗಿದ್ದರು. ಆಗ ತಾನು ಸೋತರೂ ಸಂತೋಷ; ಗೆದ್ದರೂ ಸಂತೋಷ. ಜೀವನವೆಂದರೆ ಹೀಗಿರಬೇಕೆಂದ ನರಹರಿ ತಮ್ಮ ಆಟವನ್ನು ನೋಡಿದಾಗ ಫರ್ಡಿನಾಂಡ್—ಮಿರಾಂಡಾ ಆಡಿದ ಚದುರಂಗದಾಟದ ನೆನಪು ಅವನಿಗೆ ಬರುತ್ತಿತ್ತು.

ಆದರೆ ಆ ಸ್ವರ್ಗಸುಖಕ್ಕೆ ಇಷ್ಟರಲ್ಲಿಯೇ ಮತ್ತೆ ಕಾರ್ಮೋಡವು ಕವಿಯಿತು. ಒಂದು ದಿನ ಇಳಿಹೊತ್ತಿನಲ್ಲಿ ಹೊಸ ಕವಿತೆಯ ಪುಸ್ತಕವೊಂದರಲ್ಲಿಯ ಕವಿತೆಯ ಅರ್ಥವನ್ನು ನರಹರಿಯು ಕುಸುಮಾನಿಗೆ ಹೇಳುತ್ತಿದ್ದ. ನಡುವೆ ಕುಸುಮಾ ಯಾವ ಕೆಲಸಕ್ಕೋ ಎದ್ದು ಒಳಗೆ ಹೋದಳು. ಆಗ ಸಹಜವಾಗಿ ಆ ಪುಸ್ತಕದ ಪಾನು ತಿರುವಿ ನೋಡುತ್ತಿರುವಾಗ ಒಂದೆಡೆಗೆ ಸಣ್ಣ ಅಕ್ಷರಗಳಲ್ಲಿ ಶೀನೂನ ಕೈ ಬರಹವು ನರಹರಿಯ ಕಣ್ಣಿಗೆ ಬಿದ್ದಿತು. "Presented to Miss Kusuma, G Desai" ಎಂದು ಶೀನು ಬರೆದಿದ್ದ. ಶೀನೂನ ಕೈ ಬರಹವನ್ನು ಗುರುತಿಸಿದೊಡನೆ ನರಹರಿಯ ಹೃದಯವು ಕಂಪಿಸಿತು. ಹಾಗಾದರೆ ತಾನು ಕಲಿಸುವ ಪುಸ್ತಕ,—ಶೀನು ಕಾಣಿಕೆಯಾಗಿ ಕೊಟ್ಟ ಪುಸ್ತಕ! ಶೀನು ಮತ್ತೇನನ್ನು ಕಾಣಿಕೆಯಾಗಿ ಕೊಟ್ಟಿರಬಹುದು? ಅದನ್ನು ಕುಸುಮಾ ಸ್ವೀಕರಿಸಿದ್ದು ಹೇಗೆ? ನಾನು ಬರಿಯ ಉಪಾಧ್ಯಾಯನಾದೆನಲ್ಲ! ಎಂದು ನರಹರಿಯು ಒಳಗೊಳಗೇ ಬಿಕ್ಕಿದ. ಕುಸುಮಾ ತಿರುಗಿ ಬಂದಾಗ ಮತ್ತೆ ಮೊದಲಿನಂತೆ ಓದು ನಡೆಯಿತು ತಾನು ಕಂಡದ್ದನ್ನೂ ಅದರಿಂದ ತನ್ನ ಮನಸ್ಸಿನ ಮೇಲಾದ ಪರಿಣಾಮವನ್ನೂ ನರಹರಿಯು ತೋರಿಸಿಗೊಡಲಿಲ್ಲ.

ಆದರೆ ಮುಂದೆ ಇನ್ನೂ ಕೆಲವು ದಿನ ಸೂಟಿಯಿದ್ದರೂ ನರಹರಿಯು ಕ್ವಚಿತ್ತಾಗಿ ದೇಸಾಯರ ಮನೆಗೆ ಹೋದ.. ಹೋದರೂ ಬಹಳ ಹೊತ್ತು ನಿಲ್ಲುತ್ತಿರಲಿಲ್ಲ. ಅಭ್ಯಾಸದ ಒತ್ತಡದಲ್ಲಿ ನರಹರಿಗೆ ವೇಳೆಯಿರಲಿಕ್ಕಿಲ್ಲವೆಂದು ತಿಳಿದು ಕುಸುಮಾ ಸುಮ್ಮನಿದ್ದಳು.

ಒಮ್ಮೆ ದೇಸಾಯರು ಸಹಜವಾಗಿ ಮಾತಿನ ಓಘದಲ್ಲಿ: "ಶೀನು ಮುಂದಿನ ವರ್ಷ ಬಿ ಎ. ಮುಗಿಸುತ್ತಾನೆ. ನಿನ್ನ ಒಂದು ವರ್ಷ ಸುಮ್ಮನೆ ಹೋದಂತಾಯಿತು" ಎಂದು ನುಡಿದಿದ್ದರು ನರಹರಿಯು ಅದರ ಬಗ್ಗೆ ಆಳವಾಗಿ ವಿಚಾರ ಮಾಡಿ,—"ದೇಸಾಯರು ಈಗ ತಮ್ಮ ಮನಸ್ಸಿನಲ್ಲಿ ನನ್ನನ್ನೂ ಶೀನೂನನ್ನೂ ತೂಗಿ ನೋಡುತ್ತಾರೆ" ಎಂದು ಮನಸ್ಸಿನಲ್ಲಿಯೇ ಅಂದುಕೊಂಡ.

ಸೂಟಿ ಮುಗಿಯಲಿಕ್ಕೆ ಇನ್ನೂ ಕೆಲವು ದಿನಗಳಿದ್ದಾಗ ಒಮ್ಮೆ ಶೀನೂನ ಕೋಣೆಯನ್ನು ತೆರೆಯುವ ಪ್ರಸಂಗ ಬಂದಿತ್ತು. ಅದರ ಬೀಗದ ಕೈಯನ್ನು ಶೀನು ನರಹರಿಯ ಕಡೆಗೇ ಬಿಟ್ಟು ಹೋಗಿದ್ದ ನರಹರಿಗೆ ಕೆಲವು ಪುಸ್ತಕಗಳು ಬೇಕಾಗಿದ್ದವು ಶೆಲ್ಫಿನ ಮೇಲೆ ಪುಸ್ತಕಗಳನ್ನು ಹುಡುಕುತ್ತಿರುವಾಗ ಅಲ್ಲಿ ದಂತಹಣಿಗೆಯ ಪುಡಿಕೆಯೊಂದು ಅವನ ಕಣ್ಣಿಗೆ ಬಿತ್ತು. ಆ ಪುಸ್ತಕಗಳನ್ನೂ ಪುಡಿಗೆಯನ್ನೂ ಕೂಡಿಯೇ ಅಲ್ಲಿಟ್ಟು ನರಹರಿ ಹೊರಗೆ ಬಂದ. ಕುಸುಮಾನಿಗೆ ಶೀನು ಕೊಡಬೇಕೆಂದು ಮಾಡಿದ್ದ ಕಾಣಿಕೆಗಳಲ್ಲಿ ಇದೂ ಒಂದೆಂದು ಅವನಿಗೆನಿಸಿತು.

ಹೀಗೆ ಸರಿದತ್ತ ಸರ್ಪವೂ ಕೈಯಿಟ್ಟಲ್ಲಿ ಚೇಳೂ ಬರುತ್ತಿರುವಂತೆ ನರಹರಿಗೆ ಭಾಸವಾಯಿತು ಮನಸ್ಸಿನ ಶಾಂತಿಯೆಲ್ಲ ಮಾಯವಾಯಿತು. ಈ ಎಲ್ಲ ಗೊಂದಲದಲ್ಲಿ ಅಭ್ಯಾಸವೇ ತನ್ನ ಕೈವಾರಿಯೆಂದು ನರಹರಿಯು ಪುಸ್ತಕಗಳ ನಡುವೆ ಕುಳಿತ ಆದರೆ ಓದುತ್ತ ಹೋದ ಹಾಗೆಲ್ಲ ಅವನ ಮಸ್ತಕವು ಭ್ರಮಿಸ ಹತ್ತಿತು ಬಗೆಗೆ.ಹೀಗೆ ಬೇಗೆ ಬಿದ್ದಾಗ ಅವನಿಗೆ ಸ್ವಾಮಿದಾಸರ ನೆನಪಾಯಿತು. ಅವರು ಈಗ ಪುಣೆಯಲ್ಲಿದ್ದಿದ್ದರೆ....! ಅವರ ಸನ್ನಿಧಾನವೇ ನರಹರಿಗೆ ಅಮೃತಸ್ಪರ್ಶವಾಗುತ್ತಿತ್ತು. ಅವರ ಹತ್ತಿರದಲ್ಲಿದ್ದಾಗ ಯಾವ ಕ್ಷುದ್ರ ವಿಚಾರಗಳೂ ಅವನನ್ನು ಕೆಣಕುವ ಧೈರ್ಯ ಮಾಡುತ್ತಿರಲಿಲ್ಲ ಪ್ರೀತಿಯು ಎಷ್ಟು ದೈವಿಕವಾದರೂ ಮರ್ತ್ಯವಾದುದು. ಅಂತೇ ನೂರೆಂಟು ತಾಪಗಳೂ ದುಃಖಗಳೂ ಅದಕ್ಕೆ ಅಂಟಿಕೊಂಡಿರುತ್ತವೆ. ಆದರೆ ಸ್ವಾಮಿದಾಸರ ಸಾನ್ನಿಧ್ಯ

ದಲ್ಲಿ ಸತ್ಯಶೋಧನೆಯನ್ನು ನಡೆಯಿಸುವದು ಮೊದಲಿನಿಂದ ಕೊನೆಯ ವರೆಗೆ ಹಿಗ್ಗಿನ ಸೆಲೆ. ಅಲ್ಲಿ ಯಾವ ಕೊರತೆಗಳೂ ಕಾಣಲಿಲ್ಲ. ಮತ್ತೆ ಧ್ಯಾನದ ಸುಯುಮುವನ್ನು ಪಡೆಯಲು ನರಹರಿಯು ಹವಣಿಸಿದ. ಆದರೆ ಅದು ಹೇಗೋ ಧ್ಯಾನದಿಂದ ಜಾರಿಕೊಂಡು ಅವನು ಮತ್ತೆ ಚಿಂತೆಯ ಅಗ್ನಿ ಕುಂಡದಲ್ಲಿ ಬೀಳುತ್ತಿದ್ದ.

ಶೀನು ಮೊಗ್ಗಾವಿಯಿಂದ ತಿರುಗಿ ಬಂದಾಗ, ಅವನು ಬಂದೊಡನೆ ದೇಸಾಯರ ಮನೆಗೆ ಹೋಗಲು ಹಾತೊರೆದದ್ದು ಆಶ್ಚರ್ಯವಲ್ಲ. ಅಲ್ಲಿಯ ಸುದ್ದಿಗಳನ್ನು ಕುಸುಮಾ-ದೇಸಾಯರು ಉತ್ಸುಕತೆಯಿಂದ ಕೇಳುವರೆಂಬುದು ಅವನಿಗೆ ಗೊತ್ತಿತ್ತು. ಮುಂಜಾನೆ ಗಾಡಿಯಿಂದ ಶೀನು ಬಂದಾಗ ನರಹರಿಯು ಫರ್ಗ್ಯುಸನ್ ದಿನ್ನೆಯ ಕಡೆಗೆ ತಿರುಗಾಡಲು ಹೋಗಿದ್ದ. ಆಗ ಅದೇ ಉದ್ದೇಶದಿಂದ ಅತ್ತಕಡೆಗೆ ನಡೆದಿದ್ದ ದೇಸಾಯರು ಅವನಿಗೆ ಭೆಟ್ಟಿಯಾದರು. ದಿನ್ನೆಯಿಂದ ಇಳಿಯುವಾಗ, "ಮನೆಗೆ ಬಾ, ನರಹರಿ! ಅನೇಕ ದಿನ ನೀನು ಬಂದೇ ಇಲ್ಲ; ಅಭ್ಯಾಸ ಜೋರಾದಂತೆ ಕಾಣುತ್ತದೆ." ಎಂದು ಸಹಜ ವಿನೋದದಿಂದ ದೇಸಾಯರು ನರಹರಿಯನ್ನು ಕರೆದುಕೊಂಡು ಹೋಗಿದ್ದರು. ಅವರು ಹೋದಾಗ ಕುಸುಮಾ ಅಡಿಗೆಮನೆಯ ಕೆಲಸದಲ್ಲಿದ್ದಳು. ಮುಗಿಸಿ ಕೈ ತೊಳೆದುಕೊಂಡು ಹೊರಗೆ ಬರಬೇಕಾದರೆ ತುಸು ವೇಳೆಯಾಯಿತು. ಇಷ್ಟರಲ್ಲಿ ಶೀನು ತನ್ನ ಕೋಣೆಗೆ ಹೋಗಿ ಚಹ ಮುಗಿಸಿಕೊಂಡು ತುಸು ವಿಶ್ರಾಂತಿ ಹೊಂದಿ ದೇಸಾಯರ ಮನೆಗೆ ಬಂದ. ಹೊರಗೆ ಅವನ ದನಿ ಕೇಳಿದೊಡನೆ ಅದೇ ಬರುವ ತಯಾರಿಯಲ್ಲಿದ್ದ ಕುಸುಮಾ ಲಗುಬಗೆಯಿಂದ ಬಂದು "ಮೊಗ್ಗಾವಿಯಿಂದ ಯಾವಾಗ ಬಂದೆ? ಏನು ಸುದ್ದಿ? ಅವ್ವ-ಅಣ್ಣ-ಅತ್ತಿಗೆ ಎಲ್ಲರಿಗೂ ಕ್ಷೇಮವಷ್ಟೆ?" ಎಂದು ಪ್ರಶ್ನೆ ಮಾಡಿದಳು.

ನರಹರಿಗೆ ಇದು ವಿಪರೀತವಾಗಿ ಕಂಡಿತು. ತಾನು ಬಂದು ಇಷ್ಟು ಹೊತ್ತು ಕುಳಿತಿರುವಾಗ ಹೊರಗೆ ಬರದೆ ಇದ್ದ ಕುಸುಮಾ ಶೀನು ಬಂದೊಡನೆ ಎಷ್ಟು ಉತ್ಸುಕತೆಯಿಂದ ಬಂದಳು! ಏನು ಉತ್ಸಾಹವನ್ನು ತೋರಿಸಿದಳು! ಎಂದು ಅವನು ಒಳಗಿಂದೊಳಗೇ ಕೊರಗಿದ. ಎಳೆಯ ಕನ್ನೆಯು ತನ್ನವರ ಕ್ಷೇಮವನ್ನು ತಿಳಿಯಲು ತೋರಿಸಿದ ಉತ್ಸುಕತೆಯದು; ಹೆಚ್ಚೇನೂ ಇಲ್ಲ: ಎಂದು ಅವನು ಉಳಿದ ವೇಳೆಯಲ್ಲಿ ಅರ್ಥ ಮಾಡಬಹುದಾಗಿತ್ತು. ಆದರೆ ಪೂರ್ವಗ್ರಹದ ಈಗಿನ ಮನಃಸ್ಥಿತಿಯಲ್ಲಿ ಅದು ಸಾಧ್ಯವಾಗಲಿಲ್ಲ.

"ಎಲ್ಲರೂ ಕ್ಷೇಮ. ಆದರೆ ಜಾನಕಿಬಾಯರು ಮಗನ ಮನೆಯಲ್ಲಿ ಎಷ್ಟು ದಿನ ಇರುವರೋ ಹೇಳಲಾಗುವದಿಲ್ಲ." ಎಂದು ನಗುತ್ತ ಶೀನು ಹೇಳಿದ

"ಅದೇಕೆ?" ಎಂದು ತುಸು ಗಾಬರಿಯಾಗಿ ಕುಸುಮಾ ಕೇಳಿದಳು

"ಗೊತ್ತೇ ಇದೆ ಮನೆಯಲ್ಲಿ ಮೇನಕಿಬಾಯರ ಪ್ರಖರತೆಯನ್ನು ಸಹಿಸುವದು ಅವರಿಗೆ ಸಾಧ್ಯವಾಗುತ್ತಿಲ್ಲ" ಎಂದ ಶೀನು.

ತಾಯಿಯು ಮುಂದೇನು ಮಾಡುವಳೆಂಬ ಚಿಂತೆಯು ಕುಸುಮಾನ ಮೊಗದಲ್ಲಿ ಸುಳಿದು ಹೋಯಿತು.

ಇದನ್ನೆಲ್ಲ ನರಹರಿಯು ದೇಸಾಯರೊಡನೆ ಕುಳಿತು ಕೇಳುತ್ತಿದ್ದ. ಈ ಸಮಯದಲ್ಲಿ ನರಹರಿಯನ್ನು ಮಾತನಾಡಿಸಬೇಕಿತ್ತೆಂಬುದು ಕುಸುಮಾನ ಸರಳ ಹೃದಯಕ್ಕೆ ಹೊಳೆಯಲಿಲ್ಲ ನರಹರಿಯನ್ನು ಅವಳು ತನ್ನ ಜೀವನದ ನಿರಂತರ ಜೊತೆಗಾರನೆಂದು ಭಾವಿಸಿದ್ದಳು ತಪ್ಪು ತಿಳುವಳಿಕೆ, ಉಪಚಾರ,- ಇವೆಲ್ಲವುಗಳನ್ನು ಮೀರಿದ ಪ್ರೀತಿಯು ಅವಳ ಹೃದಯದಲ್ಲಿ ಮೆರೆಯುತ್ತಿತ್ತು. ನರಹರಿಯ ಮಾನಸಿಕ ತಾಪದ ಅರಿವೇ ಅವಳಿಗಿರಲಿಲ್ಲ. ದೇಸಾಯಿ-ನರಹರಿಯರ ಸಲುವಾಗಿ ಕುಸುಮಾ ಚಹ ಮಾಡಿದ್ದಳು ಈಗ ಇನ್ನೊಂದು ಕಪ್ಪು ಶೀನೂಗೆ ಮಾಡಬೇಕೆಂಬ ಅವಸರದಲ್ಲಿ ಕುಸುಮಾ ಮತ್ತೆ ಒಳಗೆ ನಡೆದಳು

ಮುಂದೆ ನರಹರಿ-ಶೀನು ಕೂಡಿ ವಸತಿಗೃಹದ ಕಡೆಗೆ ನಡೆದಾಗ ಮೊಗ್ಗಾವಿಯ ಉಳಿದ ವಿವರಗಳನ್ನು ಶೀನು ಹೇಳಿದ ಎಲ್ಲದಕ್ಕೂ ನರಹರಿಯು ಹೂಂ ಕೊಡುತ್ತ ನಡೆದ

"ಏಕೆ, ನರಹರಿ? ಇಷ್ಟೇಕೆ ಸುಮ್ಮನಿದ್ದೀಯೆ? ರಜೆಯಲ್ಲಿ ಆಗಬೇಕಾದಷ್ಟು ಅಭ್ಯಾಸ ಆಗಿಲ್ಲವೆ?" ಎಂದು ಶೀನು ಪ್ರಶ್ನೆ ಮಾಡಿದ.

"ಆಗಿದೆ ತಕ್ಕಮಟ್ಟಿಗೆ. ಗಣಪತರಾಯರಿಗೆ ಕುಶಲವಷ್ಟೆ?" ಎಂದ ನರಹರಿ.

ಅವನ ಅಸಮಾಧಾನದ ಪ್ರಶ್ನೆಯನ್ನು ಬಿಡಿಸುವ ವೇಳೆಯಿದಲ್ಲವೆಂದು ಶೀನು ಮಾತನ್ನು ಅಲ್ಲಿಗೇ ನಿಲ್ಲಿಸಿದ.

ಮುಂದೆ ಟರ್ಮ ಪ್ರಾರಂಭವಾದಾಗ ನಿತ್ಯದ ಜೀವನವು ನಿತ್ಯದಂತೆ ನಡೆಯಿತು ಇಬ್ಬರು ಸ್ನೇಹಿತರೂ ಮೊದಲಿನಂತೆ ಸಲಿಗೆಯಿಂದಿದ್ದರು. ಆದರೆ ಒಂದು ಒಳಗುಟ್ಟು ಮಾತ್ರ ಅವರ ಹೃದಯಗಳ ಸಮ್ಮಿಲನವನ್ನು ಅಪೂರ್ಣವಾಗಿಸಿತ್ತು.

## ಪ್ರಕರಣ ೬೧

## ಮುದ್ರಾಧಾರಣ

ಜಾನಕಿಬಾಯಿಯರ ಅಂತರಂಗದಲ್ಲಿ ಹೊತ್ತುತ್ತಿದ್ದ ಜ್ವಾಲೆಯು ಒಮ್ಮೆ ಮನೆಯನ್ನೇ ಆವರಿಸಬಹುದೆಂದು ಕೇಶವನಿಗೆ ಹೊಳೆದಿತ್ತು. ಅವನು ಅದಕ್ಕೆ ಸಿದ್ಧನಾಗಿದ್ದ. ದಿನಾಲು ಮನೆಯಲ್ಲಿ ನಡೆಯುತ್ತಿದ್ದ ಅತ್ತೆ-ಸೊಸೆಯಂದಿರ ದ್ವಂದ್ವಗಳಲ್ಲಿ ಅವನು 'ಅಂಪೈರ್'ನೂ ಆಗಿರಲಿಲ್ಲ; ಪ್ರಚೋದಕನೂ ಆಗಿರಲಿಲ್ಲ; ಬರಿ ತಟಸ್ಥವೃತ್ತಿಯ ಪ್ರೇಕ್ಷಕನಾಗಿದ್ದ. ಮನೆಯಲ್ಲೂ ಅಮಲು ನಡೆಯಬೇಕಾಗಿದ್ದು 'ರಾಣಿ ಸರಕಾರ'ದ್ದೆಂದು ಮಾತ್ರ ಅವನ ನಿಶ್ಚಯವಾಗಿತ್ತು.

ಒಂದು ದಿನ ಸ್ವಾಮಿಗಳ ಆಗಮನವಾಯಿತು,—ಮೊಗ್ಗಾವಿಗೆ ಯಥಾ ಪ್ರಕಾರ ಮೊಗ್ಗಾವಿಯ ವೈಷ್ಣವ ಸಮಾಜದಲ್ಲಿ ಗಡಿಬಿಡಿಯೆದ್ದಿತು. ಶ್ರೀಮಂತರು ಗಾಬರಿಯಾದರು; ಬಡ ವೈದಿಕರು ಹಿಗ್ಗಿದರು; ನಿರ್ಧನಿಕ ಗ್ರಹಸ್ಥರು ಮೂರ್ಛೆ ಹೋದರು. ಧಾರ್ಮಿಕ, ಸನಾತನಿ ಸ್ತ್ರೀಸಮು ದಾಯಕ್ಕೆ ಮಾತ್ರ ವೈಕುಂಠವೇ ಸನಿಯಕ್ಕೆ ಬಂದಂತಾಯಿತು ಮುದ್ರಾ ಧಾರಣದ ಸಂಭ್ರಮದಲ್ಲಿ ಒಂದು ಕ್ಷಣ ಜಾನಕಿಬಾಯಿಯರು ಮನೆಯಲ್ಲಿಯ ನಕುಲ-ಸರ್ಪ ಸಂಬಂಧವನ್ನು ಸಹ ಮರೆತು ಮೇನಕಿಗೆ: "ಮೇನಕಿಬಾಯಿ,— ನಾಳೆ ಮುದ್ರಾಧಾರಣ ಮಾಡಿಸಿಗೊಂಬೋಣ. ಅನಾಯಾಸ ದೇವರ ಹಾಂಗ ಸ್ವಾಮಿಗೋಳು ಬಂದಾರ!" ಎಂದು ಹೇಳಿದರು.

ಮೇನಕಿಯು ಮೋರೆ ಗಂಟಿಕ್ಕಿ ಒಂದೆರಡು ನಿಮಿಷ ಮಾತನಾಡಲಿಲ್ಲ. ಆಮೇಲೆ ಬುಸುಗುಡುತ್ತಿರುವ ಹಾವಿನಂತೆ ಉತ್ತರ ಕೊಟ್ಟಳು: "ಈ ಸ್ವಾಮಿ ಗೋಳ ಕೈಯ್ಯಿಂದ ಮೈ ಸುಡಿಸಿಗೊಂಬೋ ಸಂಕಟ ನನಗ್ಯಾಕ? ಪೋಸ್ಟುಮಾಸ್ತರ ಕಡಿಂದ ಛಾಪು ಹೊಡಿಸಿಗೊಂಡ್ಹಾಂಗ ಹೊಡಿಸಿಗೋಳಲಿಕ್ಕೆ ನಾ ಏನು ಕಾರ್ಡು-ಪಾಕೀಟೇನು? ಮದುವಿ ಆದ ಹೆಂಗಸು ನಾನು. ಈ ಮಠದ ಪೈಲವಾನರ ಮುಂದೆಲ್ಲೆ ನಾ ಕೈ ತಕ್ಕೊಂಡು ನಿಂದರಲಿ? ಎದಿಮ್ಯಾಲ ಕೈಯ್ಯಿಟ್ಟು ಹೇಳತೇನಿ, ಇದು ಎಂದೆಂದೂ ನನ್ನಿಂದ ಆಗೋಣಿಲ್ಲ!"

ಮಾತನಾಡಬಾರದೆ ಆಡಿ ಕಪಾಳಮೋಕ್ಷವಾದಂತಾಯಿತು ಜಾನಕಿಬಾಯರಿಗೆ. ಉಕ್ಕಿ ಬರುತ್ತಿರುವ ಸಿಟ್ಟನ್ನು ಬಿಗಿ ಹಿಡಿದು ಅವರ ಮೈಯೆಲ್ಲ ಥರಥರ ನಡುಗಿತು. ಅತಿ ಪ್ರಯಾಸದಿಂದ ಸಾಮೋಪಾಯವೆಂದು ಅವರು ಇನ್ನೊಂದು ಮಾತು ಹೇಳಿದರು: "ಅಯ್ಯಯ್ಯ! ಲೋಕದಾಗೆಲ್ಲಾ ಹೆಂಗಸಾಗಿ ಹುಟ್ಟಿದ್ದು ನೀ ಒಬ್ಬಾಕೇ ಏನು? ಮುದ್ರಾಧಾರಣ ಮಾಡಿಕೊಂಬೋ ನಾವೆಲ್ಲಾ ಹೆಂಗಸರಲ್ಲೇನು? ಮುದ್ರಾಧಾರಣಾ ಒಲ್ಲೆ ಅಂದು ಯಾವ ರವ ರವ ನರಕಕ್ಕ ಹೋಗಬೇಕಂತೀದಿ!"

ಮೇನಕಿಯ ಕೋಪವು ಈಗ ಕಿಡಿಕಿಡಿಯಾಗಿ ಉದುರಿತು. ಅವಳ ಅಕ್ಕಸತನವೆಲ್ಲ ನಾಲಗೆಯ ತುದಿಯ ಮೇಲೆಯೇ ಬಂದು ನಿಂತಿತು. "ಅಯ್ಯಯ್ಯ! ನಿಮಗ ಸಿಗೋ ವೈಕುಂಠ ನನಗ ಬ್ಯಾಡಾ ಅಂದ್ರ ನನ್ನ ಮ್ಯಾಲ ಯಾಕ ಅಷ್ಟು ಸಿಟ್ಟು? ಅವರ ಮುದ್ರಾ ತಗೊಂಡು ಮುಕ್ತಿ ಸಿಗಲಿ ನಿಮಗ! ಅವರ ತೀರ್ಥಾ ಕುಡದು ಪುಷ್ಪಕ ವಿಮಾನದಾಗ ಕೂತಕೊಂಡು ಹೋಗ್ರಿ ನೀವು ಸ್ವರ್ಗಕ್ಕ! ನನಗ ಆ ತೀರ್ಥಾನು ಬ್ಯಾಡ, ಆ ಮುದ್ರಾನು ಬ್ಯಾಡ! ಮದುವಿ ಆದ ಮರುದಿವಸದಿಂದ ಜಗಳಾಡಿ ಗಂಡನ್ನ ಮನಿ ಬಿಟ್ಟು ಓಡಿಸಿದ ನೀವು ಬೇಕಾದರ ಅಗತ್ಯ ತಗೋರ್ರಿ, ನಾವೇನು ಬ್ಯಾಡ ಅಂಬೂದಿಲ್ಲ. ತಗೊಂಡು, ಬರೋ ಪುಣ್ಯಾನ ಎರಡೂ ಕೈಲೆ ಸುರಕೋರ್ರಿ!" ಎಂದು ಮೇನಕಿಯು ಗರ್ಜಿಸಿದಳು.

ಈ ಗರ್ಜನೆಯಿಂದ ಜಾನಕಿಬಾಯರಿಗೆ ದಿಕ್ಕೇ ತಪ್ಪಿತು. "ಅಯ್ಯ! ನಿನ್ನ ನಾಲಗಿ ಸೀಳಹೋಗಲಿ! ಗಂಡ ಬಿಟ್ಟ ಹೆಣ್ಣು ಅಂತ ನನ್ನ ಹಗರಣ ಮಾಡತೀ ಏನು? ಸ್ವಾಮಿಗೋಳ್ನೂ ದೇವರನ್ನ ಬ್ಯಾರೆ ಬೈದು ಮುಚ್ಚತಿ ಕುಲಕಂಟಕಿ ಆಗಿ! ನನ್ನ ಮಗನೂ ನಿನ್ನ ಗಂಡ ಆಗದೆ ಇದ್ರ ಎಂದೋ ನಿನ್ನ ಕುಂಕುಮ ಅಳಿಸಿ ಹೋಗಲಿ,—ನಿನ್ನ ಮಂಗಳಸೂತ್ರ ಅಂಗಳದಾಗ ಕಳಚಿ ಬೀಳಲಿ ಅಂತ ಶಪಸತಿದ್ದೆ! ನನ್ನ ಮಗನ ಕೈ ಹಿಡದೀದಿ ನೀನು. ಅದಕ ನನ್ನ ಬಾಯಿ ಏಳವಲ್ಲದು!" ಎಂದು ಜಾನಕಿಬಾಯರು ಆಕ್ರೋಶಿಸಿದರು.

"ಶಪಿಸರಿ! ಶಪಿಸರಿ! ವಿಶ್ವಾಮಿತ್ರ-ವಸಿಷ್ಠರ ಹಂಗ ಶಾಪಾನುಗ್ರಹ ಶಕ್ತಿ ನಿಮ್ಮದು! ಮಸ್ತ ಮಂದಿನ್ನ ನೋಡೇನಿ ಹೀಂಗ ಶಾಪಾ ಕೊಡೋವರ್ನ

ನಾನೂ! ನಿಮ್ಮ ನಾಲಗೀ ಮ್ಯಾಲ ಈ ಲೋಕ ನೀತಿದ್ರ ಹತ್ತು ಸಾರಿ ಬೂದಿ ಆಗತಿತ್ತು ಅದು ಇಷ್ಟರಾಗ!" ಎಂದಳು ಮೇನಕಿ.

ಆದರೆ ಅವಳಿಗೆ ಉತ್ತರ ಕೊಡ-ವಷ್ಟು ಪ್ರಜ್ಞೆಯು ಈಗ ಜಾನಕಿ ಬಾಯರಿಗೆ ಉಳಿದಿರಲಿಲ್ಲ. ಕೇಶವನು ಹೊತ್ತೇರಿದರೂ ತನ್ನ ಕೋಣೆಯಲ್ಲಿ ಇನ್ನೂ ಮಲಗಿಕೊಂಡಿದ್ದ. "ಕೇಶ್ಯಾ! ಕೇಶ್ಯಾ!" ಎಂದು ಕೂಗುತ್ತ ಜಾನಕಿಬಾಯರು ಅವನ ಕೋಣೆಯೆಡೆಗೆ ಧಾವಿಸಿದರು. "ಕೇಶ್ಯಾ, ಇನ್ನು ಈ ಮನ್ಯಾಗ ನಾ ಇರೋದು ಸಾಧ್ಯ ಇಲ್ಲಾ! ಮುದ್ರಾಧಾರಣಾ ಮಾಡಿಕೋ ಅಂದ್ರ ನನ್ನ ಕುಲಕೋಟೀ ಎಲ್ಲಾ ಉದ್ಧಾರ ಮಾಡಿದಳು ನಿನ್ನ ಹೇಣ್ತಿ. ನಾ ಗದುಗಿಗೆ ಹೋಗತೇನಿ ಇನ್ನು ಈ ಮನ್ಯಾಗ ಒಂದು ಅಗಳು ಅನ್ನಾ ತಿಂದ್ರ ಯಮನ ನರಕದಾಗ ಯಮನ ಎಂಜಲಾ ತಿಂದ ಹಾಂಗ!" ಎಂದು ಅವರು ಕಣ್ಣೀರು ತೆಗೆದರು

ಮಲಗಿಕೊಂಡಲ್ಲಿಯೇ ಕೇಶವನು ನಡೆದ ಸಂವಾದವನ್ನು ಕೇಳಿದ್ದ. ಕೇಳಿ ಕೇಳಿ ಅವನಿಗೆ ದಡ್ಡು ಬಿದ್ದಿತ್ತು. ಈ ವಿಷಯದಲ್ಲಿ ಹೆಚ್ಚು ಮಾತ ನಾಡ-ವಹೆಂದರೆ ಸುಮ್ಮನೆ ಎಲ್ಲರಿಗೂ ಮನಸ್ತಾಪವೆಂದು ಅವನಿಗೆ ಗೊತ್ತಿತ್ತು. ಮಲಗಿಕೊಂಡಲ್ಲಿಂದಲೇ "ಯಾವ ಗಾಡಿಗೆ ಊರಿಗೆ ಹೋಗತಿ ಅವ್ವಾ?" ಎಂದು ಕೇಶವನು ಕೇಳಿದ

ಜಾನಕಿಬಾಯರು ಅವಾಕ್ಕಾದರು. ಮಗನಿಂದ ಸಹಾನುಭೂತಿ ದೊರೆತೀತೆಂದು ಅವರಿಗೆನಿಸಿದ್ದಿಲ್ಲ. ಆದರೆ ಈ ಸಮಯದಲ್ಲಿ ಇಂಥ ಪ್ರಶ್ನೆಯು ಅವನಿಂದ ಬಂದೀತೆಂದು ಅವರು ಎಣಿಸಿರಲಿಲ್ಲ. ದೊಡ್ಡ ದನಿ ತೆಗೆದು ಜಾನಕಿಬಾಯರು ಅಳತೊಡಗಿದರು. "ಏ ಕೇಶ್ಯಾ! ಒಂಬತ್ತು ತಿಂಗಳು ನಿನ್ನ ಹೊಟ್ಯಾಗ ಹೊತಗೊಂಡು ತಿರುಗಾಡಿದೆ! ಹ-ಟ್ಟಿದ ಮ್ಯಾಲ ನನ್ನ ಕರುಳು ಹಿಂಡಿ ನಿನ್ನ ಹೊಟ್ಟೆಗೆ ಹಾಲೆರೆದೆ! ದಿನಾ ಹೋದ್ಹಾಂಗ ನನ್ನ ಜೀವದಕಿಂತಾ ಹೆಚ್ಚಾಗಿ ನಿನ್ನ ನೋಡಿಕೊಂಡೆ! ಈಗ ಗಂಡಾ ಹೇಣ್ತಿ ಕೂಡಿ ಒಳಸಂಚು ಮಾಡಿ ನನ್ನ ಹೊರಗ ಹಾಕ್ತೀರಿ. ಹಾಕರಿ! ಧರ್ಮಾ ಮಾಡರೀ ಅಂತ ಹೇಳಲಿಕ್ಕೆ ಬಂದ ತಾಯೀ ಮ್ಯಾಲ ಮರ್ಮಾ ಮಾಡೋ ನಿಮ್ಮನ್ನು ದೇವರು ನೋಡಿಕೋತಾನ! ನಿನ್ನ ಹೇಣ್ತೀ ಕೂಡ ಉಂಡುಟ್ಟು ಸುಖ

ದಿಂದಿರಪಾ! ನಾ ಯಾಕ ನಿನ್ನ ಹಾದ್ಯಾಗ ಅಡ್ಡ ಬರ್ಲಿ!" ಎಂದು ಅವರು ತಮ್ಮ ಅರಿವೆ-ಅಂಚಡಿಗಳನ್ನು ಕೂಡಿಸಿ ಗಂಟು-ಗದಡಿ ಕಟ್ಟಹತ್ತಿದರು.

ಕೇಶವನಿಗೆನಿಸಿತು: ಒಂಬತ್ತು ತಿಂಗಳು ನನ್ನನ್ನು ತಾಯಿ ಹೊತ್ತದ್ದೂ ಊಟ-ನೆತ್ತಿ ನೋಡಿಕೊಂಡಿದ್ದೂ ನನ್ನ ಮೇಲೆ ಹೇಗೆ ಉಪಕಾರ? ನನ್ನನ್ನು ಹೊರಲು ಈ ತಾಯಿಗೆ ಯಾರು ಹೇಳಿದ್ದರು? ಈಕೆ ಹೊರದಿದ್ದರೆ ಮತ್ತೆ ಯಾವ ತಾಯಿಯಾದರೂ ಹೊರುತ್ತಿದ್ದಳು. ಹೊತ್ತು ಬಹುಶಃ ಅದರ ಉಪಕಾರವನ್ನು ನನ್ನ ಮೇಲೆ ಹೀಗೆ ಹೊರಿಸುತ್ತಿರಲಿಲ್ಲ. ಮಗನ ಸುಖಕ್ಕೆ ಹೀಗೆ ದಾರಿಮುಳ್ಳಾಗುತ್ತಿರಲಿಲ್ಲ ತನ್ನ ಕಾಲ ಮೇಲೆ ತಾನೇ ಕಲ್ಲುಹಾಕಿ ಕೊಂಡರೆ ಯಾರೇನು ಮಾಡಬಹುದೆಂದು ಕೇಶವನು ಸುಮ್ಮನಾದ ತಾಯಿಯು ತನ್ನ ಎಲ್ಲ ಸಾಮಾನು ಕಟ್ಟಿ ಹೊರಡಲು ಸಿದ್ಧಳಾದಾಗ ಅವಳನ್ನು ಮೋಟರು ಸ್ಟ್ಯಾಂಡಿನ ವರೆಗೆ ಕಳಿಸಿ ಬರಬೇಕೆಂದು ಕೇಶವನು ಕೋಟೇರಿಸಿದ.

ಕೇಶವನ ಆಜ್ಞೆಯ ಪ್ರಕಾರ ಜಾನಕಿಬಾಯರ ಒಂದು ಗಂಟು ಹೊತ್ತು ಕೊಂಡು ಆಳು ಮುಂದೆ ನಡೆದ. ತಮ್ಮ 'ಧರ್ಮ'ದ ಗಂಟನ್ನು ಬಗಲಲ್ಲಿಟ್ಟು ಕೊಂಡು ಜಾನಕಿಬಾಯರು ಹೊರಟು ನಿಂತರು ಹೋಗುವಾಗ ಮೇನಕಿಯನ್ನು ದುರದುರನೆ ನೋಡಿ "ಮಗನ್ನ-ತಾಯಿನ್ನ ಮನಿಗೆ ಬಂದು ಅಗಲಿಸಿದ; ಸುಖದಿಂದಿರಬೇಕಂತ ಮಾಡೀ ಅಲ್ಲ? ಸುಖದಿಂದಿರು! ಸುಖದಿಂದಿರು!" ಎಂದು ತೆರವಿದ್ದ ಕೈಯ್ಯನ್ನು ತಲೆಗೆ ಹಚ್ಚಿ ಅವರು ಲಟಕ್ಕು ಮುರಿದರು.

ಮೇನಕಿಯು ಸುಮ್ಮನಿರಲಿಲ್ಲ. "ಇಲ್ಲ ನೀವಽ ಇಲ್ಲೆ ಮನ್ಯಾಗ ಇದ್ದು ಮಗನ ಕೂಡ ಸಂಸಾರಾ ಮಾಡ್ರಿ. ನಾನಽ ಮನಿ ಬಿಟ್ಟು ಹೋಗತೇನಿ!" ಎಂದು ಆಕೆ ಆವೇಶದಿಂದ ಒದರಿಕೊಂಡಳು.

ಸೇರಿಗೆ ಸವ್ವಾ ಸೇರು ಗಂಟುಬಿದ್ದಿದೆಯೆಂಬುದನ್ನು ಜಾನಕಿಬಾಯರು ಮರೆತಿರಲಿಲ್ಲ. ಆ ಮಾತನ್ನು ಅವರು ಅಲ್ಲಿಗೇ ಬಿಟ್ಟು "ಮುದ್ರಾಧಾರಣಕ್ಕ ಒಲ್ಲೆ ಅಂದ್ಯಲ್ಲಽ ನೀನು? ಅದು ಹೆಂಗ ಮುದ್ರಾ ತಗೊಂಬೂದುಲ್ಲ ನೋಡ್ಯಾರ ನೋಡತೇನಿ!" ಎಂದು ಅವರು ಆಹ್ವಾನಿಸಿದರು.

"ಇಲ್ಲಾ. ತಗೊಂಬೂದುಲ್ಲಾ. ಸ್ವಾಮಿಗೋಳಿದ್ದುರಿಗೆ ನನ್ನ ಮ್ಯಾಲ ಫಿರ್ಯಾದಿ ಮಾಡರಿ! ಕೋರ್ಟ-ಖರ್ಚು ಸಹಿತ, ನಿಮ್ಮ ಕಡಿಂದ ವಸೂಲು ಮಾಡತೇನಿ!" ಎಂದು ತಿರುಗಿ ಗರ್ಜಿಸಿದಳು ಮೇನಕಿ.

ಗಂಟು ಹಿಡಿದುಕೊಂಡು ಜಾನಕಿಬಾಯರು ಭರದಿಂದ ಮುಂದೆ ನಡೆದರು. ಕೋಟು ಹಾಕಿಕೊಂಡ ಕೇಶವ ಸ್ವಲ್ಪ ದೂರದಿಂದ ಅವರನ್ನು ಹಿಂಬಾಲಿಸಿದ. ಸ್ವಾಮಿಗಳ ಸನ್ನಿಧಾನಕ್ಕೆ ಹೋಗಿ ಈ ವಿಷಯವನ್ನು ಮುಖ್ಯಾಧಿಕಾರಿಗಳಿಗೆ ತಿಳಿಸಿ ಮೋಟರು ಹತ್ತುವದೆಂದು ಜಾನಕಿಬಾಯರು ಮನಸ್ಸಿನಲ್ಲಿ ಸಂಕಲ್ಪಿಸಿದರು ಆದರೆ ಅಷ್ಟರಲ್ಲಿಯೇ ದಾರಿಯಲ್ಲಿ ಸುಬ್ಬಣಾಚಾರ್ಯರು ಅವರ ಕಣ್ಣಿಗೆ ಬಿದ್ದರು. ಸಮೀಪಕ್ಕೆ ಬಂದು ಜಾನಕಿಬಾಯರ ಗಂಟನ್ನೂ ಗಂಟುಮೋರೆಯನ್ನೂ ಹಿಂದಿನಿಂದ ಕೀಳಲಾರದ ಕಾಲು ಕಿತ್ತಿ ಹೆಜ್ಜೆ ಹಾಕುತ್ತಿದ್ದ ಕೇಶವನನ್ನೂ ನೋಡಿದೊಡನೆ 'ಪ್ರಸಂಗ'ದ ವೈಶಿಷ್ಟ್ಯವೆಲ್ಲ ಸುಬ್ಬಣಾಚಾರ್ಯರಿಗೆ ಹೊಳೆದಿತ್ತು. ತಮ್ಮ ಹುಳುಕು ಈ ಹೆಣ್ಣುಮಗಳ ಬಾಯಿಂದ ಹೊರಬೀಳಬಹುದೆಂದು ಹೆದರಿ ಅನೇಕ ತಿಂಗಳ ವರೆಗೆ ಹಾದಿಯಲ್ಲಿ ಭೆಟ್ಟಿಯಾದರೂ ಜಾನಕಿಬಾಯರನ್ನು ಅವರು ಮಾತನಾಡಿಸಿದ್ದಿಲ್ಲ. ಆದರೆ ಜಾನಕಿಬಾಯರು ಆಚಾರ್ಯರನ್ನು ನೋಡಿ ತಾವಾಗಿಯೇ ನಿಂತರು. ಆಗ ಜಾನಕಿಬಾಯರನ್ನು ಮಾತನಾಡಿಸಲು ಅವರಿಗೆ ಧೈರ್ಯ ಬಂದಿತು. "ಯಾಕ, ಜಾನಕಿಬಾಯ್ರ; ಮುಂಜಾನೆ ಎದ್ದು ಎಲ್ಲಿಗೆ ಪ್ರಯಾಣ? ಅದರಾಗ ಊರಾಗ ಶ್ರೀಗಳ ಸನ್ನಿಧಾನ ಇರಲಿಕ್ಕೆ?" ಎಂದರು ಆಚಾರ್ಯರು.

"ಇಲ್ಲಿ ನೋಡ್ರಿ, ಸುಬ್ಬಣಾಚಾರ! ನಾ ಊರಿಗೆ ಹೊರಟೇನಿ ಅಂಬೋದು ನಿಮಗ ಕಾಣತದ. ಯಾಕ ಹೊರಟೇನಿ ಅಂಬೋದೂ ಹೊಳೀತದ. ಹೀಂಗ ಇದ್ದು ಈ ಡುಭದ ಶಿಷ್ಟಾಚಾರ ಯಾಕ?" ಎಂದು ಕವಕ್ಕನೆ ಜಾನಕಿಬಾಯರು ಹರಿಹಾಯ್ದರು. ಆಗ ಸುಬ್ಬಣಾಚಾರ್ಯರ ಎದೆಯಲ್ಲಿ ನಡುಗು ಹುಟ್ಟಿತು. ಇನ್ನು ತರವಲ್ಲವೆಂದು ಅವರು ಕಾಲು ತೆಗೆಯುವದರಲ್ಲಿದ್ದರು. ಅಷ್ಟರಲ್ಲಿ ಜಾನಕಿಬಾಯರು ಹಿಂದೆ ಬರುತ್ತಿದ್ದ ಕೇಶವನ ಕಡೆಗೆ ಹೊರಳಿ ನೋಡುತ್ತ "ಆಚಾರ, ಒಂದು ಮಾತು ಮಾತ್ರ ಸಾಧಿಸಬೇಕು. ನಿಮಗ ಸಾಧ್ಯ ಅದ ಅಂತ ಆ ಮಾತು ನಿಮ್ಮ ಮುಂದ ಹೇಳತೀನಿ. ಈ ಮೋನಕಿ ಮಾಲಗ ಆಗಬೇಕು ನೋಡ್ರಿ. ಮುದ್ರಾಧಾರಣ ಒಲ್ಲೆ ಅಂತ ಹಟಾ ಹಿಡಿದಾಳ ಆಕಿ. ಸ್ವಾಮಿಗಳ ತನಕಾ ಹೋಗಲಿಕ್ಕೆ ನಿಮಗ ಮೋಕಳೀಕ ಅದ. ಹ್ಯಾಂಗಾರ ಮಾಡಿ ಆಕಿ ಮೈ ಅಷ್ಟು ಸುಡಸರಿ!" ಎಂದು ಮೆಲುದನಿಯಲ್ಲಿ ಹೇಳಿದರು. ತಮ್ಮ ಮೇಲೆ ಬಂದ ಪೀಡೆಯು ನಿವಾರಣೆಯಾಯಿತೆಂದು ಹಗುರೆ

ನಿಸಿಕೊಂಡ ಸುಬ್ಬಣಾಚಾರ್ಯರು: "ಯಾಕಾಗವಲ್ಲದ್ಯಾಕ, ಜಾನಕಿಬಾಯರ; ಅದೇನು ದೊಡ್ಡ ಮಾತು! ಸ್ವಾಮಿಗೋಳ ಕಿವಿ ಮ್ಯಾಲ ಈ ಮಾತಿಟ್ಟು ಸ್ವತಃ ನಾ ನಿಂತಿ ಮುದ್ರಿ ಕಾಸಿಸ್‌ತೇನಿ! ಯಾರು ಒಲ್ಲೆ ಅಂತಾರ ಅನ್ನಲಿ! ಒಲ್ಲೆ ಅಂದವರಿಗೆ ಬಹಿಷ್ಕಾರ!" ಎಂದರು.

ಜಾನಕಿಬಾಯರಿಗೆ ಸಮಾಧಾನವಾಯಿತು. ಕೇಶವನು ತುಸು ಹತ್ತಿರ ಬಂದಿರುವದನ್ನು ಹೊರಳಿ ನೋಡಿ ಅವರು ತುಸು ಗಟ್ಟಿಯಾಗಿ: "ಹಾಂಗಾರ ಹೋಗಿ ಬರತೇನಿ, ಆಚಾರ ಗದುಗಿಗೆ ಹೋಗಿ ಬರತೇನಿ." ಎಂದಂದು ಮತ್ತೆ ಹಿಂದು ಮುಂದು ನೋಡದೆ ಹೆಜ್ಜೆಯಿಕ್ಕಿದರು. ಹಿಂದಿನಿಂದ ಬರುತ್ತಿದ್ದ ಕೇಶವನನ್ನು ಆಚಾರ್ಯರು "ಏನು, ರಾಯರ; ಪ್ಯಾಟಿ ಕಡೆ ನಡದಿರೇನು?" ಎಂದು ದೇಶಾವರಿ ನಗೆ ನಕ್ಕು ಮಾತನಾಡಿಸಿ ಮುಂದೆ ನಡೆದರು.

ಜಾನಕಿಬಾಯರು ಹೋಗಿ ಬಸ್ಸಿನಲ್ಲಿ ಕೂತಾಗ ಕೇಶವನು ಕಂಡಕ್ಟರನಿಂದ ಬಸ್ಸು ತಿಕೀಟು ಕೊಂಡು ತಾಯಿಯ ಕೈಯಲ್ಲಿ ಕೊಡಲು ಹೋದ. ಕೈಯ್ಯಲ್ಲಿ ತಿಕೀಟು ಇಸಿದುಕೊಂಡು: "ನನ್ನ ಪ್ರವಾಸದ ಖರ್ಚು ನಿನ್ನ ಮ್ಯಾಲ, ಯಾಕಪಾ! ಇರಲಿ. ಮನಿಯೊಳಗ ಆಕೀಗೇ ಕೊಡು!" ಎಂದರು ಜಾನಕಿಬಾಯರು. ಕೇಶವನು ಏನೂ ಉತ್ತರ ಕೊಡಲಿಲ್ಲ. ಮುಂದೆ ಕೆಲವು ನಿಮಿಷಗಳ ಮೇಲೆ ಹತ್ತು ರೂಪಾಯಿ ತೆಗೆದು ಗಾಡಿಯ ಖರ್ಚಿಗೆಂದು ತಾಯಿಗೆ ಕೊಡ ಹೋದ ತುಸು ಅನಿಶ್ಚಿತರಾದವರಂತೆ ಸುಮ್ಮನಿದ್ದು ಆಮೇಲೆ ಹಣವನ್ನು ಸ್ವೀಕರಿಸಿ, "ನಾ ಊರಾಗಿದ್ದಾಗ ಒಂದು ಪೈ ಏನು ನಾನು ಕಾಣಲಿಲ್ಲ ಈಗ ನಾ ದೇಶಾಂತರಾ ಹೊರಟೇ ಅಂಬೋ ಸಂಭ್ರಮದಾಗ ಇಷ್ಟಾರೆ ಕೊಟ್ಟೆಪಾ! ಒಳ್ಳೇದಾತು." ಎಂದು ಜಾನಕಿಬಾಯರು ಕೇಶವನ ಮರ್ಮವನ್ನು ಭೇದಿಸಲು ಹವಣಿಸಿದರು. ಮಗನಾದವನು ಇಂಥಾ ಮಾತುಗಳನ್ನು ಆಡಿಸಿಕೊಳ್ಳಬೇಕೆಂಬುದು ಕೇಶವನಿಗೆ ಗೊತ್ತಿತ್ತು. ಅವನು ಸುಮ್ಮನಿದ್ದ. ಮುಂದೆ ತುಸು ಹೊತ್ತಿನ ಮೇಲೆ: "ಅವರೊಬ್ಬರು ನನ್ನ ಮನ್ಯಾಗ ಕುಕ್ಕರಿಸಿ ಆ ಸಾನಿ ಬೆನ್ನು ಹತ್ತಿ ಮಗಳ್ನ ಬೆನ್ನು ಹಚಿಕೊಂಡು ದೇಶಾಂತರೀ ಹ್ವಾದರು. ನೀ ಮಗಾ ಅಂಬೋವಾ ಬೀಸಿ ನನ್ನ ಮನೀ ಹೊರಗ ಎಸದಿ! ತಂದೀ ಮಗಾ ಕೂಡಿ ಛಲೋ ಪುಣ್ಯ ಮಾಡಿದಿರಪಾ!" ಎಂದು ಬಿಕ್ಕಿ ಕಣ್ಣೀರು ತೆಗೆದರು. ಇದು ಅವರ ಕೊನೆಯ ಅಸ್ತ್ರವಾಗಿತ್ತು. ಆದರೆ ಅವರು ಹೆಚ್ಚು ದನಿ ತೆಗೆದು

ಅಳುವ ಹಾಗಿರಲಿಲ್ಲ. ಸಮೀಪದಲ್ಲಿಯೇ ಅನೇಕ 'ಪ್ಯಾಸೆಂಜರ'ರು ನಿಂತಿದ್ದರು. ಕೇಶವನ ಮರ್ಮಕ್ಕೆ ಬಾಣ ತಗಲಿದ್ದೇನೋ ನಿಜ. ಆದರೆ ಅವನು ಒಳಗಿನ ಗಾಯವನ್ನು ಹೊರಗೆ ತೋರಗೊಡಲಿಲ್ಲ. ಮೌನವನ್ನು ತಳೆದಿದ್ದ.

ಬಸ್ 'ಸ್ಟಾರ್ಟ್' ಆದಾಗ ಕಣ್ಣೊರಿಸಿಕೊಂಡು ಜಾನಕಿಬಾಯರು ದನಿಯನ್ನು ಕಣ್ಣೀರಿಂದ ತೋಯಿಸಿ: "ಹೋಗಿ ಬರತೇನಪಾ, ಕೇಶವಾ!" ಎಂದರು. "ಹೋಗಿ ಬಾ ಅವ್ವಾ!" ಎಂದು ಕೇಶವನು ತಾಯಿಯನ್ನು ಬೀಳ್ಕೊಂಡ. ಬಸ್ಸು ದೂರದಲ್ಲಿ ಮಾಯವಾದಾಗ ಒಂದು ದೊಡ್ಡ ಭಾರವು ಇಳಿದಷ್ಟು ಅವನಿಗೆ ಹಗುರವಾಯಿತು.

ಆದರೆ ತಿರುಗಿ ಮನೆಗೆ ಹೊರಟಿದ್ದ ಕೇಶವನು ಮನಸ್ಸನ್ನು ಬದಲಿಸಿ ದಾರಿಯನ್ನೂ ಬದಲಿಸಿದನು. ಆ ನೀಚ ಸುಬ್ಬಣಾಚಾರಿ ಮೋಸ ಮಾಡಿದರೆ? ತಾಯಿಯು ಬಾಗಿಲಲ್ಲಿ ಮೇನಕಿಗೆ ಹಾಕಿದ ಹೆದರಿಕೆಯನ್ನು ಕೇಶವನು ಕೇಳಿದ್ದ. ಮುಂದೆ ಸುಬ್ಬಣಾಚಾರ್ಯರ ಕಿವಿಯಲ್ಲಿ ಜಾನಕಿಬಾಯರು ಊದಿದ ಮಂತ್ರ ವೇನಿರಬೇಕೆಂಬುದೂ ಅವನಿಗೆ ಹೊಳೆದಿತ್ತು. ಇದಕ್ಕೇನು ಮಾಡಬೇಕು? ಮಂತ್ರಾಲೋಚನೆಗಾಗಿ ಕೇಶವನು ಬೇಗ ಭೀಮೂನೆಡೆಗೆ ನಡೆದ. ಭೀಮು ಎಲ್ಲವನ್ನು ಕೇಳಿಕೊಂಡು: "ನೀ ಯಾಕ ಕಾಳಜಿ ಮಾಡತಿ ಬಿಡು ನಾ ನೋಡತೇನಿ ಆ ಅಚಾರಿನ್ನ." ಎಂದು ಕೇಶವನನ್ನು ಸಮಾಧಾನ ಮಾಡಿ ಕಳಿಸಿದ.

ಭೀಮೂ ಅವರ ಮನೆಗೆ ಹೋದಾಗ ಸುಬ್ಬಣಾಚಾರ್ಯರು ಅದೇ ಮಧ್ಯಾಹ್ನದ ನಿದ್ರೆಯನ್ನು ಮುಗಿಸಿ ಎದ್ದು ಕುಳಿತಿದ್ದರು. ಇನ್ನೂ ಅರ್ಧ ತೂಕಡಿಕೆಯಲ್ಲಿ—ಅರ್ಧ ಗುಂಗಿನಲ್ಲಿ—ಅವರಿದ್ದರು. ಭೀಮು ಒಳಗೆ ಬಂದೊಡನೆ ಕನಸಿನ ಜಗತ್ತಿನಲ್ಲಿ ವ್ಯವಹಾರವು ಕಾಲಿಟ್ಟಂತಾಯಿತು. ಆಚಾರ್ಯರು ಚಟಕ್ಕನೆ ಎದ್ದು ಕೂತು ಹಾಸಿಗೆಯನ್ನು ಸುತ್ತಿಟ್ಟು "ಬಾ ಭೀಮಣ್ಣ. ಇದೇನು ಅಲಭ್ಯ ಲಾಭ ಇವತ್ತ!" ಎಂದು ಭೀಮೂನನ್ನು ಸ್ವಾಗತಿಸಿದರು. ಒಳಗೆ ಅತ್ತಿತ್ತ ಓಡಾಡುತ್ತ ಚಹಕ್ಕೆ ಎಸರಿಟ್ಟು ಶಿಷ್ಟ ಪುರುಷಸೂಕ್ತವನ್ನು ಪಠಿಸುತ್ತಿದ್ದ ವೆಂಕಮ್ಮನವರು ಅಡಿಗೆಮನೆಯಲ್ಲಿ ಹತ್ತಿ ಬತ್ತಿ ಹೊಸೆಯುತ್ತ ಕೂತಿದ್ದರು. ಸ್ವಾಮಿಗಳು ಮೊಗ್ಗಾಂವಿಗೆ ಬಂದಿದ್ದು ಅವರಿಗೊಂದು ಹಬ್ಬವಾಗಿತ್ತು. ಸ್ವಾಮಿಗಳು ಊರು ಬಿಡುವಷ್ಟ

ರಲ್ಲಿ ವೈಕುಂಠದಲ್ಲಿ ಒಂದು ಕೋಣೆಯನ್ನು ತಮಗಾಗಿ 'ಮೀಸಲಾ'ಗಿರಿಸಿ ಬಿಡಬೇಕೆಂದು ಅವರು ಸಂಕಲ್ಪಿಸಿದ್ದರು.

ಅಲ್ಲಿಯೇ ಇದ್ದ ಬುನಾದಿಕಾಲದ ಲೋಡಿಗೆ ಅಷ್ಟೇ ಪ್ರಾಚೀನವಾದ ಕಂಬಳಿಯೊಂದರ ಮೇಲೆ ಕುಳಿತು ಭೀಮು: "ಅಲಭ್ಯ ಲಾಭ ಯಾರಿಗೆ, ಆಚಾರ? ನನಗೋ ನಿಮಗೋ?" ಎಂದು ನಕ್ಕ. ಬಳಿಕ ತಿಪ್ಪನು ಪಠಿಸುತ್ತಿದ್ದ ಪುರುಷಸೂಕ್ತಕ್ಕೆ ಕಿವಿಗೊಟ್ಟು, "ಅಲಲಲ! ಇದೇನು? ಮಗ ತಯಾರು ಆಗಲಿಕ್ಕೆ ಹತ್ತಿದ್ಹಾಂಗ ಕಾಣತದ! ನಿಮ್ಮ ಪಟ್ಟಕ್ಕ ನಾಳೆ ಬರಲೀ ಅಂತ ಇವತ್ತ ಮರಿ ಬಿಟ್ಟೀರೇನು, ಆಚಾರ?" ಎಂದು ಕೇಳಿದ.

"ಏನು ಮಾಡೋದು, ಮಹರಾಯ! ಇಂಗ್ಲಿಷು ಸಾಲಿಗೆ ಹಾಕಿದೆ. ಇವನ ಜೋಡಿ ಇದ್ದ ಹುಡುಗರು ಕಾಲೇಜು ಕಂಡರು ಇವಾ ಮಾತ್ರ ಮಲಕೊಂಡಲ್ಲೇ ಕನಸು ಕಂಡ. ಇದೊಂದು ವರ್ಷ ಇವಗ ಕಲಸೇರಿ ಅಂತ ಮಾಸ್ತರಿಗೆ ಚಾಲುವರಿದೆ "ನಮ್ಮದೇನು ಅಡ್ಡಿ ಇಲ್ಲ, ಆಚಾರ. ಆದರ ತಿಪ್ಪ ಈಗ ಯಾವ ಕ್ಲಾಸಿನಾಗ ಇದ್ದಾನ ಅಲ್ಲೀ ಬೆಂಚು-ಕುರ್ಚೀದ ಸಂಗಡ ಇವನೂ ಒಂದು ಸ್ಥಾವರ ವಸ್ತು ಅಂತ ತಿಳಕೊಂಡು ಇಡತಿದ್ರ ಇಡ್ರಿ. ನಮ್ಮದೇನು ಅಡ್ಡಿ ಇಲ್ಲ" ಅಂತ ಅವರು ದನಿ ತಗದರು. ಅಲ್ಲಿ ಇದ್ದು ಕುರ್ಚೀ ಆಗೋದರಕಿಂತಾ ಮನ್ಯಾಗ ಇದ್ದು ಮಾಲಾಗೋದು ಮೇಲೂ ಅಂತ ಅವಗ ಈಗ ವೈದಿಕ ವಿದ್ಯಾಕ್ಕ ಹಾಕೇನಿ. ಈಗೇನು? ನಾನ ಮಾಸ್ತರು! ಅವನ ಶಿಷ್ಯ!" ಎಂದು ಆಚಾರ್ಯರು ನಕ್ಕರು.

"ಭಲೋ ಆತು ಬಿಡ್ರಿ, ಆಚಾರ. ನಿಮ್ಮ ತಿಪ್ಪಗ ಏನು ಕಡಿಮಿ, ಸಾಲೀ ಕಲೀಲಿಕ್ಕೆ? ನೀವು ಮಾಡಿದಷ್ಟು ಬಚಾಯಿಸಿ ಇಟಗೊಂಡ್ರ ಸಾಕು. ಅವಾ ಪಲ್ಲಕ್ಯಾಗ ಮೆರೀತಾನ." ಎಂದ ಭೀಮು.

"ಛೆ! ಛೇ! ಅಲ್ಲಪಾ ಭೀಮಣ್ಣ. ನಿನ್ನಂಥಾ ಭಂಗಾರದ ಹೊಗೀ ಹಾಯಸೋ ಸರಾಫೀ ಶ್ರೀಮಂತರು ಆಡೋ ಮಾತಲ್ಲ, ಇವು! ಗರುಡನ ಮುಂದ ಗುಬ್ಬೀ ಹಾರಕಿ ಎಷ್ಟು?" ಎಂದು ಆಚಾರ್ಯರು ಕಿವಿಯ ಮೇಲೆ ಕೈಯಿಟ್ಟುಕೊಂಡರು.

ಬಳಿಕ ತುಸು ಹೊತ್ತು ಇಬ್ಬರೂ ಮೌನವಾಗಿದ್ದರು. ಮುಂದೆ ಭೀಮು ಮಾತಿಗೆ ಮೊದಲು ಮಾಡಿದ: "ನಾ ಒಂದು ಕೆಲಸದ ಸಲುವಾಗಿ ಬಂದೇನ್ರಿ, ಆಚಾರ."

"ಅದೇನು ವಿಶೇಷ, ಭೀಮಣ್ಣಾ? ಅಗತ್ಯ ಹೇಳು. ನೀ ಹಾಕಿದ ಉಗುಳು ನಾ ಎಂದ ದಾಟೇನು?" ಎಂದರು ಆಚಾರ್ಯರು. ಎಂದವರೆ ಒಳಗೆ ಹೋಗಿ "ಏ ತಿಪ್ಯಾ,! ನಮಗ ಬ್ಯಾರೆ ಎಸರಿಡು. ಒಂದು ಕಪ್ಪು ಚಹಾ ಸೋಸಿ ಹೊರಗ ತಗೊಂಬಾ." ಎಂದು ತಿಪ್ಪನ ಕಿವಿಯಲ್ಲುಸುರಿ ಮೋರೆ ತೊಳೆದುಕೊಂಡವರಂತೆ ಮೋರೆ ಒರಿಸುತ್ತ ಹೊರಗೆ ಬಂದರು.

"ಏನು ಇಲ್ಲ, ಆಚಾರ! ಮುದ್ರಾಧಾರಣದ ವಿಷಯ. ಊರಿಗೆಲ್ಲಾ ಮುದ್ರಿ ಹೊಡಿಸಿ ನಿಮ್ಮ ಕೃಪಾ ನಮ್ಮ ಕೇಶವನ ಮ್ಯಾಲೂ........"

"ಛೇ! ಛೇ! ಅದೆಂದಿಗೆ ಆದೀತು? ಇವತ್ತ ಹಾದ್ಯಾಗ ಜಾನಕಿ ಬಾಯರು ಭೆಟ್ಟಿ ಆದ್ರು. ಮದುವಿ ಆದ ಹೆಣ್ಣುಹುಡುಗೂರಿಗೆ ಅವರು ಎಷ್ಟು ತ್ರಾಸ ಕೊಡತಾರ ಅಂಬೋದು ಜಗಜ್ಜಾಹೀರು ಆಗೇದ. ನೀ ಏನಃ ಹೇಳು, ಭೀಮಣ್ಣಾ, ನಿನ್ನ ತಂಗೀನಃ ಅವರಿಗೆ ಮುದ್ದು!" ಎಂದು ನಡುವೆ ಒಮ್ಮಿಗಿಲೆ ಆಚಾರ್ಯರು ಬಿದ್ದುಬಿದ್ದು ನಗಹತ್ತಿದರು.

ಆದರೆ ಭೀಮು ನಗಲಿಲ್ಲ. ತೀರ ಆಚಾರ್ಯರೊಡನೆ ಅಸಹಕಾರವನ್ನು ತೋರಿಸಬಾರದೆಂದು ಒಂದು ಸುಳಿನಗೆಯನ್ನು ಮಾತ್ರ ಅವನು ಮೊಗದ ಮೇಲೆ ಸುಳಿಯಿಸಿದನು

ಇಲ್ಲದ ಮಧ್ಯಮಾಸ್ತ್ರಗಳು ಭೀಮೂನ ಮೇಲೆ ನಾಟುವದಿಲ್ಲವೆಂದು ಅವರಿಗೆ ಮನದಟ್ಟಾಗಿ ಆಚಾರ್ಯರು ಮತ್ತೆ ತಮ್ಮ ವೃತ್ತಾಂತವನ್ನು ಮುಂದು ವರಿಸಿದರು:

"ಜಾನಕಿಬಾಯ್ರು ಜಗಳಾಡಿ ಇವತ್ತ ಮನಿ ಬಿಟ್ಟು ಹೊಂಟಿದ್ರು. ಮುಂಜಾನೆ ಎದ್ದು ಯಾರ ಮಾರಿ ನೋಡಿದ್ದೆನೋ ನಾನು! ಹಾದ್ಯಾಗ ಅವರಿದುರಿಗೇ ಹಾಯಬೇಕ? ಆವಾಗ ಈ ವಿಷಯ ತಗದರು ಅವರು."

"ಅದೇನಃ ಇರಲಿ, ಆಚಾರ." ಭೀಮು ಹೇಳಿದ. "ಬೇಕಾದವರಿಗೆ ಮುದ್ರಾಧಾರಣ, ಬೇಕಾಗದೇ ಇದ್ದವರಿಗೆ ಏನು ಕಾರಣ? ಈ ವಿಷಯದಾಗ ನಿಮ್ಮ ನಾರದಸೂತ್ರಾ ಸೇರಸಬ್ಯಾಡ್ರಿ ನೀವು. ಸೇರಿಸಿದರ ನಿಮ್ಮ

ಜೀವಾನೂ ನಮ್ಮ ಕೈಯ್ಯಾಗ ಅದs ಅಂತ ತಿಳಕೋಡ್ರಿ. ನೀವು ಒಬ್ಬರಿಗೆ ಎರಡು ಥರದ ಮುದ್ರಾಧಾರಣ ಮಾಡಿಸಿಲ್ಲ? ನೆನಪು ಮಾಡಿಕೋಡ್ರಿ. ಒಂದು ಸ್ವಂತ ನಿಮ್ಮದು. ಇನ್ನೊಂದು ನಾಲ್ಕು ಮಂದೀ ಸಂಗತೀಲೆ ಸ್ವಾಮಿಗೋಳದು" ಎಂದು ಅವನು ದರ್ಪದಿಂದ ಮಾತನಾಡಿದ. ಆಚಾರ್ಯ ರನ್ನು ಅಡಕೊತ್ತಿನಲ್ಲಿ ಹಿಡಿಯುವ ಸಾಹಸವು ಅವನದಿತ್ತು.

ಆದರೆ ಆಚಾರ್ಯರು ಭೀಮೂನಂತಹ ಚಾಣಾಕ್ಷರನ್ನು ಸಹ ಕಿಸೆ ಯಲ್ಲಿ ಹಾಕಿಕೊಂಡಿದ್ದರು. ಸ್ವಾಮಿಗಳು ಬಂದಾಗ ರಮಾಬಾಯರ ವಿಷ ಯವು ಪ್ರಮುಖವಾಗಿ ಚರ್ಚೆಗೆ ಬರುವದೆಂದು ಅವರು ಮೊದಲೇ ತರ್ಕಿ ಸಿದ್ದರು. ಆ ಪ್ರಕಾರ ಮುಖ್ಯಾಧಿಕಾರಿಗಳು ಬಂದೊಡನೆ ಅವರ ಕೈ ಬೆಚ್ಚಗೆ ಮಾಡಿ, "ನಾಲ್ಕು ಮಂದಿ ಸನಗಾಗದವರು ನನ್ನ ವಿರುದ್ಧ ತಮ್ಮ ವಿಷದ ಹಲ್ಲು ತೋರಿಸಬಹುದು. ತಮ್ಮ ಅಧರ್ಮದ ಕಲಂಕ ನನ್ನ ಹೆಸರಿಗೆ ಹಚ್ಚಲಿಕ್ಕೆ ಪ್ರಯತ್ನಪಡಬಹುದು. ನನ್ನ ಧರ್ಮನಿಷ್ಟತನ ತಮಗ ಗೊತ್ತು ಅದ. ತಾವು ಈ ಮಾತು ಒಂದು ಕಿವೀಲೆ ಕೇಳಿ ಇನ್ನೊಂದರಲೆ ಬಿಟ್ಟು ಬಿಡಬೇಕು." ಎಂದು ಆಚಾರ್ಯರು ಪ್ರಾರ್ಥಿಸಿದ್ದರು. "ಆ ಚಿಂತೆ ಬೇಡ ನಿಮಗೆ. ಶ್ರೀ ಕೃಷ್ಣ ಇದ್ದಾನ ಕಾಯಲಿಕ್ಕೆ." ಎಂದು ಅಧಿಕಾರಿಗಳು ಆಶ್ವಾಸನ ಕೊಟ್ಟಿದ್ದರು ಆಮೇಲೆ ಊರೊಳಗಿನ ಎಲ್ಲ ವಿಧವೆಯರೊಡನೆ ರಮಾಬಾಯರಿಗೂ ಮುದ್ರಾಧಾರಣವಾಗಿತ್ತು.

ಅಂದಮೇಲೆ ಆಚಾರ್ಯರು ಭೀಮೂನಿಗೆ ಹೆದರುವರೆ? "ಇಲ್ಲಿ ನೋಡು, ಭೀಮಣ್ಣಾ! ನನ್ನಂಥ ಧರ್ಮನಿಷ್ಟನ ಮ್ಯಾಲ ಆಗದವರು ಏನೇನೋ ಆಡಿಕೋತಾರ. ನಿನ್ನಂಥ ಬುದ್ಧಿವಂತರೂ ಇಂಥಾ ಮಾತಿಗೆ ಕಿವಿಗೊಡಬಾರದು. ನಿರಪರಾಧಿ ಮನುಷ್ಯ ಯಾರಿಗೆ ಅಂಜತಾನ? ದೇವ ರಿಗೆ ಅಂಜೂದುಲ್ಲ, ದೇವರಿಗೆ!" ಎಂದು ಅವರು ಸಾತ್ವಿಕ ಸಂತಾಪದಿಂದ ಉದ್ರೇಕಿಸಿದರು.

ಈ ಸುಬ್ಬಣಾಚಾರಿ ಸ್ವಾಮಿಗಳ ಸನ್ನಿಧಾನದಲ್ಲಿ ತನ್ನ ಬೇಳೆಯನ್ನು ಈಗಾಗಲೆ ಬೇಯಿಸಿದ್ದಾನೆಂದು ಭೀಮೂನಿಗೆ ತಕ್ಷಣದಲ್ಲಿ ಹೊಳೆಯಿತು. ಇನ್ನು ಬೆದರಿಸಿ ಉಪಯೋಗವಿಲ್ಲವೆಂದು ಭೀಮು ದೇಶಾವರಿ ನಗೆ ನಕ್ಕು: "ಅಂಥಾ ಜನರನ್ನ ತಗೊಂಡು ಏನು ಮಾಡೋದು, ಆಚಾರ ತಂಪು ಹೊತ್ತಿ

ನಾಗ ಕೂಡ ಅವರನ್ನ ನೆನಸಬಾರದು. ಇನ್ನು ಮಧ್ಯಾಹ್ನದ ಹೊತ್ತಿನಾಗ ಅನಕಾ ಬಿಟ್ಟುಬಿಡರಿ ಇದೊಂದು ನಮ್ಮ ಕೆಲಸಾ ಮಾಡಿ ಕೊಟ್ಟುಬಿಡ್ರಿ. ಅದೇನು ಹುಸಿ ಹೋಗುದುಲ್ಲ!" ಎಂದು ಮಧುರ ಧ್ವನಿಯಲ್ಲಿ ಹೇಳಿದನು ಅವನ ನಗೆಯಲ್ಲಿಯೂ ದನಿಯಲ್ಲಿಯೂ ಆಚಾರ್ಯರಿಗೆ ಒಂದೆರಡು ವರಾಹ ನಾಣ್ಯಗಳು ಕಂಡವು. ಭೀಮೂನೊಡನೆ ಅವರ ರೀತಿಯೂ ಮಾರ್ಪಟ್ಟಿತು. "ಹೀಂಗ ಮಾತಾಡಪಾ, ಭೀಮಣ್ಣ. ಇಂಥಾ ಮಾತಿಗೆ ನಾ ಒಂದು ಸಾವಿರ ರುಪಾಯದ ಕಿಮ್ಮತ್ತು ಕೊಡತೇನಿ ಏ! ತಿಪ್ಪಾ! ಭೀಮಣ್ಣಗ ಒಂದು ಕಪ್ಪು ಚಹಾ ತಗೊಂಡು ಬಾ. ಇಡಲಿಕ್ಕೆ ಹೇಳಿದ್ದೆನಲ್ಲಾ" ಎಂದು ಕೂತಲ್ಲಿಂದ ಆಚಾರ್ಯರು ಕೂಗಿಕೊಂಡರು

"ತಂದೆನಪಾ, ತಂದೆ. ಹಾಲು ಸುರುವಲಿಕ್ಕೆ ಹತ್ತೇನಿ ಈಗ." ಎಂದು ಕಣ್ಣು ಮೂಗಿನಲ್ಲಿ ಹೊಗೆ ತುಂಬಿರಲು ತಿಪ್ಪನು ಅಡಿಗೆಮನೆಯೊಳಗಿಂದ ಒದರಿದನು.

"ಏನು! ಆಚಾರ್ಯರ ಮನ್ಯಾಗ ಚಹಾದ ವ್ಯವಸ್ಥಾ ಬ್ಯಾರೆ ಅದ ಏನು?" ಎಂದು ಭೀಮು ಆಶ್ಚರ್ಯವನ್ನು ನಟಿಸಿದನು.

"ನನ್ನಂಥಾ ವೈದಿಕವೃತ್ತಿ ಬ್ರಾಹ್ಮಣಗ ಚಹಾ ಯಾಕ, ಚೂಡಾ ಯಾಕಪಾ! ನಿನ್ನಂಥವರು ಮನೀಗೆ ಬಂದಾಗ ಇರಲಿ ಅಂತ ಒಂದು ಲಿಪ್ಟನ್ ಡಬ್ಬಿ ಇಟ್ಟೇನಿ ತಂದು. ಇದ್ದದ್ದು ಹೇಳತೇನಿ ಮತ್ತ,—ಥಂಡಿ ನೆಗಡಿ ಆದಾಗ ಕುಡೀತಿರತೇನಿ ನಾನೂ ಒಮ್ಮೊಮ್ಮೆ" ಎಂದು ಆಚಾರ್ಯರು ತಮ್ಮ ಪ್ರಾಂಜಲತೆಯನ್ನಷ್ಟು ತೋರಿಸಿದರು.

"ಹಂಗಾದರ ಏನು? ಒಂದು ದಿವಸ ಥಂಡಿ, ಒಂದು ದಿವಸ ನೆಗಡಿ ನಿಮಗ!" ಎಂದು ಭೀಮು ನಕ್ಕ.

ಈ ವಿನೋದಕ್ಕೆ ಅಷ್ಟೊಂದು ಅಡ್ಡಿ ಕಾಣಲಿಲ್ಲ. ಆಚಾರ್ಯರು ತಾವೂ ನಕ್ಕರು.

ಅಷ್ಟರಲ್ಲಿ ತಿಪ್ಪ ಚಹವನ್ನು ತೆಗೆದುಕೊಂಡು ಬಂದ. ಅವನ ಆಗಮನ ವರ್ಣನೀಯವಾಗಿತ್ತು. ಅವನು ಉಟ್ಟ ಬಿಳಿ ಧೋತರವು ಕೆರೆಯ ನೀರಿನ ಒಗೆತದಲ್ಲಿ ಕೆಂಪಾಗಿತ್ತು. ಅಲ್ಲಲ್ಲಿ ಕಪ್ಪು ಕಲೆಗಳು ಬೇರೆ ಅದರ ಮೇಲೆ ಕ್ಷಾಣಿಸಿಕೊಂಡವು ಎಡಗಾಲಿನ ಕಚ್ಚೆಯು ಮೊಳಕಾಲಿನ ವರೆಗೆ ಬಂದಿತ್ತು, ಬಲ

ಗಾಲಿನ ಕಡೆಗೆ ಧೋತರದ ಒಂದು ಗೇಣುಭಾಗ ನೆಲದ ಮೇಲಿನ ಕಸಗುಡಿಸು ತ್ತಿತ್ತು. ಅವನ ಪುಡಿಚಂಡಿಕೆಗಳು ತಲೆಯ ಮೇಲೆ ಹೋತಿನ ಗಡ್ಡದಂತೆ ಹಾರಾಡುತ್ತಿದ್ದವು ಹೊಗೆಯಿಂದ ಕೆಂಪಾದ ಕಣ್ಣುಗಳು ನೀರಿನಿಂದ ತೋಯ್ದಿದ್ದವು. ಅವನು ಕೈಯ್ಯಲ್ಲಿ ಹಿಡಿದುಕೊಂಡು ಬಂದ ಕಪ್ಪು-ಬಸಿ ಬುನಾದಿ ಕಾಲದವು,—ಚಹದ ಅವತಾರವಾಗುವದಕ್ಕಿಂತ ಮೊದಲೆ ಚಹದ ಸಲುವಾಗಿ ಮಾಡಿಟ್ಟಂತೆ ಕಾಣುತ್ತಿದ್ದವು. ಕಪ್ಪಿನ ಹಿಡಿಕೆ ಮಾಯವಾದದ್ದ ಲ್ಲದೆ ಅದರ ಮುಖವು ಕಪ್ಪಿಟ್ಟು,—ಚೀನಿ ಮಣ್ಣಿಗೆ ಮಣ್ಣು ಕೊಟ್ಟಂತೆ ಇತ್ತು ಆ ಕಪ್ಪು ಅದರೊಳಗಿನ ಚಹವು ಅವರ್ಣನೀಯ, ಸಳಮಳ ಕುದ್ದು ಕುದ್ದು ಕೆಂಪಗಾದ ಎಸರಿನಲ್ಲಿ ಅರ್ಧ ಚಮಚ ಸಕ್ಕರೆ ಹಾಗು ಒಂದು ಚಮಚ ಹಾಲು ಹಾಕಿದರೆ ಆ ಚಹವು ಎಷ್ಟು ರುದ್ರಭಯಂಕರವಾಗಿರಬಹುದೆಂಬು ದನ್ನು ನಾವು ಕಲ್ಪಿಸಬಹುದು. ಚಹವನ್ನು ನೋಡಿ ಭೀಮು ಗಾಬರಿಯಾದ. ಆಚಾರ್ಯರು ಕೊಡುವ ಸೋಮರಸವೋ, ಏನು ತನ್ನನ್ನು ಕೊಲ್ಲಲು ಅವರು ಹಾಕಿದ ಹೊಂಚೋ ಎಂಬುದು ಅವನಿಗೆ ತಿಳಿಯದಾಯಿತು. ಕುಡಿಯದಿದ್ದರೆ ಬಂದ ಕೆಲಸ ಅಯಶಸ್ವಿಯಾಗುವದು, ಕುಡಿದರೆ ಮರಣ,—ಎಂದು ಭೀಮು ಅಂಜುತ್ತಂಜುತ್ತ ಮುಂದಕ್ಕೆ ಕೈಚಾಚಿದ. ಆದರೆ ಭೀಮು ಹೆದರಬೇಕಾಗಿರ ಲಿಲ್ಲ ಹೊಗೆ ತುಂಬಿದ ಮುಂಜುಗಣ್ಣಿನಿಂದ ನೋಡುತ್ತ ಭೀಮೂನ ಕೈಯ್ಯಲ್ಲಿ ಕಪ್ಪನ್ನು ಇಡಹೋದ ತಿಪ್ಪನು ಅರ್ಧ ಇಂಚಿನಿಂದ ಅಳತೆ ತಪ್ಪಿದ.

ಭೀಮೂನ ಕರುಳನ್ನೇ ಬಗೆಯಬಹುದಾದ ಆ ಚಹವು ಅವನ ತೊಡೆಯ ಮೇಲೆಲ್ಲ ಚಲ್ಲಿ ಅವನಿಗೆ ಬರೆ ಕೊಟ್ಟದ್ದಲ್ಲದೆ ಧೋತರವನ್ನೆಲ್ಲ ವ್ಯಾಪಿಸಿತು.

"ಶತರಂ....ಮಗನ! ಒಂದು ಕಪ್ಪು ಸರಳ ಕೈಯ್ಯಾಗ ಕೊಡಲಿಕ್ಕೆ ಬರೂದುಲ್ಲ ನಿನಗ! ನೀರಿನ ಸಾರಿಗಿ ಮಾಡಿನ್ನ, ನೀರಿನ ಸಾರಿಗಿ!" ಎಂದು ಆಚಾರ್ಯರು ತಿಪ್ಪನನ್ನು ಕಣ್ಣುಕಿಸಿದು ನೋಡಿದರು

"ಹೊಗಿ ಕಣ್ಣಾಗ ತುಂಬಿಸಿಕೊಂಡು ಸಣ್ಣಾಗಿ ದುಡಿಯೋದು! ಮತ್ತ ಮ್ಯಾಲ ಬಯಿಸಿಗೊಂಬೋದು!" ಎಂದು ತಿಪ್ಪನು ಮುಳು ಮುಳು ಅಳ ಹತ್ತಿದನು.

ತಿಪ್ಪನ ಅಳುದನಿಯನ್ನು ಕೇಳಿದವರೇ ವೆಂಕಮ್ಮನವರು ಹೊರಗೆ ಬಂದು "ಏನಾತು ನನ್ನ ಕೂಸಿಗೆ? ಏನಾತು ನನ್ನ ತಿಪ್ಪಿಗೆ?" ಎಂದು ಗದ್ದವನ್ನು ಹಿಡಿದು ರಮಿಸುತ್ತ ಒಳಗೆ ಕರೆದುಕೊಂಡು ಹೋದರು. ತಿಪ್ಪನು ದೊಡ್ಡ ದನಿ ತೆಗೆದು ಅಳುತ್ತ ಹೋದ.

ಇತ್ತ ಸುಬ್ಬಣ್ಣಾಚಾರ್ಯರು ಭೀಮಣ್ಣನನ್ನು ಉಪಚರಿಸಹತ್ತಿದ್ದರು. ಭೀಮಣ್ಣನಿಗೆ ಒಂದೆರಡು ಕಡೆಗೆ ಸುಟ್ಟು ಗುಳ್ಳಿಯೆದ್ದಿತ್ತು. "ಧೋತರಾ ಕಳಿ, ಭೀಮಣ್ಣ. ಇನ್ನೊಂದು ಧೋತರಾ ಕೊಡತೇನಿ. ಭಾಳ ಸುಟ್ಟತೇನು? ನನ್ನ ಮಗ ಅಂದರ ಹೀಂಗ, ನೋಡು. ಇವಂದು ಮುಂದ ಹೆಂಗs ಅಂತ ನನಗ ದೊಡ್ಡ ಚಿಂತಿ ಬಿದ್ದದs" ಎಂದರು ಆಚಾರ್ಯರು.

"ಧೋತರ ಬ್ಯಾಡ, ಏನು ಬ್ಯಾಡ ಆಚಾರ! ಇದರಾಗ ಏನು ಅದ? ಹಿಂಡಿದರ ಈಗ ಒಣಗಿ ಹೋಗತದ ನಾ ಬಂದಿದ್ದ ಕೆಲಸಾ ಅಷ್ಟು ಏನು ಮಾಡತೀರಿ, ಹೇಳಬಿಡಿರಿ?" ಎಂದು ಎದ್ದು ತನ್ನ ಧೋತರವನ್ನು ಹಿಂಡುತ್ತ ಆಚಾರ್ಯರ ಧೋತರಕ್ಕೆ ಬೆದರಿದ ಭೀಮು ನುಡಿದ

"ಅದರಾಗ ಏನದ? ಅತಂತs ತಿಳಿ ನೀನು. ನಾ ಒಮ್ಮೆ ಹೇಳಿದ ಮ್ಯಾಲ ಮುಗಿತು. 'ಪಾಪ, ಮೋನಕಿಬಾಯಿ ಎಳೆ ಹೆಣ್ಣು. ಗರ್ಭವತಿ ಬ್ಯಾರೆ. ಮೈಯ್ಯಾಗ ನೆಟ್ಟಗಿಲ್ಲ. ಆಕಿಗೆ ಮುದ್ರಾಧಾರಣದ ಉಸಾಬರಿ ಬ್ಯಾಡ. ಮೊದಲs ಗಾಬರಿ ಜಾತಿ ಅದು. ಎಲ್ಲಾದರೂ ಗರ್ಭಪಾತಮಾಡಿದ ಪಾಪ ನಿಮ್ಮ ಮ್ಯಾಲ ಬಂದೀತು!' ಅಂತ ಅಧಿಕಾರಿಗಳಿಗೆ ಹೇಳಬಿಡತೀನಿ,— ಈ ಪ್ರಶ್ನಿ ಎದ್ದರ. ಏಳದಿದ್ದರನಕಾ ಮುಗದs ಹೋತು." ಎಂದರು ಆಚಾರ್ಯರು.

"ನೀವು ಎಬ್ಬಿಸದಿದ್ದರ ಆ ಪ್ರಶ್ನೀನs ಏಳೂದುಲ್ಲ. ಈ ನಿಮ್ಮ ಉಪಕಾರಕ್ಕ ತಕ್ಕ ಪ್ರತಿಫಲ ಮುಟ್ಟಸತೇನಿ, ಆಚಾರ" ಎಂದು ಭೀಮನು ಹೊರಡಲನುವಾದ.

"ಚಹ ತಗೊಂಡು ಹೋಗು, ಭೀಮಣ್ಣ! ಈ ಸಾರೆ ನಾನs ಮಾಡಿ ಕೊಡತೇನಿ" ಎಂದು ಆಚಾರ್ಯರು ಅಭಯ ನುಡಿದರು.

ಎದೆಯು ಡವಡವವೆನ್ನುತ್ತಿರಲು "ಕ್ಷಮಿಸಬೇಕು, ಆಚಾರ. ಅಂಗಡಿಗೆ ಹೊತ್ತಾತು. ಈಗ ನಾ ಹೋಗತೇನಿ. ಚಹಾದಾಗ ಏನದ? ಇನ್ನೊಮ್ಮೆ ಮತ್ತ

ಬರೋಣಲ್ಲಾ." ಎಂದವನೆ ಭೀಮು ಆವಸರದಿಂದ ಹೊರಗೆ ಬಂದ. ಆಗ ಅವನ ಜೀವದಲ್ಲಿ ಜೀವ ಬಂತು. ಕೇಶವನ ಮನೆಗೆ ಹೋಗಿ ಚಹ ತೆಗೆದು ಕೊಂಡು ಎಲ್ಲ ವಿಷಯುವನ್ನು ಹೇಳಿ ಅವನನ್ನು ಸಮಾಧಾನಪಡಿಸಿ ಭೀಮು ತನ್ನ ಅಂಗಡಿಗೆ ನಡೆದ.

---

ಪ್ರಕರಣ ೬೨

## ಪ್ರೇಮದ ಕಗ್ಗಂಟು

ಒಳಗಿಂದೊಳಗೇ ಬೇಗುದಿಗೊಂಡು ಕೊರಗುತ್ತಿರುವ ನರಹರಿಗೆ ಏನು ಮಾಡಬೇಕೆಂಬುದು ತಿಳಿಯಲಿಲ್ಲ ಕುಸುಮಾನಿಗೆ ಒಮ್ಮೆ ಕೇಳಿಬಿಡಬಾರ ದೇಕೆ? ಶೀನೂನೊಡನೆ ಒಮ್ಮೆ ಇದರ ಪ್ರಸ್ತಾಪವೆತ್ತಿದರೆ ಹೇಗೆ? ಇದರಿಂದ ಸ್ನೇಹ-ಪ್ರೀತಿಗಳೆರಡನ್ನೂ ಕಳಕೊಂಡಂತಾಗಲಿಕ್ಕಿಲ್ಲವಷ್ಟೆ? ಮತ್ತೆ ಮತ್ತೆ ಇದೇ ದಂಡೆಯ ಮೇಲೆ ಅವನ ವಿಚಾರತರಂಗಗಳು ಅಪ್ಪಳಿಸುತ್ತಿದ್ದವು.

ಹೀಗಿರುವಾಗ ಒಂದು ದಿನ ಪ್ರಮೀಲೆಯಿಂದ ನರಹರಿಗೆ ಪತ್ರ ಬಂತು. ಅದರಲ್ಲಿ ಹೆಚ್ಚಿಗೆ ಏನೂ ಇರಲಿಲ್ಲ

"ಪ್ರಿಯ ಮನವಳ್ಳಿ,—

ಸಂಜೆಗೆ ನಿಮಗಾಗಿ ನಾನು ಫರ್ಗುಸನ್ ಬೆಟ್ಟದ ಹಿಂದಿನ ದಿನ್ನೆಯ ಮೇಲೆ ಕಾದಿರುತ್ತೇನೆ. ನೀವು ಬರಬೇಕು.

ನಿಮ್ಮ ಪ್ರಮೀಲಾ ಪಂಡಿತ್" ಎಂದು ಇಂಗ್ಲಿಷಿನಲ್ಲಿ ಆ ಪತ್ರವಿತ್ತು. ನರಹರಿಗೆ ದಿಗಿಲು ಬಿತ್ತು. ಇದರ ರಹಸ್ಯವೇನು? ತಾರೀಖು ನೋಡಿದ. ಇಂದೇ ಸಂಜೆಗೆ ಅವನು ಹೋಗಬೇಕು. ಹೋಗುವದೆಂದು ನರಹರಿಯು ನಿಶ್ಚಯಿಸಿದ. ಮಿಸ್. ಪಂಡಿತಳ ಬಿನ್ನಹವನ್ನು ಮನ್ನಿಸದೆ ಇರುವದು ಹೇಗೆ?

ನರಹರಿಯು ಹೋದಾಗ ಸಂಜೆಯಾಗುತ್ತ ಬಂದಿತ್ತು. ಆದರೆ ಬೆಳುದಿಂಗಳಿನ ದಿನವಿದ್ದುದರಿಂದ ಹೊತ್ತಾದರೂ ತಿರುಗಿ ಹೋಗುವದು

ಸುಲಭವಾಗಿತ್ತು. ನರಹರಿಗೆ ಮುಂಚಿತವಾಗಿಯೇ ಪ್ರಮೀಲೆಯು ಒಂದು ಬಂಡೆಗಲ್ಲಿನ ಮೇಲೆ ಅವನ ದಾರಿ ನೋಡುತ್ತ ಕುಳಿತಿದ್ದಳು ಇದ್ದುದರಲ್ಲಿಯೇ ಏಕಾಂತದ ಸ್ಥಳವೆಂದು ಅವಳು ಇದನ್ನು ಆರಿಸಿರಬೇಕು. ಮುಗುಳುನಗೆ ನಕ್ಕು ನರಹರಿಯು 'ನಮಸ್ತೇ' ಎಂದ ಪ್ರತ್ಯುತ್ತರವಾಗಿ ಮಂದಹಾಸದಿಂದ ಹತ್ತಿರದ ಬಂಡೆಯ ಮೇಲೆ ಕುಳಿತುಕೊಳ್ಳಲು ಪ್ರಮೀಲೆಯು ಸೂಚಿಸಿದಳು.

"ಏನು ಅಕಸ್ಮಾತ್ತಾಗಿ ಈ ಪತ್ರ? ಕೇಶವರಾಯರಿಗೆ ಕುಶಲವಷ್ಟೆ?" ಎಂದು ನರಹರಿ ಕೇಳಿದ.

"ಎಲ್ಲರೂ ಕ್ಷೇಮದಿಂದಿದ್ದಾರೆ ನನ್ನ ಕುಶಲದ ಸಲುವಾಗಿ ಈಗ ನಿಮ್ಮನ್ನು ಕರೆಯಿಸಿದ್ದು" ಎಂದು ಪ್ರಮೀಲೆಯು ಮುಗುಳುನಗೆ ಬೀರಿದಳು.

"ಆದೇನು? ನಿಮ್ಮ ಪ್ರಕೃತಿ ಒಳಿತಷ್ಟೇ? ಕುದುರೆಯ ಸವಾರಿಯ ಚಟ ಬಹಳ ನಿಮಗೆ. ಅದನ್ನು ಸ್ವಲ್ಪ ಕಡಿಮೆ ಮಾಡಬೇಕು." ಎಂದ ನರಹರಿ. ಪ್ರಮೀಲೆಗಾಗಿ ಅವನಲ್ಲಿ ಭ್ರಾತೃವಾತ್ಸಲ್ಯವಿತ್ತು.

"ನನ್ನ ಕುದುರೆ ಏನು ಮಾಡೀತು, ಮುನವಳ್ಳಿ! ಈಗ ಇನ್ನೊಂದು ಕುದುರೆ ಏರಿ ಸಂಕಟಪಡುತ್ತಿದ್ದೇನೆ. ಗಾಳಿಗುದುರೆಯದು. ನನ್ನ ಅಂಕಿತ ದಲ್ಲಿಲ್ಲ" ಎಂದು ಪ್ರಮೀಲೆಯು ವಿಷಾದದಿಂದ ನಕ್ಕಳು.

"ಯಾವ ಗಾಳಿಗುದುರೆ?" ನರಹರಿ ಕೇಳಿದ.

"ಪ್ರೀತಿಯದು." ಪ್ರಮೀಲೆಯೆಂದಳು.

"ಯಾರ ಮೇಲೆ ಪ್ರೇಮ?"

"ನಿಮ್ಮ ಮೇಲೆ."

ನರಹರಿಯು ಅವಾಕ್ಕಾದ ಅವನಿಗೆ ದಿಕ್ಕೇ ತಪ್ಪಿತು. ತಾನು ಒಬ್ಬರ ಪ್ರೀತಿಯ ಜಾಲದಲ್ಲಿ ಸಿಲುಕಿ ಸಂಕಟಪಡುತ್ತಿರುವಾಗ ಇನ್ನೊಬ್ಬರು ತನ್ನನ್ನು ಪ್ರೀತಿಸಿ ಕೊರಗುತ್ತಿರುವದು ಅವನಿಗೆ ದೈವದ ವಿಚಿತ್ರ ಹೃದಯ ಹೀನ ಲೀಲೆಯಾಗಿ ಕಂಡಿತು.

ಪ್ರಮೀಲೆಯು ಮತ್ತೆ ಕಂಪಿಸುವ ದನಿಯಲ್ಲಿ ಹೇಳಿದಳು: "ಮುನವಳ್ಳಿ, —ನಿಮ್ಮನ್ನು ಭೆಟ್ಟಿಯಾಗುವದಕ್ಕಿಂತ ಮುಂಚೆ ನಾನು ಉಲ್ಲಸದ ಮೂರ್ತಿ ಯಾಗಿದ್ದೆ. ಭೆಟ್ಟಿಯಾದ ಮೇಲೆ,—ನಿಮ್ಮ ಜೊತೆಯಲ್ಲಿದ್ದಾಗ ಮಾತ್ರ

ಆ ಉಲ್ಲಾಸವು ಮರಳುತ್ತದೆ. ಇಲ್ಲದಾಗ ನಾನು ದಿಙ್ಮೂಢಳಾಗುತ್ತೇನೆ ನನ್ನ ನಿಮ್ಮ ಬಾಳು ಒಂದಾಗದ ವಿನಾ ನನ್ನ ಈ ಜೀವಕ್ಕೆ ಶಾಂತಿಯಿಲ್ಲ." ಎಂದು ನರಹರಿಯ ಕೈ ಹಿಡಿಯಲು ಅವಳ ಕೈ ಮೆಲ್ಲನೆ ಆಸರವನ್ನು ಹುಡುಕುವ ಬಳ್ಳಿಯ ಕುಡಿಯಂತೆ ಮುಂದುವರಿಯಿತು.

ನರಹರಿಗೆ ಉದ್ವೇಗವಾಯಿತು. ಕೈ ಹಿಂತೆಗೆದುಕೊಂಡು ಅವನೆಂದ: "ಮಿಸ್ ಪಂಡಿತ್! ಹೀಗಾಗುವದೆಂದು ಕನಸು-ಮನಸಿನಲ್ಲಿಯೂ ನಾನು ಎಣಿಸಿರಲಿಲ್ಲ. ಇದೊಂದು ವಿಚಿತ್ರ ಆಘಾತ. ನಿಮ್ಮ ತಂದೆಯವರಿಗೆ ಈ ವಿಷಯವನ್ನು ತಿಳಿಸಿದ್ದೀರಾ?"

"ಅವರಿಗೆ ತಿಳಿಸುವ ಕಾರಣವಿಲ್ಲ. ಈಗ ಬೇಕಾಗಿದ್ದು ನಿಮ್ಮ ಒಪ್ಪಿಗೆಯೊಂದು. ಅದಿದ್ದರೆ ಈ ಮಂಗಲಕಾರ್ಯಕ್ಕೆ ಅವರು ಸಂತೋಷದಿಂದ ಒಪ್ಪುವರು" ಎಂದು ಹೃದಯವು ತವಕಿಸುತ್ತಿರಲು ಪ್ರಮೀಲೆಯು ನುಡಿದಳು.

ಶೂನ್ಯಮನಸ್ಕನಾಗಿ ನರಹರಿಯು ಒಂದು ಕ್ಷಣಹೊತ್ತು ಪ್ರಮೀಲೆಯನ್ನು ದಿಟ್ಟಿಸಿ ನೋಡಿದ. ಪ್ರಮೀಲೆಯು ಚೆಲುವೆಯೆಂಬುದು ಅವನಿಗೆ ಗೊತ್ತಿತ್ತು. ಈಗ—ಅವಳು ಭಾವನಾಪರಳಾದಾಗ—ಅವಳ ಚೆಲುವಿನ ಕಾಂತಿಯು ಹೆಚ್ಚಿತ್ತು. ಆದರೆ ಕುಸುಮಾನ ಚೆಲುವಿನ ದೈವಿಕತೆಯೇ ಬೇರೆ. ಶರದೃತುವಿನ ಹುಣ್ಣಿಮೆಯನ್ನು ಸಮೀಪಿಸುತ್ತ ನಡೆದ ಚಂದ್ರಮನ ಚೆಲುವದು,—ಪ್ರಮೀಲೆಯದು ಅಲ್ಲಿ ಬೆಳಕಿತ್ತು,—ಆದರೆ ಅದು ತಂಪು-ಬೆಳಕು. ಅದರ ಸೀತಲ ಸ್ಪರ್ಶ ನರಹರಿಯ ಹೃದಯವನ್ನು ಹಿಮವಾಗಿಸುತ್ತಿತ್ತು. ಕುಸುಮಾ ರೋಹಿಣಿಯಂತೆ. ಆ ನಕ್ಷತ್ರವನ್ನು ನೋಡಿದಷ್ಟು ಸಲ ನರಹರಿಗೆ ತಣಿವೇ ಇಲ್ಲ. ಅದರ ಚೆಲುವಿನಲ್ಲಿ ಅನಂತ ಪರಿಗಳು ಅವನಿಗೆ ಕಾಣಿಸಿಕೊಳ್ಳುತ್ತಿದ್ದವು. ಆ ನಕ್ಷತ್ರಕ್ಕಾಗಿ ಹಾತೊರೆಯುವ ಪತಂಗವೇ ತಾನಾಗಲೀ, ಆ ಪತಂಗದ ಪತನದಲ್ಲಿಯೇ ಧನ್ಯತೆಯಿದೆಯೆಂದು ನರಹರಿಗೆನಿಸಿತು.

"ಮಿಸ್. ಪಂಡಿತ್, ನೀವು ನನ್ನನ್ನು ಸಂಪೂರ್ಣವಾಗಿ ಅರಿತಿಲ್ಲ. ನನ್ನ ಹೃದಯದ ಮಿಡಿತವೇ ಬೇರೆಯಾಗಿದೆ. ನೀವು ಸೂಚಿಸುವದು ಅಸಕ್ಯವಾದ ಮಾತು." ಎಂದು ನರಹರಿಯು ಸಾವಕಾಶವಾಗಿ ಹೇಳಿದನು.

"ಅದೇಕೆ ?" ಎಂದು ಅಧೀರಳಾಗಿ ಪ್ರಮೀಲೆಯು ಪ್ರಶ್ನಿಸಿದಳು. ಕೊತಲ್ಲಿ ಅವಳ ಕಾಲೇ ಹೋದವು. ನಿಷ್ಫಲತೆ–ಸಫಲತೆಗಳ ನಡುವೆ ಅವಳ ಜೀವನವು ಹೊಯ್ದಾಡುತ್ತಿತ್ತು.

"ನನ್ನ ಜೀವನವು ಇನ್ನೊಬ್ಬರಿಗಾಗಿ ಮೀಸಲಾಗಿದೆ" ಎಂದು ಕಂಪಿಸುವ ದನಿಯಲ್ಲಿ ನರಹರಿ ಹೇಳಿದ.

"ಅವರಾರು ?" ಎಂದು ಉದ್ವೇಗದಿಂದ ಪ್ರಮೀಲೆ ಪ್ರಶ್ನಿಸಿದಳು.

"ಆ ಹುಡಿಗೆ ನಿಮ್ಮಷ್ಟು ಕಲಿತಿಲ್ಲ, ಮಿಸ್. ಪಂಡಿತ್ ! ನಿಮ್ಮ ಹಾಗೆ ಆಕೆ ಶ್ರೀಮಂತ ಮನೆತನದವಳಲ್ಲ ಆದರೆ ಈ ಜೀವನವನ್ನು ಅವಳಿಗೆ ಅರ್ಪಿಸಿಬಿಟ್ಟಿದ್ದೇನೆ." ಎಂದ ನರಹರಿ

"ಅವಳು ಅದನ್ನು ಸ್ವೀಕರಿಸಿರುವಳೆ ?" ಎಂದು ಪ್ರಮೀಲೆ ಕೇಳಿದಳು.

ನರಹರಿಯ ಹೃದಯವು ಕುಸಿಯಿತು. ಅವನ ಬಾಯಿಂದ ಮಾತು ಹೊರಡದಾಯಿತು. ಅತಿ ಪ್ರಯಾಸದಿಂದ ಅವನು ಹೇಳಿದ: "ಆ ವಿಷಯದಲ್ಲಿ ನಿಶ್ಚಿತವಾಗಿ ನಾನು ಹೇಳಲಾರೆ ಅವಳು ಸ್ವೀಕರಿಸದಿದ್ದರೆ ಹಾಗೆಯೇ ಬಿದ್ದು ಬಾಡಿ ಹೋಗುವ ದಾರಿ-ಹೂವಾಗಬಹುದು ನನ್ನ ಜೀವನ. ಆದರೆ ಅದನ್ನು ಇನ್ನೊಂದು ಅಧಿದೈವತಕ್ಕೆ ಅರ್ಪಿಸುವದು ಸಾಧ್ಯವಿಲ್ಲ"

ಪ್ರಮೀಲೆಯ ಮೊಗವು ಕಂದಿತು ಮನವು ಮುದುಡಿಕೊಂಡಿತು. "ನಿಮಗೆ ತಂದ ಕಾಣಿಕೆಯನ್ನು ಸ್ವೀಕರಿಸದೆ ಸ್ವೀಕರಿಸದವರಿಗೆ ನಿಮ್ಮ ಜೀವನವನ್ನು ಕಾಣಿಕೆಯಾಗಿ ಕೊಡಬೇಕೆ ? ಇದೆಂತಹ ನ್ಯಾಯ ?" ಎಂದು ಸೋತು ಸಣ್ಣಾಗಿ ಪ್ರಮೀಲೆ ಪ್ರಶ್ನಿಸಿದಳು

ಒಂದು ಕ್ಷಣಹೊತ್ತು ನರಹರಿಯು ಆಲೋಚನಾಪರನಾದ. ಬಳಿಕ "ಮಿಸ್. ಪಂಡಿತ್, ನನ್ನ ಜೀವನ ಇನ್ನೊಬ್ಬರಿಗೆ ಹೇಗೆ ಮೀಸಲು ಎಂಬುಗಕ್ಕೆ ನಿಮ್ಮನ್ನು ಒಪ್ಪಿಸುತ್ತೇನೆ. ನಿಮಗಾಗಿ ಎತ್ತಿ ಹಿಡಿದ ಇನ್ನೊಂದು ನಿರ್ಮಲ ಜೀವದ ಕಾಣಿಕೆಯನ್ನು ತೋರಿಸುತ್ತೇನೆ ಆಗ ಅದನ್ನು ನೀವು ಸ್ವೀಕರಿಸುತ್ತೀರಾ ?" ಎಂದು ಅವನು ಪ್ರಶ್ನೆ ಮಾಡಿದ.

"ಅದನ್ನು ನೋಡೋಣವಂತೆ. ಮೊದಲು ನನ್ನ ಬಿನ್ನಹಕ್ಕೆ ಮನ್ನಣೆ ಕೊಡಿರಿ." ಎಂದು ಪ್ರಮೀಲೆಯು ವಿಷಾದದಿಂದ ನಕ್ಕಳು.

ಇಬ್ಬರೂ ಅಲ್ಲಿಂದ ತಿರುಗಿ ಹೊರಟಾಗ ಮುಚ್ಚಿ ಹೋದ ತನ್ನ ಕಾಂತಿಯನ್ನು ಚಂದ್ರನು ತಿರುಗಿ ಪಡೆಯುತ್ತಿದ್ದ.

ಇದಾದ ಮೇಲೆ ಕೆಲವು ದಿನಗಳ ವರೆಗೆ ನರಹರಿಯು ಇನ್ನಿಷ್ಟು ಮುದುಡಿಕೊಂಡ ಯಾರೊಡನೆಯೂ ಅವನು ಮನಸ್ಸು ಬಿಚ್ಚಿ ಮಾತಾಡುತ್ತಿರಲಿಲ್ಲ. ಶೀನೂನಿಗೆ ದಿಗಲು ಬಿತ್ತು ಪಾಟಣಕರನಿಗೂ ವೇದನೆಯಾಯಿತು. ಆದರೆ ನರಹರಿಯ ಮನದಲ್ಲಿ ಕವಿದ ಕಾರ್ಮೋಡಗಳನ್ನು ಚದುರಿಸುವದು ಅವರಿಗೆ ಸಾಧ್ಯವಾಗಲಿಲ್ಲ. ಸ್ವತಃ ಪಾಟಣಕರನೂ ಪ್ರೇಮದ ಸೆಳತಕ್ಕೆ ಸಿಕ್ಕು ಗಾಸಿಯಾಗಿದ್ದ. 'ಅಶ್ವಾರೋಹಿ'ಯ ಚಿತ್ರ ಅವನ ಮನಸ್ಸಿನೆದುರು ಕಟ್ಟಿರುವದಲ್ಲದೆ ಆಗೀಗ ಅವನ ಕಣ್ಣೆದುರಿಗೂ ಸುಳಿಯುತ್ತಿತ್ತು. ಬಿ ಎ. ದ ತಯಾರಿಯಲ್ಲಿಯೂ ಪ್ರೇಮದ ಸೆಳವಿನಲ್ಲಿಯೂ ಸಿಕ್ಕು ಅವನು ಜರ್ಜರಿತನಾಗಿದ್ದ. ದೇಶಮುಖರ ಮಗಳನ್ನು ತನ್ನಂಥ ದರಿದ್ರನು ಪ್ರೀತಿಸುವದೆಂದರೇನು? ಎಂದು ಒಂದು ದನಿಯು ಕೇಳುತ್ತಿತ್ತು. ಐ ಸಿ. ಎಸ್. ಗೆ ಹೋಗುವವನು ತಾನು. ಅಂದಮೇಲೆ ಇದರಲ್ಲಿ ಅಶಕ್ಯವಾದುದೇನು? ಎಂದು ಇನ್ನೊಂದು ದನಿಯು ಮಿಡಿಯುತ್ತಿತ್ತು ಹೀಗೆ ವಿಚಾರಗಳ ತಾಕಲಾಟದಲ್ಲಿ ಪಾಟಣಕರನು ಸಂದಿಗ್ಧ ಮನಸ್ಕನಾಗಿದ್ದ

ವಸ್ತುಸ್ಥಿತಿಯು ಹೀಗಿರುವಾಗ ಇನ್ನೊಂದು ಘಟನೆಯು ಸಂಭವಿಸಿತು ಕುಸುಮಾ ಶಾಲೆ ಬಿಟ್ಟ ಮೇಲೆ ಒಬ್ಬಳೇ ಮನೆಗೆ ಹೋಗುವದನ್ನು ಶೀನು ಒಂದೆರಡು ಸಲ ನೋಡಿದ್ದ. ಅವಳೊಡನೆ ಒಮ್ಮೆ ಮಾತನಾಡಿ ತನ್ನ ಹೃದಯದ ಗಂಟನ್ನು ಅವಳೆದುರಿಗೆ ಬಿಚ್ಚಿಡಬೇಕೆಂದು ಅವನ ಆಸೆಯು ಬಲವತ್ತರವಾಗಿತ್ತು. ಕುಸುಮಾನ ಶಾಲೆ ಬಿಡುವ ಹೊತ್ತಿಗೆ ಶಾಲೆಯ ಹತ್ತಿರ ಸುಳಿಯುವದು ಅವನಿಗೆ ರೂಢಿಯಾಗಿ ಹೋಯಿತು ಅನೇಕ ಸಲ ಅಲ್ಲಿಂದ ಕುಸುಮಾ ಮನೆಗೆ ಹೋಗುವದನ್ನು ಶೀನು ನೋಡಿದ್ದ. ಆದರೆ ಅವಳನ್ನು ಮಾತನಾಡಿಸುವ ಧೈರ್ಯವು ಅವನಿಗಾಗಿದ್ದಿಲ್ಲ ಒಂದು ದಿನ ಅಕಸ್ಮಾತ್ತಾಗಿ ಕುಸುಮಾನೇ ಅವನನ್ನು ನೋಡಿ: "ಇದೇನು, ಶೀನೂ! ಎಲ್ಲಿಗೆ ಹೊರಟಿದ್ದೀ?" ಎಂದು ಕೇಳಿದಳು

"ಎಲ್ಲಿಯೂ ಇಲ್ಲ. ನಿಮ್ಮ ಮನೆಗೇ ಹೊರಟಿದ್ದೆ" ಎಂದು ಶೀನು ಅವಳ ಜೊತೆಯನ್ನು ಸೇರಿದ. ಹೀಗೆ ಒಬ್ಬ ಗಂಡು ಹುಡುಗನೊಡನೆ ದಾರಿ ನಡೆ

ಯಲು ಕುಸುಮಾ ಸಂಕೋಚಪಟ್ಟುಕೊಂಡಳು. ಆದರೆ ಅದು ಈಗ ಅನಿವಾರ್ಯವಾಗಿತ್ತು.

ಇಬ್ಬರೂ ಸುಮ್ಮನೆ ಕೆಲವು ಹೊತ್ತು ದಾರಿ ನಡೆದರು. ಆಮೇಲೆ ಶೀನು ಅಂಜುತ್ತಂಜುತ್ತ "ನಿನ್ನೊಡನೆ ಒಂದು ಮಾತನಾಡುವದಿತ್ತು, ಕುಸುಮಾ!" ಎಂದ.

"ಅದೇನು?" ಎಂದು ಕುಸುಮಾ ಆಶ್ಚರ್ಯದಿಂದ ಕೇಳಿದಳು.

"ನನ್ನ ಮದುವೆಯ ಮಾತು." ಎಂದು ಶೀನು ತೊದಲು ನುಡಿದ.

ಕುಸುಮಾನಿಗೆ ಇನ್ನಿಷ್ಟು ಆಶ್ಚರ್ಯವಾಯಿತು. "ನಾನೇನು ಅನುಭವಿಕಳೆಂದು ನಿನ್ನ ಮದುವೆಯ ಮಾತಿನಲ್ಲಿ ನನಗೆ ಕೇಳುತ್ತೀ?" ಎಂದು ಆಕೆ ನಕ್ಕಳು. "ಇಲ್ಲ.....ನಾನು.... ನಿನ್ನನ್ನು ...." ಮುಂದೆ ಶೀನೂನ ಬಾಯಿಂದ ಮಾತೇ ಹೊರಡಲಿಲ್ಲ. ಅವನ ಮೋರೆಯು ಹುಚ್ಚುಚ್ಚಾಯಿತು.

"ಏನು? ಇದೇನು?" ಎಂದು ಕುಸುಮಾ ಅವನಿಂದ ನಾಲ್ಕು ಹೆಜ್ಜೆ ಹಿಂದೆ ಸರಿದಳು. ಸಂಭಾಷಣೆಯು ಬೆಳೆದ ಅಕಸ್ಮಿಕವಾದ ರೀತಿಯಲ್ಲಿ, ವಿಚಾರ ಮಾಡಲು ಸಹ ಅವಳಿಗೆ ಆಸ್ಪದ ಸಿಕ್ಕಿರಲಿಲ್ಲ. ಆದರೆ ಈಗ ಶೀನೂನ ಹೃದಯವನ್ನು ಒಂದು ಕವಿತೆಯಂತೆ ಓದಬಹುದಾಗಿತ್ತು. ಹಾಗೆ ಓದಲು ವೇಳೆ ಹಿಡಿಯಲಿಲ್ಲ. ಒಂದು ನಿಮಿಷದಲ್ಲಿ ನೈಜ ಸ್ಥಿತಿಯು ಅವಳಿಗೆ ಹೊಳೆಯಿತು. ಆಗ ಶಾಂತಳಾಗಿ ಅವಳು ಹೇಳಿದಳು: "ನೀನು ಮನಸ್ಸು ಮಾಡಿದ್ದು ತಿಳಿಯಿತು, ಶೀನು. ಆದರೆ ಒಂದು ಮಾತನ್ನು ನೀನು ನೆನಪಿನಲ್ಲಿಡು. ನರಹರಿಯ ಸ್ನೇಹಿತನೆಂದು ನಿನಗೆ ನಮ್ಮ ಮನೆಯಲ್ಲಿ ಸ್ವಾಗತವಿದೆ. ಎರಡನೆಯ ಯಾವ ವಿಚಾರವೂ ನಿನ್ನ ಮನಸ್ಸಿನಲ್ಲಿ ಸುಳಿಯದಿರಲಿ."

ದಿಕ್ಕುಗಾಣದ ಶೀನೂನಿಗೆ ಈಗ ದಾರಿ ಕಂಡಿತು. ಅದು ಶೂನ್ಯತವುವಾದ ದಾರಿ, ನೀರಸವಾದ ದಾರಿ, ಅನಂತತೆಯಲ್ಲಿ ಮಾತ್ರ ಮುಗಿಯುವ ದಾರಿ. ಆದರೆ ಹೀಗೆ ದಾರಿ ಸಿಕ್ಕಿದುದರಿಂದ ಈ ಕ್ಷಣಕ್ಕೆ ಅವನಿಗಾಗಿದ್ದ ಸಂಕೋಚವು ಬಯಲಾಗಿ ಹೋಯಿತು. "ಹಾಗಾದರೆ ನರಹರಿಗೆ ನಿನ್ನನ್ನು ಕೊಡಬೇಕೆಂದು ಗೊತ್ತಾಗಿದೆಯೇನು?" ಎಂದು ಸ್ಪಷ್ಟ ಧ್ವನಿಯಲ್ಲಿ ಶೀನು ಪ್ರಶ್ನೆ ಮಾಡಿದ. ಆ ಧ್ವನಿಯಲ್ಲಿ ಮುಂಜಾಗಲಿ ಕಣ್ಣೀರಾಗಲಿ ಇರಲಿಲ್ಲ. ಒಣಗಿದ ಗಂಟಲದ ಧ್ವನಿಯದು. ಆ ಗಂಟಲು ಇನ್ನು ಆರ್ದ್ರವಾಗುವದು

ಸಾಧ್ಯವೇ ಇಲ್ಲ. ಅಮೃತದ ಜಿನುಗು-ಹನಿಯನ್ನು ಬಯಸಿ ಅದು ಶೋಷವನ್ನು ಹೊಂದಿತ್ತು. ಈಗ ಆ ಹನಿಯೂ ಸಾಧ್ಯವಿಲ್ಲ; ಆರಿಕೆಯೂ ಸಾಧ್ಯವಿಲ್ಲ. ಆದರೆ ಈ ಬಾಯಾರಿಕೆ ನಿತ್ಯದ ಜೀವನಕ್ಕಲ್ಲ; ಗಂಟಲೊಳಗಂಟಲಿನ ನೀರಸತೆಯದು.

"ಹೌದು. ನಮ್ಮಿಬ್ಬರ ಮನಸ್ಸಿನ ನಿಶ್ಚಯವದು" ಎಂದು ಕುಸುಮಾ ಹೇಳಿದಳು. ಶೀನು ನರಹರಿ ಕುಸುಮಾರಿಗೆ ಅಕ್ಕನಾಗಿದ್ದ ಪದ್ಮಾವತಿಯನ್ನು ನೆನೆದ; ನರಹರಿಯ ಪ್ರತಿಭೆಯನ್ನು ಮನಸ್ಸಿಗೆ ತಂದುಕೊಂಡ. ಅವನ ಸಹಜ ಮನೋಜ್ಞತೆಯನ್ನು ಮನಸ್ಸಿನಲ್ಲಿಯೇ ತೂಗಿದ ಇಂಥ ತಪಸ್ವಿಗಲ್ಲದೆ ಕುಸುಮಾನಂಥ ದಿವ್ಯ ಕಾಣಿಕೆ ಮತ್ತಾರಿಗೆ? ಅವನ ಸ್ನೇಹಿತನಾಗಿರುವದು ತನ್ನ ಪುಣ್ಯವೆಂದು ಶೀನು ಭಾವಿಸಿದ ಆದರೆ ಅನಂತಕಾಲದ ವರೆಗೆ ಗಂಟಲು ಒಣಗಿದ ಈ ಗೆಳೆಯನನ್ನು ತೆಗೆದುಕೊಂಡು ನರಹರಿಯೇನು ಮಾಡುವನು? ಎಂದು ಶೀನು ತನ್ನೊಳಗೇ ಮಿಡುಕಿದ ಇಷ್ಟೆಲ್ಲ ವಿಚಾರ ಮನಸ್ಸಿನಲ್ಲಿ ನಡೆದಿದ್ದರೂ ಶೀನು ಮಾತು ಮುಂದುವರಿಸಿದ: "ದೇಸಾಯರ ವಿಚಾರವೇನು?"

"ನಮ್ಮ ವಿಚಾರವೇ ಅವರದು, ಅಥವಾ ಅವರ ವಿಚಾರವೇ ನಮ್ಮದು." ಎಂದು ಕುಸುಮಾ ತುಸುವೆ ನಕ್ಕಳು.

ಬಳಿಕ ಒಂದೆರಡು ನಿಮಿಷಗಳು ಮತ್ತೆ ಮೌನದಲ್ಲಿ ಕಳೆದವು.

"ಈ ಅಧ್ಯಾಯ ಮುಗಿಯುವಷ್ಟರಲ್ಲಿ ಇನ್ನೊಂದು ಮಾತು ಕೇಳಬೇಕು. ಕೇಳಲೆ?" ಎಂದ ಶೀನು.

"ಕೇಳಬಹುದು." ಎಂದಳು ಕುಸುಮಾ.

"ಇಲ್ಲಿ ನಾನು ನಿನಗೆ ಭೆಟ್ಟಿಯಾಗಿದ್ದು, ಮಾತನಾಡಿದ್ದು, ಕೇಳಿದ್ದು, —ಇವೆಲ್ಲವನ್ನೂ ಗೌಪ್ಯವಾಗಿರಿಸಬೇಕು ನೀನು ನರಹರಿಗೂ ಇದು ತಿಳಿಯಬಾರದು. ಇದೊಂದು ಮಾತನ್ನು ನಡೆಸುವಿಯಾ ನೀನು, ಕುಸುಮಾ?" ಎಂದು ಶೀನು ದೈನ್ಯದಿಂದ ಕೇಳಿದ.

"ಆಗಬಹುದು. ಅಂಥ ಪ್ರಸಂಗ ಬರದ ವಿನಾ ಈ ಮಾತೂ ನನ್ನ ಮನದಲ್ಲಿಯೇ ಉಳಿಯುವದೆಂದು ಹೇಳಬಲ್ಲೆ" ಎಂದು ಕುಸುಮಾ ಹೇಳಿದಳು.

"ಅಷ್ಟೊಂದು ಆಶ್ವಾಸನ ಸಾಕು ನನಗೆ. ಒಳ್ಳೆಯದು. ಇನ್ನು ಹೋಗಿ

ಬರುತ್ತೇನೆ. ಅಷ್ಟಣೆ ಕೊಡು." ಎಂದು ಕುಸುಮಾನನ್ನು ಬೀಳ್ಕೊಂಡು ಶೀನು ಹಿಂತಿರುಗಿದ. ಕುಸುಮಾ ತುಸು ಮುಂದೆ ಹೋಗಿ ಮನೆ ಮುಟ್ಟಿದಳು.

ನರಹರಿ ಮೇಲಿಂದ ಮೇಲೆ ಮನೆಗೆ ಬರದೆ ಇರುವದು, ಬಂದರೂ ಚಿಂತಾಪರನಾಗಿರುವದು, ಮುಕ್ತಮನಸ್ಸಿನಿಂದ ಮಾತನಾಡದೆ ಇರುವದು,— ಇವೆಲ್ಲ ಒಂದೊಂದೆಯಾಗಿ ಈಗ ಕುಸುಮಾನಿಗೆ ಅರ್ಥವಾಗತೊಡಗಿದವು. ತನ್ನ ವಿಷಯಕ್ಕಿದ್ದ ಶೀನೂನ ಅನುರಾಗವನ್ನು ಅವನು ಲಕ್ಷಿಸಿರಬೇಕು; ಒಂದು ಕ್ಷಣ ತಂದೆಯವರ ಧೋರಣದ ಬಗ್ಗೆ ಅವನಿಗೆ ಸಂದೇಹ ಬಂದಿರಬೇಕು; ತನ್ನ ಮಾತಿಗೂ ಏನೇನೋ ಅಪಾರ್ಥವನ್ನು ಕಲ್ಪಿಸಿರಬೇಕು! ಅಂತೇ ನರಹರಿಯು ಹೀಗೆ ರಾಹುಗ್ರಸ್ತನಾಗಿರಬೇಕು. ವಿಲಂಬವು ಇನ್ನು ತರವಲ್ಲವೆಂದು ಕುಸುಮಾ ಯೋಚಿಸಿದಳು. ನಿತ್ಯದ ಪ್ರಕಾರ ಆವಳು ಶಾಲೆಯಿಂದ ಬಂದಮೇಲೆ ಅವಳೊಡನೆ ದೇಸಾಯರೂ ಚಹ ಕುಡಿಯಲು ಬಂದಾಗ ಅವರು ಸಹಜವಾಗಿ "ನರಹರಿ ಯಾಕೋ ಇತ್ತ ಕಡೆಗೆ ಬಂದೇ ಇಲ್ಲ?" ಎಂದರು.

"ಹೌದು ಬಂದೇ ಇಲ್ಲ." ಎಂದು ಕುಸುಮಾ ಅದಕ್ಕೆ ದನಿಗೂಡಿಸಿದಳು. ಮಾತನಾಡಿ ವಿಷಯವನ್ನು ದೇಸಾಯರು ಅಷ್ಟಕ್ಕೇ ಬಿಟ್ಟುಬಿಡಬಹುದಾಗಿತ್ತು. ಆದರೆ ಕುಸುಮಾನೂ ದನಿಗೂಡಿಸಿದ್ದನ್ನು ಕೇಳಿದೊಡನೆ ಚಹ ಕುಡಿದು ಅಂಗಿ ಹಾಕಿಕೊಂಡವರೆ "ಕಾಲೇಜಿನ ಕಡೆಗೆ ಹೋಗಿಬರುತ್ತೇನೆ" ಎಂದು ದೇಸಾಯರು ಹೊರಟರು.

ದೇಸಾಯರು ಒಂದು ರಸ್ತೆಯಿಂದ ಕಾಲೇಜಿನ ಕಡೆಗೆ ಹೋದರು. ಇನ್ನೊಂದರಿಂದ ನರಹರಿಯು ಮನೆಗೆ ಬಂದ. ಅವನ ಬರವನ್ನು ನೋಡಿ ಕುಸುಮಾ ಹಿಗ್ಗಿದಳು. ಆದರೆ ಅವನ ಮುಖವನ್ನು ನೋಡಿ ಆಕೆ ತುಸು ಅಧೀರಳಾದಳು. ಶಾಂತಪ್ರಶಾಂತವಾಗಿರುವ ನರಹರಿಯ ಮೋರೆಯ ಮೇಲೆ ಈಗೊಂದು ರುದ್ರ ಕಳೆಯು ಬಂದಿತ್ತು. ಅಲ್ಲಿಗೆ ಬಂದಾಗ ನರಹರಿಯು ಹೆಚ್ಚು ಮಾತನಾಡಲಿಲ್ಲ. "ಕುಸುಮಾ, ದೇಸಾಯರೆಲ್ಲಿ?" ಎಂದು ಕೇಳಿದ.

"ಈಗ ನಿನ್ನನ್ನೇ ಭೆಟ್ಟಿಯಾಗಲು ಹೋದ. ನರಹರಿ, ಕೂಡು. ಇಷ್ಟು ಅವಸರವೇಕೆ?" ಎಂದು ತುಸು ಗಾಬರಿಯಾಗಿ ಹೇಳಿದಳು ಕುಸುಮಾ.

ನರಹರಿಯ ದುಃಖವೆಲ್ಲ ಒತ್ತರಿಸಿ ಬಂದಿತು. ಇಷ್ಟು ದಿನ ಹೃದಯದಲ್ಲಿ ಹುದುಗಿಸಿಟ್ಟಿದ್ದ ಶೋಕವು ಈಗ ಪ್ರಜ್ವಲಿಸಿತು. "ಏಕೆ! ನನಗೇಕೆ ಇಷ್ಟೊಂದು ಉಪಚಾರ, ಕುಸುಮಾ! ನಾನು ಈ ಮನೆಯಲ್ಲಿ ಬೇಕಾಗಿಲ್ಲ ಹೀಗಿದ್ದೂ ಮತ್ತೆ ಈ ಮಾತೇಕೆ?" ಎಂದ ನರಹರಿ ಅವನ ಕಣ್ಣೀರು ಪಟ ಪಟನೆ ಉದುರಿದವು

"ಇದೇನು, ನರಹರಿ! ಈ ವಿಚಾರಗಳನ್ನು ನಿನ್ನ ತಲೆಯಲ್ಲಿ ಯಾರು ಹಾಕಿದರು? ನೀನು ಹೀಗನಿಸಿಕೊಳ್ಳಲು ಕಾರಣವೇನು?" ಎಂದು ಕುಸುಮಾ ನರಹರಿಯ ಗದ್ದವನ್ನು ಹಿಡಿದು ಮೊಗವೆತ್ತಿ ತನ್ನ ಸೆರಗಿನಿಂದ ಅವನ ಕಣ್ಣೊರಸಿದಳು. ತಾವಿನ್ನೂ ಮದುವೆಯಾಗದ ಯುವಕ-ಯುವತಿಯರೆಂಬು ದನ್ನು ಒಂದು ಕ್ಷಣ ಅವಳು ಮರೆತುಬಿಟ್ಟಿದ್ದಳು. ಅವಳ ಕಂಗಳಲ್ಲಿ ಅಶ್ರು ಜಲ ತುಂಬಿತ್ತು.

ಕುಸುಮಾನ ಸ್ಪರ್ಶವಾಗಿ ಅವಳು ತನ್ನ ಕಣ್ಣೊರಸಿದಾಗ ನರಹರಿಯ ಹೃದಯದಲ್ಲಿ ಒಂದು ಅನುಪಮ ಶಾಂತಿಯು ನೆಲಸಿತು. ಅವನ ದುಃಖಗಳೆಲ್ಲ ದೂರವಾದವು ಯಾವುದೋ ಪಿಶಾಚಿಯೊಂದರ ಹಿಡಿತದಲ್ಲಿ ಸಿಕ್ಕು ಇಷ್ಟು ದಿನ ವ್ಯರ್ಥ ಬಳಲಿಕೆಯಾಯಿತೆಂಬ ಮನವರಿಕೆಯೊಂದು ಅವನಲ್ಲಿ ಆಳವಾಗಿ ನಿಂತಿತು. ಅವನ ಮುಖಚರ್ಯೆಯು ಬದಲಾಗಿ ನರಹರಿಯು ಮುಗುಳು ನಗೆ ನಕ್ಕ.

ಇದನ್ನು ಕಂಡು ಶಾಂತಳಾದ ಕುಸುಮಾ ಮೆಲ್ಲಗೆ ತುಸು ದೂರ ಸರಿದು, "ಇಂಥ ವಿಚಾರಗಳೇಕೆ, ನರಹರಿ?" ಎಂದು ಮೃದುವಾಗಿ ಕೇಳಿದಳು.

"ಏನೂ ಇಲ್ಲ. ಶೀನು ಒಮ್ಮೆ ನನ್ನ ಕನಸಿನಲ್ಲಿ ಬಂದಿದ್ದ. ದೇಸಾಯರು ಅವನಲ್ಲಿ ಹೆಚ್ಚು ಆಸ್ಥೆಯನ್ನು ತೋರಿಸುವಂತೆ ಕಂಡಿತು. ಒಮ್ಮೆ ಅವನು ಕಾಣಿಕೆಯಾಗಿ ಕೊಟ್ಟ ಪುಸ್ತಕ ನಿನ್ನ ಕೈಯ್ಯಲ್ಲಿತ್ತು. ನಾವಿಬ್ಬರೂ ಕೂಡಿ ಬಂದಾಗ ನೀನು ಶೀನೂನನ್ನೇ ಹೆಚ್ಚಾಗಿ ಮಾತನಾಡಿಸಿದೆ...." ಎಂದು ಮಗು ವಿನ ಹಾಗೆ ನರಹರಿಯು ತನ್ನ ಕರುಣ ಕಥೆಯನ್ನು ಇದ್ದ ಹಾಗೆ ಹೇಳಿದ.

ಕುಸುಮಾ ನಕ್ಕಳು. "ಇದಕ್ಕೋ ನೀನು ಹೀಗೆ ತಿಳಿದುಕೊಂಡಿದ್ದು? ಶೀನು ತಾನಾಗಿಯೇ ಒಂದು ಪುಸ್ತಕ ತಂದುಕೊಟ್ಟ. ಅದನ್ನು ಒಲ್ಲೆನೆನ್ನು ವದು ಹೇಗೆ? ನಿನ್ನ ಸ್ನೇಹಿತನೆಂದು ಮಾತ್ರ ಶೀನೂನಿಗೆ ಈ ಮನೆಯಲ್ಲಿ

ಸ್ವಾಗತವಿದೆ. ಮೊಗ್ಗಾವಿಯಿಂದ ಅವನು ಬಂದಾಗ ಮನೆಯ ಸುದ್ದಿ ಕೇಳಿದೆ. ಅಪ್ಪನೂ ಆಗೀಗ ಮಾತಾಡಿಸುತ್ತಾನೆ. ಇದಕ್ಕೆಲ್ಲ ನಿನ್ನಂಥ ಕವಿ ಹೀಗೆ ತಿಳಿದುಕೊಳ್ಳಬೇಕೆ, ನರಹರಿ?"

"ಕವಿಯೆಂದೇ ಹೀಗಾಗಿರಬೇಕು!" ಎಂದು ನರಹರಿ ನಕ್ಕ. ಅವನಿಗೆ ಅಂಟಿಕೊಂಡಿದ್ದ ಪಿಶಾಚಿಯು ಈಗ ವಿಮೋಚನೆಯನ್ನು ಪಡೆದಿತ್ತು. ಇನ್ನು ಒಮ್ಮೆ ಶೀನೂನೊಡನೆ ಮಾತನಾಡಬಹುದೆಂದು ನರಹರಿಯು ಮನಸ್ಸಿನಲ್ಲಿಯೇ ಅಂದುಕೊಂಡ.

ಕುಸುಮಾ ಮಾಡಿ ತಂದುಕೊಟ್ಟಿದ್ದ ಚಹವು ಅವನಿಗೆ ಅದೆಂದಿಗೂ ಇಷ್ಟು ರುಚಿಯೆನಿಸಿರಲಿಲ್ಲ ಚಹ ಕುಡಿಯುತ್ತ ನರಹರಿಯು ಮತ್ತೆ ಮೊದಲಿನಂತೆ ಮಾತಿಗೆ ಪ್ರಾರಂಭ ಮಾಡಿದ. "ಇಲ್ಲಿ ನೋಡು, ಕುಸುಮಾ! ಈಗ ನೀನು ಒಂದು ಕೆಲಸ ಮಾಡಬೇಕು." ಎಂದ ನರಹರಿ.

"ಅದೇನು? ನಾನೇನು ಕೆಲಸ ಮಾಡಬಲ್ಲೆ!" ಎಂದು ಕುಸುಮಾ ನಗೆಯಾಡಿದಳು.

"ಒಬ್ಬ ಕಾಲೇಜು ವಿದ್ಯಾರ್ಥಿನಿಯನ್ನು ನೀನು ಭೆಟ್ಟಿಯಾಗಬೇಕು."

"ಅಂಜಿಕೆ ಬರುತ್ತದೆ, ನರಹರಿ! ಸಾಲೆಯ ಹುಡಿಗೆಯಾದ ನನಗೇಕೆ ಈ ಮಾನ? ನೀನು ಹೇಳುವ ಈ ವಿದ್ಯಾರ್ಥಿನಿಯಾದರೂ ಯಾರು?"

"ಮಿಸ್. ಪಂಡಿತ್ ಎಂದು ಜ್ಯೂನಿಯರ್ ಬಿ. ಏ ದಲ್ಲಿ ,ಇದ್ದಾಳೆ. ಕೆಲವು ದಿನಗಳ ಹಿಂದೆ ಮೋಜಾಯಿತು." ಎಂದು ನರಹರಿಯು ನಗೆಮೊಗದಿಂದ ಹೇಳಿದ.

"ಏನು ಮೋಜು? ನನಗೆ ಒಬ್ಬರು ಬರಿ ಒಂದು ಪುಸ್ತಕವನ್ನು ಕಾಣಿಕೆಯಾಗಿ ಕೊಟ್ಟರೆ ನೀನು ಕುದಿಯುತ್ತಿ! ನೀನು ಮಾತನಾಡುವದನ್ನು ಕೇಳಿದರೆ ಯಾರಿಗೂ ಸಂಶಯ ಬರಬಹುದು" ಎಂದು ಕುಸುಮಾ ನಕ್ಕಳು.

"ಹಾಗಲ್ಲ, ಕುಸುಮಾ! ಪಂಡಿತ ಕೇಶವರಾಯರ ಹಾಗು ಅವರ ಮಗಳ ವಿಷಯವನ್ನು ಈ ಮೊದಲೇ ನಿನಗೆ ಹೇಳಿದ್ದೇನೆ. ಆದರೆ ಕುಮಾರಿ ಪಂಡಿತಳು ಹೀಗೆ ಪ್ರೀತಿಪರವಶಳಾಗಬಹುದೆಂದು ನಾನು ನಂಬಿರಲಿಲ್ಲ."

"ಹೇಗೆ? ಏನು? ಈ ಒಡಪಿನ ಛಂದವೇಕೆ? ಸ್ಪಷ್ಟವಾಗಿ ಹೇಳು." ಎಂದು ಕುಸುಮಾ ತುಸು ಗಾಬರಿಯಾಗಿಯೇ ಕೇಳಿದಳು.

"ಆಕೆ ನನ್ನನ್ನು ಪ್ರೀತಿಸಬಹುದೆಂದು! ನನ್ನನ್ನು ಕರೆದು ಈ ಮಾತನ್ನು ಕುಮಾರಿಯು ಹೇಳಿದಳು. ಇನ್ನೊಂದು ಅಧಿದೈವತಕ್ಕಾಗಿ ನನ್ನ ಜೀವನವು ಮೀಸಲೆಂದು ಆಕೆಗೆ ನಾನು ಹೇಳಿದೆ. ಆದರೆ ಆ ಅಧಿದೈವ ತಕ್ಕೆ ಈ ಜೀವನವು ಬೇಕಿದೆಯೋ ಇಲ್ಲವೋ ಎಂದೂ ಉದ್ಗಾರ ತೆಗೆದೆ." ಕೊನೆಯ ವಾಕ್ಯವನ್ನು ನುಡಿಯುವಾಗ ನರಹರಿಯ ಕಂಠವು ಗದ್ಗದಿತ ವಾಯಿತು. ಅವನು ಹಾಯ್ದು ಹೋದ ಯಾತನೆಯ ಕಂಪವು ಅಲ್ಲಿ ದನಿಗೆ ತಗಲಿತು.

"ಈಗ ಏನೆನಿಸುತ್ತದೆ?" ಎಂದು ಕುಸುಮಾ ಕೇಳಿದಳು.

"ನನ್ನ ಕಾಣಿಕೆ ಸ್ವೀಕೃತವಿದೆಯೆಂದು." ನರಹರಿ ನುಡಿದ.

"ಹಾಗಾದರೆ ಈಗ ಹೋಗಿ ಮಿಸ್. ಪಂಡಿತಳಿಗೆ ಈ ಮಾತನ್ನು ಹೇಳಿ ಬಾ. ಇಲ್ಲದಿದ್ದರೆ ಇನ್ನೊಂದು ಅನರ್ಥವಾದೀತು." ಎಂದು ಕುಸುಮಾ ಅರ್ಧ ವಿನೋದದ, ಅರ್ಧ ಗಾಂಭೀರ್ಯದ ದನಿಯಲ್ಲಿ ಮಾತನಾಡಿದಳು.

"ನಾವಿಬ್ಬರೂ ಕೂಡಿಯೇ ಆಕೆಗೆ ಹೇಳೋಣ." ಎಂದು ನರ ಹರಿಯು ನಕ್ಕ.

ಈ ವೇಳೆಗೆ ಸರಿಯಾಗಿ ದೇಸಾಯರು ತಿರುಗಿ ಮನೆಗೆ ಬಂದರು ಅವರು ಬಂದಾಗ ರಂಗಾಸಾನಿಯು ಆಗಲೆ ತನ್ನ ಮನೆಯಲ್ಲಿ ಸಂಜೆಯ ಅಡಿ ಗೆಗೆ ಇಟ್ಟಿದ್ದಳು. ದೇಸಾಯರು ವಸತಿಗೃಹಕ್ಕೆ ಹೋದಾಗ ಅಲ್ಲಿ ನರಹರಿಯಾ ಗಲಿ ಶೀನುವಾಗಲಿ ಇರಲಿಲ್ಲ. ಅತ್ತಿತ್ತ ನೋಡಿ ದೇಸಾಯರು ಮತ್ತೆ ಮರಳಿ ದ್ದರು. ಆದರೆ ಬರುವಷ್ಟರಲ್ಲಿ ಕುಲುಕುಲು ನಗುತ್ತ ಮಾತನಾಡುತ್ತ ಕುಳಿತ ನರಹರಿ–ಕುಸುಮೆಯರನ್ನು ನೋಡಿ ಅವರ ಮುಖವು ಪ್ರಸನ್ನವಾಯಿತು. ದೇಸಾಯರೂ ಅವರ ಸಂಭಾಷಣೆಯಲ್ಲಿ ಭಾಗವಹಿಸಿದರು. ನರಹರಿಯನ್ನು ಕವಿದ ಪಿಶಾಚಿಯ ಅರಿವೂ ಕುಸುಮಾನಿಗೆ ಅಲ್ಪಾವಧಿಯಲ್ಲಿ ಆದ ಕರುಳಿನ ನೋವೂ ಅವರನ್ನು ಗಾಸಿಗೊಳಿಸಲಿಲ್ಲ. ಅವರಿಗೆ ಆ ನೋವು ಬೇಡವೆಂದೇ ನರ ಹರಿ-ಕುಸುಮೆಯರು ತಮ್ಮ ತಮ್ಮ ವಿಷಯಕ್ಕೆ ಅವರೆದುರಿಗೆ ಒಂದು ಚಕಾರ ಶಬ್ದವನ್ನು ನುಡಿಯಲಿಲ್ಲ.

---

*

## ಪ್ರಕರಣ ೬೩

# ಪ್ರಮೀಳೆಯ ಅಂತರಾಳ

ಜ್ಯೂನಿಯರ್ ಬಿ. ಎ. ದ ಅಭ್ಯಾಸ ಸುರುವು ಮಾಡಿದಂದಿನಿಂದ ಪಾಟಣ ಕರನು ಒಂದು ನಿತ್ಯಕ್ರಮವನ್ನು ಹಾಕಿಕೊಂಡಿದ್ದ. ಮುಂಜಾನೆ ಐದು ಗಂಟೆಗೆ ಎದ್ದು ಏಳುಗಂಟೆಯ ವರೆಗೆ ಓದುವದು; ಆಮೇಲೆ ತಿರುಗಾಡಿ ಬರುವದು; ಮರಳಿ ಒಂದೆರಡು ಗಂಟೆ ಓದಿ ಊಟಮಾಡಿ ಕಾಲೇಜಿಗೆ ಹೋಗುವದು; ಇದು ಅವನ ದಿನದ ಪರಿಪಾಠವಾಗಿತ್ತು. ಒಮ್ಮೊಮ್ಮೆ ಫರ್ಗುಸನ್ ಬೆಟ್ಟದ ಕಡೆಗೆ ಇಲ್ಲವೆ ಗಣೇಶಖಿಂಡಿಯ ರಸ್ತೆಯ ಕಡೆಗೆ ಹೋದಾಗ ಅವನಿಗೆ ನರ ಹರಿಯ ಭೆಟ್ಟಿಯಾಗುತ್ತಿತ್ತು. ಆದರೆ ಇತ್ತೀಚೆಗೆ ನರಹರಿಯು ಮುಂಜಾನೆಯ ತಿರುಗಾಟವನ್ನು ಬಿಟ್ಟುಬಿಟ್ಟಿದ್ದ. ಹೀಗಾಗಿ ಪಾಟಣಕರನು ಒಬ್ಬನೇ ಹೋಗಿ ಬರುತ್ತಿದ್ದ.

ಬರಬರುತ್ತ ಗಣೇಶಖಿಂಡಿ ರಸ್ತೆಯ ಕಡೆಗೆ ಹೋಗುವದೇ ಪಾಟಣ ಕರನ ರೂಢಿಯಾಯಿತು. ಅಲ್ಲಿ ಒಂದು ಆಕರ್ಷಣವಿತ್ತು. ಕುಮಾರಿ ಪಂಡಿ ತಳು ಅದೇ ರಸ್ತೆಯ ಮೇಲೆ ದಿನಾಲು ಮುಂಜಾನೆ ಕುದುರೆ ಸವಾರಿ ಮಾಡುವ ಪರಿಪಾಠವನ್ನಿಟ್ಟುಕೊಂಡಿದ್ದಳು. ನಿತ್ಯ ಹೋಗುವಾಗ ಇಲ್ಲವೆ ಬರುವಾಗ ಪಾಟಣಕರನು ಆಕೆಯನ್ನು ನೋಡುತ್ತಿದ್ದ. ಒಂದು ದಿನ ಅಕಸ್ಮಾತ್ತಾಗಿ ಕುಮಾರಿ ಪಂಡಿತಳು ಕಾಣದೆ ಹೋದರೆ ಅಂದು ಇಡಿ ದಿನವೆಲ್ಲ ಅವನ. ಮನಸ್ಸು ಭಣಗುಡುತ್ತಿತ್ತು. ಹೀಗಾಗಿ ಒಂದು ನೂತನ ಶಕ್ತಿಯು ಅವನ ಜೀವನವನ್ನು ಪ್ರವೇಶಿಸಿ ತನ್ನ ಪ್ರಭುತ್ವವನ್ನು ಅಲ್ಲಿ ಸ್ಥಾಪಿಸಿತ್ತು.

ಮೊದಲಿಗೊಮ್ಮೆ ನರಹರಿ-ಪಾಟಣಕರರು ಕೂಡಿ ಆ ರಸ್ತೆಯಿಂದ ನಡೆದಾಗ ಕುದುರೆ ಸವಾರಿ ಮಾಡಿ ಸಾವಕಾಶವಾಗಿ ಕುಮಾರಿ ಪಂಡಿತಳು ಮರಳುತ್ತಿದ್ದಳು ನರಹರಿಯನ್ನು ನೋಡಿದೊಡನೆ ಕುದುರೆ ನಿಲ್ಲಿಸಿ ಕೆಳ ಗಿಳಿದು, ನಗುತ್ತ: "ಏನು, ಮುನವಳ್ಳಿ! ದಿನಾಲು ಈ ರಸ್ತೆಯಿಂದ ನೀವು ತಿರುಗಾಡಲು ಬರುತ್ತೀರಾ?" ಎಂದು ಕೇಳಿದಳು.

"ಬರುತ್ತೇನೆ, ಆಗೀಗ. ಆದರೆ ನಮ್ಮ-ನಿಮ್ಮ ವೇಗವೇ ಬೇರೆ ನಿಮ್ಮದು ವಾಯುಗತಿ. ನನ್ನದು ಮಂದಗತಿ!" ಎಂದು ನರಹರಿಯು ನಗುತ್ತ ಹೇಳಿದ.

ಕುಮಾರಿಯೂ ನಕ್ಕಳು. ನರಹರಿಯು ಬದಿಗಿದ್ದ ಪಾಟಣಕರನನ್ನು ನೋಡಿ, ಅವಳು ಪರಿಚಯದ ನಗೆ ನಕ್ಕಳು. ಆ ನಗೆಯು ಈಗ ಪಾಟಣಕರನ ಸರ್ವಸ್ವವಾಯಿತು.

"ನಿಮ್ಮ ವೇಗವನ್ನು ನೋಡಿ ನನಗೆ ಅಂಜಿಕೆಯುಂಟಾಗುತ್ತದೆ ಆದರೆ ಅದಕ್ಕೆ ತುಂಬಾ ಹೆಚ್ಚಿದವರು ನನ್ನ ಸ್ನೇಹಿತರಾದ ಈ ಪಾಟಣಕರರು ನೋಡಿರಿ! ಕುದುರೆ ಎಡವೀತಲ್ಲ ಎಂದು ನನಗೆ ಭೀತಿ ಆದರೆ ಝಾನ್ಸಿ ರಾಣಿಯ ಸಹೋದರಿಯರು ನೀವೆಂದು ಇವರಿಗೆ ತುಂಬಾ ಆದರ!" ಎಂದು ನರಹರಿಯು ವಿನೋದದಿಂದ ನುಡಿದ.

"ಹೌದೇ, ಮಿಸ್ಟರ್ ಪಾಟಣಕರ್! ಆದರೆ ಝಾನ್ಸಿ ರಾಣಿಯೆಲ್ಲಿ, ನಾನೆಲ್ಲಿ! ಕುದುರೆ ಏರಲು ಬರದವರಿಗೆ ಹೊಳೆಯುವ ಭೀತಿ–ಆದರಗಳು ಇವು!" ಎಂದು ಕುಮಾರಿಯು ನಕ್ಕಳು. ಬಳಿಕ "ನೀವಿಬ್ಬರೂ ಐ. ಸಿ. ಎಸ್.ಗೆ ಹೋಗುವವರು. ಕುದುರೆ ಏರುವದನ್ನು ಇನ್ನು ಕಲಿಯುವದು ಯಾವಾಗ?" ಎಂದು ಪ್ರಶ್ನಿಸಿದಳು.

ಪಾಟಣಕರನ ಮೋರೆಯು ತುಸು ಕೆಂಪಾಯಿತು. ಮಾತನಾಡಲು ಅವನಿಗೆ ಸಂಕೋಚವೆನಿಸಿತು. ಅವನು ಸುಮ್ಮನಿದ್ದ.

ನರಹರಿ ಹೇಳಿದ: "ನಾನು ಐ. ಸಿ. ಎಸ್.ಗೆ ಹೋಗುವದಿಲ್ಲವೆಂದು ಹೇಳಿದ್ದೇನಲ್ಲ, ಮಿಸ್. ಪಂಡಿತ್! ಪಾಟಣಕರರು ಮಾತ್ರ ಬಿ. ಏ. ಆದೊಡನೆ ಹೋಗುತ್ತಾರೆ. ಅವರಿಗೆ ಈ ವಿದ್ಯೆಯು ಅವಶ್ಯವಾಗಿ ಬರಬೇಕು" ಎಂದು ಅವನು ಮಾತನ್ನು ತೀರಿಸಿದ.

ಪ್ರತ್ಯುತ್ತರವಾಗಿ ಪಾಟಣಕರನನ್ನು ನೋಡಿ ಮುಗುಳುನಗೆ ನಕ್ಕು ಕುಮಾರಿಯು ಸುಮ್ಮನಿದ್ದಳು.

ಕಾಲೇಜಿಗೆ ಹೊರಳುವ ರಸ್ತೆ ಬಂದಾಗ ಇಬ್ಬರನ್ನೂ ಬೀಳ್ಕೊಂಡು "ಕುದುರೆಯ ಸವಾರಿ ನಿಮಗೂ ರುಚಿಸುವದು, ಮುನವಳ್ಳಿ! ನೀವು ತೀರ ಅದರಿಂದ ಮನಸ್ಸು ತೆಗೆದು ಹಾಕಬೇಡಿರಿ!" ಎಂದು ಹೇಳುತ್ತ ಕುದುರೆ ಏರಿ ಕುಮಾರಿಯು ಹೊರಟಿದ್ದಳು

ಪಾಟಣಕರನ ಹೃದಯದಲ್ಲಿ ಆ ಮುಂಜಾವಿನ ನೆನಪು ಆಳವಾಗಿ ನೆಲೆಸಿತ್ತು. ಅದನ್ನು ಅವನು ಎಂದೂ ಮರೆಯುವ ಹಾಗಿರಲಿಲ್ಲ. ಇದಾದ

ಮೇಲೆ ಅನೇಕ ಸಲ ಪಾಟಣಕರನು ಅಶ್ವಾರೋಹಿಯಾದ ಕುಮಾರಿಯನ್ನು ಆ ರಸ್ತೆಯ ಮೇಲೆ ಕಂಡಿದ್ದ. ಒಮ್ಮೊಮ್ಮೆ ಭರದಿಂದ ಕುದುರೆಯನ್ನು ಓಡಿಸುತ್ತ ನಡೆದ ಕುಮಾರಿಯ ಚಿತ್ರವು ಮಾತ್ರ ಅವನ ಕಣ್ಣಿಗೆ ಬೀಳುತ್ತಿತ್ತು. ಕೆಲವು ದಿನ ಕುಮಾರಿಯು ಮರಳಿ ಸಾವಕಾಶವಾಗಿ ಬರುತ್ತಿರುವಾಗ ಪಾಟಣಕರನನ್ನು ಪರಿಚಯಪೂರ್ವಕವಾಗಿ ನೋಡಿ ಗುರುತಿನ ನಗೆ ನಗುತ್ತಿದ್ದಳು. ಆದರೆ ಕೆಳಗಿಳಿಯುತ್ತಿರಲಿಲ್ಲ. ಕೆಳಗಿಳಿಯಲು ನರಹರಿ ಇಲ್ಲವಲ್ಲ?

ನರಹರಿಯೇ ಕುಮಾರಿಯ ಪರಿಚಯಕ್ಕೆ ಕಾರಣವಾಗಿದ್ದ. ನರಹರಿಯ ಪ್ರೇಮವು ಕುಸುಮಾಸಿಗೆ ಮೀಸಲಾಗಿತ್ತು. ಕುಮಾರಿಯ ಮುಖವು ನರಹರಿಯನ್ನು ಕಂಡೊಡನೆ ಅರಳುವದು ಮೇಲೆಯೇ ಕಾಣುತ್ತಿತ್ತು. ಆದರೆ ನರಹರಿಯು ತನ್ನ ಅನುರಾಗವು ಹಿಡಿದ ಬೇರೆ ದಿಕ್ಕನ್ನು ಕುಮಾರಿಗೆ ತಿಳಿಸಬೇಕೆಂದು ಪಾಟಣಕರನಿಗೆ ಎನಿಸಿತು. ನರಹರಿಯೊಡನೆ ಮಾತನಾಡಬೇಕೆಂದು ಅವನು ಮನಸ್ಸಿನಲ್ಲಿಯೇ ಎಣಿಕೆ ಹಾಕಿದ.

ಆದರೆ ಒಂದು ಮಾತು ಮಾತ್ರ ನಿರ್ವಿವಾದವಾಗಿತ್ತು. ಕುಮಾರಿಯಿಲ್ಲದೆ ಪಾಟಣಕರನ ಬಾಳು ಸಫಲವಾಗುವ ಹಾಗಿರಲಿಲ್ಲ ಕುಮಾರಿಯು ಅವನ ಕಣ್ಣಿನ ಗೊಂಬೆಯಾಗಿ ಹೋಗಿದ್ದಳು. ತನಗೇ ತಿಳಿಯದಷ್ಟು ಪಾಟಣಕರನು ಅವಳಲ್ಲಿ ಅನುರಕ್ತನಾಗಿದ್ದ.

ಹೀಗಿರುವಾಗ,—ಈ ತಿರುಗಣಿಯಲ್ಲಿ ಸಿಕ್ಕು ತನ್ನ ಆಕಾಂಕ್ಷೆಗಳೆಲ್ಲ ಎಲ್ಲಿ ಮಣ್ಣುಗೂಡುವವೋ ಎಂದು ಪಾಟಣಕರನಿಗೆ ಭಯವಾಗಿತ್ತು. ತಾನೇನೋ ಒಂದು ಸರ್ವಸಾಧಾರಣ ಮನೆತನದ ಹುಡುಗನೇನೋ ನಿಜ. ಆದರೆ ಬುದ್ಧಿಶಾಲಿಯಾದ ವಿದ್ಯಾರ್ಥಿ, ಕವಿ. ಬಿ. ಏ. ಆದೊಡನೆ ಅವನನ್ನು ಇಂಗ್ಲಂಡಿಗೆ ಕಳಿಸುವ ತಯಾರಿಯನ್ನು ಮೋಡಕರು ಈಗಾಗಲೆ ಸಂಭ್ರಮದಿಂದ ಮಾಡುತ್ತಿದ್ದರು. ಅಲ್ಲಿಗೆ ಹೋಗಿ ತಾನು ಐ. ಸಿ ಎಸ್. ಆಗಿ ಬರುವವ; ಆಗದಿದ್ದರೂ ಯೋಗ್ಯ ಡಿಗ್ರಿಯನ್ನು ಪಡೆದು ಉಚ್ಚತರಹದ ಜೀವನವನ್ನು ಸಾಗಿಸುವವ. ಅಂದಮೇಲೆ ಕುಮಾರಿಯು ತನಗೆ ನಿಲುಕದೆ ಇರಲು ಕಾರಣವೇನು? ಇದರಲ್ಲಿ ಅಸಂಭವನೀಯವೇನು?

ಕುಮಾರಿಯ ಮೇಲಿನ ಅವನ ಪ್ರೀತಿಯು ಒಂದು ಆವೇಶ, ಒಂದು ಉನ್ಮಾದವಾಗಿತ್ತು. ಇದು ಅವನ ಹೃದಯದಲ್ಲಿ ಅಂಕುರಿಸಿದಾಗಲೇ,—ಇದರಿಂದ ತಾನು ಪಾರಾಗುವದು ಸಾಧ್ಯವಿಲ್ಲವೆಂದು ಪಾಟಣಕರನಿಗೆ ಹೊಳೆದಿತ್ತು. ಅದು ಫಲಿಸಿದರೆ,—ಜೀವನವೆಲ್ಲ ಫಲೋನ್ಮುಖವಾಗುವದು; ಇಲ್ಲದಿದ್ದರೆ ಬಂಜರು ನೆಲ. ಆ ಪ್ರೀತಿಯಲ್ಲಿ ಶಾಂತಿಯಿರಲಿಲ್ಲ; ಅಗಾಧವಾದ ತೀಕ್ಷ್ಣತೆಯಿತ್ತು. ಅದರಲ್ಲಿ ಮುಕ್ತಿಯಿರಲಿಲ್ಲ; ಆದರೆ ಜೀವನವನ್ನೇ ಸೂರೆಗೊಂಡ ವಿಲಾಸವಿತ್ತು. ಸನಾತನವೂ ನೂತನವೂ ಆದ ಆತ್ಮಿಕತೆಯು ಅಷ್ಟೊಂದಾಗಿ ಅದರಲ್ಲಿರಲಿಲ್ಲ; ಆದರೆ ಆಧುನಿಕತೆಯ ಮೋಹಕತೆಯು ಅದರಲ್ಲಿ ತುಂಬಿ ತುಳುಕುತ್ತಿತ್ತು.

ಹೀಗಾಗಿ ನರಹರಿ-ಶೀನರು ಒಂದೊಂದು ಸೆಳವಿನಲ್ಲಿ ಸಿಕ್ಕಂತೆ ಪಾಟಣಕರನೂ ಸಿಕ್ಕಿದ್ದ. ಮೂವರು ಗೆಳೆಯರೂ ದಿನಾಲು ಭೆಟ್ಟಿಯಾಗುತ್ತಿದ್ದರು. ಆದರೆ ತಮ್ಮ ತಮ್ಮ ಸಂಕಟಕ್ಕೆ ಒಳಗಿಂದೊಳಗೆ ಬಳಲುವ ಅವರ ಸಂಭಾಷಣೆಯಲ್ಲಿ ಮೊದಲಿನ ಸ್ವಚ್ಛಂದವಿಲಾಸಗಳಿರಲಿಲ್ಲ.

ಒಂದು ದಿನ ಕಾಲೇಜಿನ ಕೆಲಸ ಮುಗಿದು ಲೈಬ್ರರಿಯಿಂದ ನರಹರಿ-ಪಾಟಣಕರರು ಕೂಡಿ ಮರಳುತ್ತಿರುವಾಗ: "ಪಾಟಣಕರ್, ಒಂದು ವಿಷಯದ ಬಗ್ಗೆ ನಿಮ್ಮೊಡನೆ ಮಾತನಾಡಬೇಕಾಗಿದೆ" ಎಂದ ನರಹರಿ.

ಪಾಟಣಕರನ ಹೃದಯವು ಡವಡವಿಸಹತ್ತಿತು. ಒಂದು ಹಿರಿಯಾಸೆಯ ಅಂಕುರವು ಅವನ ಕಣ್ಣಿನಲ್ಲಿ ಮೊಳೆಯಿತು. "ಅದೇನು?" ಎಂದು ಅವನು ಕೇಳಿದ.

"ಒಮ್ಮೆ ನಾನೂ ನೀವೂ ಕೂಡಿ ಕುಮಾರಿ ಪಂಡಿತಳನ್ನು ಭೆಟ್ಟಿಯಾಗಬೇಕು." ಎಂದ ನರಹರಿ.

ಪಾಟಣಕರನಿಗೆ ಪರಮ ಹರ್ಷವಾಯಿತು. ಅವನು ಬಯಸಿದ್ದೇ ಇದು. ಸಂಕೋಚಪಟ್ಟುಕೊಂಡು ನರಹರಿಯೊಡನೆ ಮಾತನಾಡುವದು ಅವನಿಗಾಗಿರಲಿಲ್ಲ. ಆದರೆ ತಾನು ದೈವಶಾಲಿ. ತನ್ನ ದೈವವೇ ಈಗ ನರಹರಿಯ ಮುಖದಲ್ಲಿ ನಿಂತು ನುಡಿಯುತ್ತಿತ್ತು.

"ನಾನು ಎಲ್ಲವನ್ನೂ ನಿಶ್ಚಿತವಾಗಿಸಿ ನಿಮಗೆ ತಿಳಿಸುತ್ತೇನೆ. ನೀವು ಸಿದ್ಧವಾಗಿರಿ" ಎಂದ ನರಹರಿ.

"ಆಗಬಹುದು" ಎಂದು ಪಾಟಣಕರನು ಗೆಳೆಯನನ್ನು ಕೃತಜ್ಞತಾ ಪೂರ್ವಕವಾಗಿ ನೋಡಿದ.

ಬಳಿಕ ನರಹರಿಯು ಮರುದಿನ ಕಾಲೇಜಿನಿಂದ ತಿರುಗುವಾಗ ಕುಮಾರಿ ಪಂಡಿತಳಿಗಾಗಿ ಕಾದು ನಿಂತು ಅವಳಿಗೆ ಭೆಟ್ಟಿಯಾದ

"ನಾನು ಹೇಳಿದ ವಿಷಯ ವಿಚಾರ ಮಾಡಿದ್ದೀರಾ, ಮುನವಳ್ಳಿ?" ಎಂದು ಕುಮಾರಿಯು ಉತ್ಸುಕತೆಯಿಂದ ಕೇಳಿದಳು.

"ಮಾಡಿದ್ದೇನೆ. ನಾನು ಮಾಡಿದ ನಿಶ್ಚಯ ಅಲುಗಲಾರದೆಂದು ಆಗಲೇ ನಿಮಗೆ ತಿಳಿಸಿದ್ದೇನೆ" ಎಂದು ನರಹರಿಯು ನಿರ್ವಿಕಾರದ ದನಿಯಲ್ಲಿ ಹೇಳಿದ.

ಕುಮಾರಿಯ ಮುಖವು ನಿಸ್ತೇಜವಾಯಿತು. ಮುಂದೆ ಒಂದು ನಿಮಿಷದ ಮೇಲೆ: "ನೀವು ಅರ್ಪಿಸಲಿರುವ ಕಾಣಿಕೆಯ ಭವಿತವ್ಯವೇನು? ಅದು ಸ್ವೀಕೃತವೋ ನಿರಾಕೃತವೊ?" ಎಂದು ಆಕೆ ಕೇಳಿದಳು ಇದೊಂದೇ ಈಗ ಅವಳ ದೂರದ ಆಸೆಯಾಗಿತ್ತು.

"ನಾನೇ ತಪ್ಪು ತಿಳಿದಿದ್ದೆ, ಮಿಸ್. ಪಂಡಿತ್! ಅದು ಎಂದೋ ಸ್ವೀಕೃತವಾಗಿದೆ. ನಾಳೆ ನೀವು ನನ್ನ ಜೊತೆಗೆ ಬರಬೇಕು. ನಿಮಗೆ ಕುಸುಮಾನ ಭೆಟ್ಟಿ ಮಾಡಿಸುತ್ತೇನೆ." ಎಂದ ನರಹರಿ.

"ಆಗಬಹುದು ಹೆಸರೇನು? ಕುಸುಮಾ ಎಂದೊ? ಒಳ್ಳೆಯ ಹೆಸರು ಆದರೆ 'ಪ್ರಮಿಲೆ'ಯೆಂಬ ಹೆಸರಿನಲ್ಲಿ ಅದಕ್ಕೇನು ಕಡಿಮೆ ಯಿದೆ?" ಎಂದು ಕುಮಾರಿಯು ವಿಷಾದದಿಂದ ನಕ್ಕಳು.

ನರಹರಿಯು ಸುಮ್ಮನಿದ್ದ.

ಮರುದಿನ ಕಾಲೇಜು ಬಿಟ್ಟೊಡನೆ ನರಹರಿ–ಮಿಸ್. ಪಂಡಿತರು ಕೂಡಿ ಸದಾಶಿವಪೇಟೆಗೆ ನಡೆದರು ನರಹರಿಯು ಮೊದಲೇ ಕುಸುಮಾ ನೊಡನೆ ಮಾತನಾಡಿ ದೇಸಾಯರು ಲೈಬ್ರರಿಗೆ ಓದಲು ಹೋಗುವ ದಿನವನ್ನು ಆರಿಸಿದ್ದ. ಅವರು ಬರುವಷ್ಟರಲ್ಲಿ ಕುಸುಮಾ ಎಲ್ಲವನ್ನೂ ತಯಾರಿಸಿ ದಾರಿ ಕಾಯುತ್ತಿದ್ದಳು. ತಾನು ಓದುವ ಟೇಬಲನ್ನು ಮುಂದಿನ ಕೋಣೆ ಯಲ್ಲಿ ತಂದಿಟ್ಟು ಅದರ ಮೇಲೆ ಅಂದವಾದ ಅರಿವೆಯೊಂದನ್ನು ಹಾಕಿ ತಿನಿಸು ಗಳನ್ನೂ ಹಣ್ಣುಗಳನ್ನೂ ಬಗೆಬಗೆಯ ಪ್ಲೇಟುಗಳಲ್ಲಿ ಕುಸುಮಾ ಇಟ್ಟಿದ್ದಳು.

ಕಪ್ಪುಗಳನ್ನು ಓರಣವಾಗಿ ಇರಿಸಿದ್ದಳು. ಕೂಡಲು ಇಟ್ಟಿದ್ದ ಮೂರು ಕುರ್ಚಿಗಳಲ್ಲಿ ಪ್ರತಿಯೊಂದರ ಮೇಲೂ ಒಂದೊಂದು ಗಂಜಿಯ ಟಾಃವೆಲ್ ಇತ್ತು. ನರಹರಿ--ಮಿಸ್. ಪಂಡಿತರು ಒಂದೊಡನೆ ಎದ್ದು ಹೋಗಿ ಮುಗುಳು ನಗೆಯಿಂದ ಕುಸುಮಾ ಅವರನ್ನು ಸ್ವಾಗತಿಸಿದಳು. ಎಳೆತನದ ಕಳೆ ತುಂಬಿ ತುಳುಕುತ್ತಿದ್ದ ಆ ಮುಖ, ಆ ಮೃದು ಮಧುರ ಮಂದಹಾಸ, ಆ ತೆಳ್ಳನ್ನ ಆದರೆ ಸದೃಢವಾದ ಮೈಕಟ್ಟು, ಆ ನಿಲುವು, ಆ ಮುಗ್ಧ ಮನೋಹರತೆ,— ಇವನ್ನೆಲ್ಲ ನೋಡಿ ಕುಮಾರಿಯ ಮನಸ್ಸಿನಲ್ಲಿ ಅಲ್ಲಿಲ್ಲಿ ಇನ್ನೂ ಸುಳಿಯುತ್ತಿರಬಹುದಾದ ದೂರದಾಸೆಯು ಕಮರಿಹೋಯಿತು. ಅವಳ ಹೃದಯದಲ್ಲಿ ಕಸಿವಿಸಿಯಾಯಿತು. ಕುಸುಮಾನ ಸ್ವಾಗತಕ್ಕೆ ಪ್ರತ್ಯುತ್ತರವಾಗಿ ಕುಮಾರಿಯು: "ನಮಸ್ಕಾರ. ಎಲ್ಲಿ, ನಿಮ್ಮ ತಂದೆಯವರು ಕಾಣುವದಿಲ್ಲ? ಮನೆಯಲಿಲ್ಲವೋ?" ಎಂದು ಆಕೆಯನ್ನು ತೀಕ್ಷ್ಣವಾಗಿ ನೋಡುತ್ತ ಪ್ರಶ್ನಿಸಿದಳು.

"ಬನ್ನಿ, ಕುಳಿತುಕೊಳ್ಳಿ. ತಂದೆಯವರಿಲ್ಲ. ಲೈಬ್ರರಿಗೆ ಹೋಗಿದ್ದಾರೆ" ಎಂದು ಕುಸುಮಾ ನಸುನಗುತ್ತ ಉತ್ತರ ಕೊಟ್ಟಳು.

ಕುಮಾರಿಯು ಕುಳಿತುಕೊಂಡಳು. ಮಾತು ಇಂಗ್ಲಿಷಿನಲ್ಲಿಯೇ ನಡೆಯಿತು. ಕುಮಾರಿಯು ಕುಸುಮಾನನ್ನು ಮಿಕಿಮಿಕಿ ನೋಡುತ್ತಿದ್ದಳು. ಈ ಹಳ್ಳಿಯ ಹುಡಿಗೆಗೆ ಈ ಸಹಜರಮ್ಯತೆಯೆಲ್ಲ ಎಲ್ಲಿಂದ ಬರಬೇಕು? ಇದೊಂದು ಅವಳಿಗೆ ಗೂಢವಾಗಿ ತೋರಿತು.

ತನ್ನ ಮಾತಿನ ಸತ್ಯತೆಯ ಬಗ್ಗೆ ನಿಶ್ಚಿಂತನಾದವನಂತೆ ಕುಳಿತುಕೊಂಡು ನರಹರಿಯು ಸುಮ್ಮನೆ ಎಲ್ಲವನ್ನೂ ನಿರೀಕ್ಷಿಸುತ್ತಿದ್ದ.

ಫಲಾಹಾರಕ್ಕೆ ಪ್ರಾರಂಭವಾದ ಮೇಲೆ ಕುಸುಮಾ ಒಳಗೆ ಹೋಗಿ ಚಹದ ಕಿಟ್ಟಲಿಯನ್ನು ತಂದಳು. ಸಕ್ಕರೆ-ಹಾಲು ಟೇಬಲಿನ ಮೇಲೆಯೇ ಇತ್ತು. ಇಬ್ಬರಿಗೂ ಚಹ ಹಾಕಿ ಕುಸುಮಾ ತಾನೂ ತೆಗೆದುಕೊಂಡಳು.

ಕುಮಾರಿ ಪಂಡಿತಳ ವಾಚಾಳಿತನವು ಅದೆಲ್ಲಿಯೋ ಮಾಯವಾಗಿ ಹೋಗಿತ್ತು. ಆಗೊಮ್ಮೆ ಈಗೊಮ್ಮೆ ಅವಳು ಒಂದೊಂದು ಪ್ರಶ್ನೆ ಮಾಡುತ್ತಿದ್ದಳು. "ನಿಮಗೆ ಮರಾಠಿಯು ಬರುತ್ತಿದೆಯೇ?" ಎಂದು ಕುಮಾರಿಯು ಕುಸುಮಾನನ್ನು ಕೇಳಿದಳು.

"ಇಲ್ಲಿಗೆ ಬಂದ ಮೇಲೆ ಸ್ವಲ್ಪ ಕಲಿತಿದ್ದೇನೆ. ಇನ್ನೂ ಮಾತನಾಡುವ ಧೈರ್ಯವಿಲ್ಲ" ಎಂದು ಕುಸುಮಾ ನಕ್ಕಳು.

"ಮೇಟ್ರಿಕ್ ಆದ ಮೇಲೆ ಮುಂದೆ ಕಾಲೇಜಿಗೆ ಹೋಗುವ ವಿಚಾರ ಮಾಡಿದ್ದೀರಾ?" ಎಂದು ಕುಮಾರಿಯು ಕೇಳಿದಳು.

"ನೋಡಬೇಕು. ಕಲಿಯುವ ಮನಸ್ಸಿದೆ. ನಾನು ಕಲಿಯುವದು ಕಲಿಸುವವರ ಮೇಲೆ ಅವಲಂಬಿಸಿದೆ" ಎಂದು ಕುಸುಮಾ ನರಹರಿಯನ್ನು ಅರಳಿದ ಕಂಗಳಿಂದ ನೋಡಿ ಎಳೆನಗೆ ಬೀರಿದಳು.

ನರಹರಿಯು ಸುಮ್ಮನೆ ಅವಳನ್ನು ನೋಡಿ ನಕ್ಕ. ಅವನು ಬೇರೊಂದು ವಿಚಾರಲಹರಿಯಲ್ಲಿ ತೇಲುತ್ತಿದ್ದ. ಕುಸುಮಾ ಒಂದು ಸೂಜಿಮಲ್ಲಿಗೆ ಹೂ; ಅವಳ ಬದಿ ಕುಳಿತ ಕುಮಾರಿ ಸೂರ್ಯಪಾನದ ಹೂ, ಇಲ್ಲವೆ ಚಂಪಕಕುಸುಮ. ತಾನು ಮಲ್ಲಿಕಾಲತೆಯ ಭಕ್ತ. ಎಂದೆಂಗೂ ಮಲ್ಲಿಗೆಯ ಮಂಟಪವೇ ತನಗೆ ಅನುಭವಮಂಟಪವಾಗಿತ್ತು. ಬೇರೆ ತೇಜೋಲೋಕಗಳ ಕಂಪನ್ನೆಲ್ಲ ಬೀರುವ ಮುಗಿಲಮಲ್ಲಿಗೆ ಕುಸುಮಾ; ಇಲ್ಲಿಯ ನೆಲದ ಕಂಪನ್ನೆಲ್ಲ ಹೀರಿಕೊಂಡು ಅರಳಿದ ಸಂಪಿಗೆ,—ಕುಮಾರಿ. ಅವನಿಗೆ ಈಗ ನಿಚ್ಚಳವಾಗಿ ಹೊಳೆಯಿತು,-ತಾನು ಕುಸುಮಾನ ಭಕ್ತ ಏಕಾದೆನೆಂದು

ತಾನು ನಿಂತ ಕ್ಷಣದಲ್ಲಿಯೇ ನಿಂತು ಯಾವ ಲೋಕದಲ್ಲಿ ಕುಮಾರಿಯು ನರಹರಿಯನ್ನು ಕಂಡಿದ್ದಳೋ ಆ ಲೋಕದಲ್ಲಿಯೇ ಈ ಕುಸುಮಾ ವಿಹರಿಸುತ್ತಿದ್ದಳು. ಇವಳಿಗೂ ತನಗೂ ಯಾವ ಸಾಮ್ಯವೂ ಇಲ್ಲವೆಂದು ಕುಮಾರಿಗೆನಿಸಿತು. ನಾಲ್ಕು ಉಪಚಾರದ ಮಾತುಗಳನ್ನುಳಿದು ಆಕೆ ಹೆಚ್ಚಿಗೆ ಮಾತಾಡಲಿಲ್ಲ. ಚಹವಾದ ಮೇಲೆ ತುಸು ಹೊತ್ತು ಕುಳಿತು, "ಇನ್ನು ನಾನು ಹೋಗಿಬರುತ್ತೇನೆ, ಮಿಸ್. ದೇಸಾಯಿ! ನಿಮ್ಮ ಉಪಕಾರ ಬಹಳವಾಯಿತು. ನನ್ನ ಕೋಣೆಗೆ ಯಾವಾಗಲಾದರೂ ಬನ್ನಿ. ಮಿಸ್ಟರ್ ಮುನವಳ್ಳಿ, ನೀವೂ ಏಳಬೇಡಿರಿ ಕುಳಿತುಕೊಳ್ಳಿ. ನಾನು ಹೋಗುತ್ತೇನೆ. ಹೊತ್ತಾಯಿತು" ಎಂದು ಕುಮಾರಿಯು ಎದ್ದಳು.

"ಮತ್ತೆ ಯಾವಾಗಲಾದರೂ ಬನ್ನಿ." ಎಂದು ವಿನಯದಿಂದ ನಗುತ್ತ ಕುಸುಮಾ ಒಳಗೆ ಹೋಗಿ ಕುಂಕುಮ ತಂದು ಹಚ್ಚಿದಳು. ಕುಮಾರಿಯನ್ನು ಗೇಟಿನ ತನಕ ಕಳಿಸಲು ನರಹರಿ ಹೋದ. ಹೋದಾಗ "ಮಿಸ್

ಪಂಡಿತ್, ನನ್ನಿಂದ ಏನಾದರೂ ತಪ್ಪಾಗಿದ್ದರೆ ಕ್ಷಮಿಸಿ. ಯಾವ ತಪ್ಪು ತಿಳುವಳಿಕೆ ಬೆಳೆಯುವದು ಬೇಡವೆಂದೂ ನನ್ನ ಹೇಳಿಕೆಯನ್ನು ಮನಗಾಣಿಸಲೆಂದೂ ನಿಮ್ಮನ್ನು ಇಲ್ಲಿಗೆ ಕರೆತಂದೆ" ಎಂದು ಅವನು ಮೆಲ್ಲಗೆ ಹೇಳಿದ.

"ಅದರಲ್ಲಿ ತಪ್ಪೇನಿದೆ, ಮಿಸ್ಟರ್ ಮುನವಳ್ಳಿ? ಏನೂ ಅಡ್ಡಿ ಇಲ್ಲ. ನೀವು ಇಲ್ಲೇ ನಿಲ್ಲಿರಿ ನಾನು ಹೋಗುತ್ತೇನೆ" ಎಂದು ಕುಮಾರಿಯು ಹೊರಡಲನುವಾದಳು.

"ಆ ಇನ್ನೊಂದು ವಿಷಯದ ಬಗ್ಗೆ ನಿಮ್ಮ ವಿಚಾರ?" ಎಂದು ಕೇಳಿದ ನರಹರಿ.

"ಯಾವುದು?"

"ನಿಮಗೆ ಅರ್ಪಿಸಲು ಎತ್ತಿದ ಕಾಣಿಕೆಯದು" ಎಂದು ತುಸು ಮುದುಡಿಕೊಂಡೇ ನರಹರಿ ಹೇಳಿದ ಕುಮಾರಿಯ ಈಗಿನ ಭಾವನಾಸ್ಥಿತಿಯಲ್ಲಿ ಅವಳೊಡನೆ ಮೊದಲಿನಂತೆ ಮಾತನಾಡಲು ಅವನಿಗೆ ತುಸು ಭೀತಿಯೆನಿಸುತ್ತಿತ್ತು.

"ಅದನ್ನು ನೋಡೋಣ ಈಗೇನು ಅವಸರ? ಇಲ್ಲಿಯೇ ನಿಲ್ಲಿರಿ ನೀವು ನನ್ನ ಸಲುವಾಗಿ ಬಹಳ ತೊಂದರೆಯಾದಂತಾಯಿತು ನಿಮಗೆ." ಎಂದು ನರಹರಿಯನ್ನು ಬೀಳ್ಕೊಂಡು ಕುಮಾರಿಯು ನಡೆದಳು.

ಹೊರಗೆ ಉಪಹಾರ ನಡೆದಾಗ ಒಳಗೆ ನಿಂತುಕೊಂಡು ರಂಗಾಸಾನಿಯು ಕುಮಾರಿ ಪಂಡಿತಳನ್ನು ನೋಡುತ್ತಿದ್ದಳು ಕುಸುಮಾನಿಂದ ಎಲ್ಲ ಸಮಾಚಾರವು ಅವಳಿಗೆ ತಿಳಿದಿತ್ತು. ಏನಾದರೂ ಒಳಗುಟ್ಟನ್ನು ಹೇಳುವದಿದ್ದರೆ,—ಅದನ್ನು ಕುಸುಮಾ ರಂಗಾಸಾನಿಗೆ ಹೇಳದೆ ಇರುತ್ತಿದ್ದಿಲ್ಲ. ಕುಮಾರಿಯು ಹೋದ ಮೇಲೆ ಕುಸುಮಾ ಒಳಗೆ ಬಂದಾಗ "ಎಳೆಯ ಮಾವಿನ ಮರದ ಮುಂದೆ ಬಲಿತ ಬೇವು ಸರಿಹೋದೀತೇ!" ಎಂದು ಉದ್ಗಾರ ತೆಗೆದು ರಂಗಾಸಾನಿಯು ಕುಸುಮಾನ ಗದ್ದ ಹಿಡಿ ದೃಷ್ಟಿ ತೆಗೆದು ಲಟಕ್ಕು ಮುರಿದುಕೊಂಡಳು

ಅಂದು ಸಂಜೆಮಾಡಿ ದೇಸಾಯರು ಮನೆಗೆ ಬಂದಾಗ ರಂಗಾಸಾನಿಯಿಂದ ಅವರಿಗೆ ಎಲ್ಲ ವೃತ್ತಾಂತವು ತಿಳಿಯಿತು. ಕುಸುಮಾ-ನರಹರಿಯರಲ್ಲಿ ಅವರಿಗೆ ಅಚಲವಾದ ವಿಶ್ವಾಸವಿತ್ತು. ಆದರೆ ತಾವಿಲ್ಲದಾಗ ಸಹ ಕುಸುಮಾ—

11

ನರಹರಿಯರು ಮಾತನಾಡುತ್ತ ಕುಳಿತಿರುವದು, ಆಮೇಲೆ ಮಿಸ್ ಪಂಡಿತಳ ಈ ತೊಡಕು,—ಇದನ್ನೆಲ್ಲ ನೆನೆದು "ಆದಷ್ಟು ಬೇಗನೆ ಇನ್ನು ಲಗ್ನವನ್ನು ಮುಗಿಸಿಬಿಡುವದು ಒಳಿತು" ಎಂದು ಅವರು ರಂಗಾಸಾನಿಯೆದುರು ಹೇಳಿದ್ದರು

ದೇಸಾಯರ ಮನೆಯಿಂದ ಹೊರಟ ಪ್ರಮೀಲೆಯು ನೇರವಾಗಿ ತನ್ನ ಕೋಣೆಗೆ ಹೋಗಿದ್ದಿಲ್ಲ ಫರ್ಗ್ಯುಸನ್ ಬೆಟ್ಟದೆಡೆಗೆ ತಿರುಗಾಡಲು ಹೋಗಿ ತನ್ನ ದುಃಖವನ್ನೆಲ್ಲ ನುಂಗಲು ಪ್ರಯತ್ನಿಸಿದಳು. ಅವಳ ಸ್ವಪ್ನಮಂದಿರವೆಲ್ಲ ಕಳಚಿದಂತಾಗಿತ್ತು ಹಾಕಿದ ಎಣಿಕೆಗಳೆಲ್ಲ ಸುಳ್ಳಾಗಿದ್ದವು. ಇನ್ನು ತನ್ನ ಜೀವನಕ್ರಮದ ಹಂಚಿಕೆಯನ್ನು ಆಕೆ ಹೊಸದಾಗಿ ಹಾಕಬೇಕಾಗಿತ್ತು. ನರಹರಿಯು ಆಕೆಯ ಕೈಗೆ ಸಿಲುಕುವ ಹಾಗಿರಲಿಲ್ಲ. ಚಿಕ್ಕಂದಿನಿಂದ ಅಕ್ಕರೆಯಲ್ಲಿ ಬೆಳೆದು ಈಗ ಯೌವನವು ತುಂಬಿ ಕೈನೀಡಿ ನಿಂತ ತರುಣಿಯಾದ ಅವಳಿಗೆ ತನ್ನ ಓರಿಗೆಯ ಗಂಡು ಜೊತೆಗಿಲ್ಲದೆ ಬಾಳುವೆಯು ಶೂನ್ಯವೆಂದೆನಿಸಹತ್ತಿತು. ತಂದೆಯ ಸಹವಾಸ ಅವಳಿಗೆ ಪ್ರಿಯವಾಗಿತ್ತು. ಆದರೆ ಅವಳ ಮನೋಮಂದಿರದಲ್ಲಿ ಪ್ರೇಮದ ಪುತ್ಥಳಿಯ ಪ್ರತಿಷ್ಠಾಪನೆಯಾಗದೆ ಜೀವನವು ಪ್ರಮೀಲೆಗೆ ಪೂರ್ಣವೆನಿಸುತ್ತಿರಲಿಲ್ಲ ತಂದೆಗೆ ಆಕೆಯ ಈ ಉತ್ಕಟೇಚ್ಛೆಯ ಅರಿವಿರಲಿಲ್ಲ ಬಿ ಏ ಆಗುವ ವರೆಗೆ ಐ ಸಿ. ಎಸ್. ವರನ ಶೋಧನೆಯಲ್ಲಿರಬೇಕೆಂದು ಕೇಶವರಾಯರು ಗೊತ್ತುಮಾಡಿಕೊಂಡಿದ್ದರು. ಪ್ರಮೀಲೆಯು ತನಗೆ ತಿಳಿದ ಹಾಗೆ ಸಾಹಸಪಟ್ಟಿದ್ದಳು ನರಹರಿಯಲ್ಲಿ ತನಗೆ ಅನುರೂಪನಾದ ತರುಣನನ್ನು ಕಂಡು ಅವನಿಗೆ ಆರತಿ ಎತ್ತಿದಳು. ಆದರೆ ನರಹರಿಯು ತನ್ನಂತೆ ಲಕಲಕ ಹೊಳೆಯುವ ನಕ್ಷತ್ರವೊಂದನ್ನು ಹೊಂದಿಕೊಂಡು ಅವಳ ಕ್ಷಿತಿಜದಿಂದ ಮರೆಯಾಗಿದ್ದ. ಪ್ರಮೀಲೆಯು ತಾನು ಚಿರಭಕ್ತಳಾಗಲು ಬಗೆದು ತನ್ನ ಹೃತ್ಕಮಲವನ್ನು ಅರಳಿಸಿದ ದೇವನನ್ನು ಅರಸಿದ್ದಳು. ಆ ದೇವ ಪ್ರಸನ್ನನಾಗುವ ಆಸೆಯೇ ತೊಲಗಲು,—ಈಗ ಉಳಿದುದೇನು? ತಾನೆ ದೇವಿಯಾಗುವದು ಭಕ್ತಿಯನ್ನು ಅರ್ಪಿಸುವದರ ಬದಲು,—ಸ್ವೀಕರಿಸುವದು! ಅರ್ಪಣದಲ್ಲಿ ಕಂಡುಬಂದ ಸಾಫಲ್ಯವು ಪ್ರಮೀಲೆಗೆ ಸ್ವೀಕಾರದಲ್ಲಿ ಕಾಣಲಿಲ್ಲ. ಆದರೆ ಇದನ್ನುಳಿದು ಬೇರೆ ಹಾದಿಯೇ ಉಳಿದಿರಲಿಲ್ಲ. ಇದ್ದ ಹಾದಿಯನ್ನು ನಡೆಯಬೇಕೆಂದು ಪ್ರಮೀಲೆಯು ನಿಶ್ಚಯಿಸಿದಳು.

ಪಾಟಣಕರನು ತನ್ನಲ್ಲಿ ಅನುರಕ್ತನಾಗಿರುವದು ಅವಳಿಗೆ ಗೊತ್ತಿತ್ತು. ಅವನದು 'ದಾಸನ'ನ ಭಾವ; 'ದೇವಿ'ಯ ಉಪಾಸಕನವ. ಗಣೇಶಖಿಂಡಿ ರಸ್ತೆಯ ಮೇಲೆ ಅವನನ್ನು ಕಂಡಾಗೆಲ್ಲ ಪ್ರಮೀಲೆಯು ಈ ಭಾವವನ್ನು ಪಾಟಣಕರನ ಮೋರೆಯ ಮೇಲೆ ಗುರುತಿಸಿದ್ದಳು ನರಹರಿಯು ಸೂಚಿಸಿದ ಪ್ರೇಮದ ಕಾಣಿಕೆಯು ಪಾಟಣಕರನದೆಂದು ಅವಳಿಗೆ ಗೊತ್ತಿತ್ತು. ಅವನನ್ನು ನಾಲ್ಕೆಂಟು ಸಲ ನೋಡಿದಾಗಲೆ ಪ್ರಮೀಲೆಯು ನಿಶ್ಚಯಿಸಿದ್ದಳು,— ಈ ಕಾಣಿಕೆಯು ಕಡೆಗೆ ಎಂದಿಗೆ ತಿರುಗಿದರೂ ಅದು ತನ್ನದಾಗುವದೆಂದು. ಅಂತೇ ಈ ವಿಷಯದಲ್ಲಿ ಅವಳು ನರಹರಿಯ ಸಹಾಯವನ್ನು ಅಪೇಕ್ಷಿಸಿರಲಿಲ್ಲ. ಈಗ ಈ ಕಾಣಿಕೆಯನ್ನು ಕುರಿತು ಪ್ರಮೀಲೆಗೆ ಒಂದು ನಿರ್ಣಯಕ್ಕೆ ಬರ ಬೇಕಾಗಿತ್ತು. ಪಾಟಣಕರನೂ ಕವಿ; ಬುದ್ಧಿಶಾಲಿ; ನಾಳೆ ಐ. ಸಿ. ಎಸ್. ಆಗುವವ ಅವನಿಗೂ ನರಹರಿಗೂ ಇದ್ದ ಅಂತರವೆಂದರೆ ಒಂದೆ: ನರಹರಿಯಲ್ಲಿ ಪ್ರಮೀಲೆಯು 'ಸ್ವಾಮಿ'ಯನ್ನು ಕಂಡಿದ್ದಳು ತಾನು ಅಸುಗೊಳ್ಳದ ಅಶ್ವವಾಗಿದ್ದರೂ ನರಹರಿಯ ಅಂಕಿತದಲ್ಲಿ ಸಿಕ್ಕು ಆಕೆ ತನ್ನ ಸನ್ಮಾರ್ಗವನ್ನು ಕಂಡುಕೊಳ್ಳಬಹುದಾಗಿತ್ತು. ಪಾಟಣಕರನು 'ದಾಸ'; ತೋರಿಕೆಗೆ ಅವನು ಈ ಕುದುರೆಯನ್ನು ಏರಬಹುದಾದರೂ ಆ ಕುದುರೆಯನ್ನು ಸಾದು ಗೊಳಿಸುವ ಹದವು ಅವನ ಹತ್ತಿರ ಇರಲಿಲ್ಲ ಕುದುರೆಯು ಒಯ್ದುತ್ತ ಹೋಗುವ ಸವಾರನು ಅವನಾಗಿದ್ದ. ಈಗ ಅವನ ಆಸರವನ್ನೇ ಪ್ರಮೀಲೆಯು ಬಯಸಿದಳು.

ಮರುದಿನ ಮುಂಜಾನೆ ಎಂದಿನಂತೆ ಎದ್ದು ಪ್ರಮೀಲೆಯು ತನ್ನ ಕುದುರೆಯನ್ನು ಸಿದ್ಧಪಡಿಸಲು ಹೇಳಿ ತನ್ನನ್ನು ವಿಶೇಷವಾಗಿ ಸಿಂಗರಿಸಿಕೊಂಡಳು. ಅವಳು ಒಂದು ಮೋಹಕಮೂರ್ತಿಯೆಂದು ಆಗ ನೋಡಿದ ಯಾರೂ ಹೇಳ ಬಹುದಾಗಿತ್ತು. ಹೀಗೆ ಸಿಂಗಾರವಾಗಿ ಅಶ್ವಾರೋಹಿಯಾಗಿ ಪ್ರಮೀಲೆಯು ಬೇಟೆಯಾಡಲು ನಡೆದ ರಾಜಕುಮಾರಿಯಂತೆ ಹೊರಟಳು. ಎಂದಿನಂತೆ ಆ ಹಾದಿ ಹಿಡಿದು ಪಾಟಣಕರನು ತಿರುಗಾಡಲು ನಡೆದಿದ್ದ. ಕುದುರೆಯ ಖುರಪುಟದ ಸಪ್ಪಳವು ಕೇಳಿದೊಡನೆ ಅವನ ಹೃದಯವು ತವಕಿಸಿತು. ಆದರೆ ಆ ತವಕವನ್ನು ಅವನ ಬುದ್ಧಿಯು ಬಿಗಿದು ಹಿಡಿಯಿತು. ಒಂದೆರಡು ಸಲ ಹೀಗೆಯೇ ತವಕಿಸಿ ಅವನು ಮೋಸಹೋಗಿದ್ದ,—ಬರುತ್ತಿರುವ

ಕುದುರೆಯ ಸವಾರರು ಪ್ರಮೀಲೆಯಾಗಿರದೆ ಗವರ್ನರರ ಅಂಗರಕ್ಷಕ ದಳದವರಾಗಿದ್ದರು. ಈಗ ಪಾಟಣಕರನು ಸಾವಕಾಶವಾಗಿ ಹಿಂತಿರುಗಿ ನೋಡಿದ. ಪ್ರಮೀಲೆಯೇ ಬರುತ್ತಿರುವಳೆಂದು ನಿಶ್ಚಿತವಾಯಿತು. ಆಗ ಹಾಗೆಯೇ ಮುನ್ನೋಡಿ ಪಾಟಣಕರನು ಮೆಲ್ಲಗೆ ನಡೆದ.

ಆದರೆ ಆಶ್ಚರ್ಯವೆಂದರೆ,—ಆ ಕುದುರೆಯ ನಡಿಗೆಯ ಸಪ್ಪಳ ಕ್ರಮೇಣ ಕಡಿಮೆಯಾಗಿ ತನ್ನ ಹತ್ತಿರವೇ ಕುದುರೆಯು ನಿಂತಂತೆ ಪಾಟಣಕರನಿಗೆ ಭಾಸವಾಯಿತು. ಅವನು ಹೊರಳಿ ನೋಡಿದಾಗ,—ಅದೇ ಕುದುರೆಯಿಂದಿಳಿದು ಅದರ ಬೆನ್ನು ಚಪ್ಪರಿಸುತ್ತ ತನ್ನನ್ನು ನೋಡಿ ಕುಲುಕುಲು ನಗುತ್ತ ನಿಂತಿರುವ ಪ್ರಮೀಲೆಯು ಅವನ ಕಣ್ಣಿಗೆ ಬಿದ್ದಳು. ಪಾಟಣಕರನು ಅವಳ ಆ ಮೋಹಕ ಸೌಂದರ್ಯವನ್ನು ಕಣ್ತುಂಬ ನೋಡಿದ ದೇವರು ತನಗೆ ಆ ಕಣ್ಣುಗಳನ್ನು ಕೊಟ್ಟಿರುವದು ಸಾರ್ಥಕವಾಯಿತೆಂದು ಅವನಿಗೆನಿಸಿತು.

" ಗುಡ್‌ಮಾರ್ನಿಂಗ್, ಪಾಟಣಕರ್ ! ಇವತ್ತು ದಿನಕ್ಕಿಂತ ಮುಂಚಿತವಾಗಿ ಹೊರಟಿದ್ದೀರಿ ? " ಎಂದು ವಿಲಾಸದಿಂದ ನಕ್ಕು ಕುಮಾರಿಯು ಅವನ ಹತ್ತಿರ ಸುಳಿದಳು. ಕುದುರೆಯು ಅವಳನ್ನು ಹಿಂಬಾಲಿಸಿತು.

ಪಾಟಣಕರನಿಗೆ ಸ್ವರ್ಗವೇ ಇಳಿದುಬಂದಂತಾಯಿತು. ಹೃದಯವು ಕಂಪಿಸುತ್ತಿರಲು " ಹೌದು ಇವತ್ತು ಸ್ವಲ್ಪ ಮುಂಚಿತವಾಗಿ ಹೊರಟಿದ್ದೆ." ಎಂದು ಅವನು ಹೇಳಿದ.

" ತಿರುಗಾಡಲು ಇದರಂಥ ಹಾದಿ ಇನ್ನೊಂದಿಲ್ಲ. ನಿಸರ್ಗಸಿದ್ಧಿಯೂ ಇದೆ ನಗರದ ಸಂಸ್ಕೃತಿಯೂ ಇದೆ. ಅಲ್ಲವೆ, ಪಾಟಣಕರ್ ? " ಎಂದು ಹಿತಮಿತವಾಗಿ ಕುಮಾರಿಯು ಕೇಳಿದಳು.

" ಹೌದು. ಅಲ್ಲದೆ ಏನು ! " ಪಾಟಣಕರನೆಂದ. ಮಾತನಾಡಲು ಅವನಿಗೆ ಈಗ ಧೈರ್ಯ ಬಂದಿತ್ತು.

" ಮೇಲಾಗಿ ಇತ್ತ ಕಡೆಗೆ ಬಂದರೆ ನಿಮ್ಮಂಥ ಸ್ಕಾಲರರ ಭೆಟ್ಟಿಯಾಗುತ್ತದೆ." ಎಂದು ಕುಮಾರಿಯು ನಕ್ಕಳು.

ಮುಖವು ಕೆಂಪೇರಲು ಪಾಟಣಕರನು ಸುಮ್ಮನಿದ್ದ. ಮನಸ್ಸಿನಲ್ಲಿಯೇ ನರಹರಿಯನ್ನು ಅವನು ನೂರು ಸಲ ವಂದಿಸಿದ. ನರಹರಿಯು ತನ್ನ ವಿಷಯದಲ್ಲಿ ಪ್ರಮೀಲೆಗೆ ಮಾತನಾಡಿರಬೇಕೆಂದು ಅವನಿಗೆನಿಸಿತು.

" ಐ.ಸಿ.ಎಸ್ ಗೆ ಹೋಗುವವರು ನೀವು. ಕುದುರೆ ಏರುವದನ್ನು ಕಲಿಯ ಬೇಕು. ನನ್ನ ಆಳನ್ನು ಕರೆದುಕೊಂಡು ಬಂದು ದಿನಾಲು ಮುಂಜಾನೆ ನಾನು ಬೇಕಾದರೆ ಕಲಿಸಬಲ್ಲೆ." ಎಂದು ಕುಮಾರಿಯು ಸವಿನುಡಿದಳು.

" ನೋಡೋಣ ನಿಮ್ಮ ಉಪಕಾರ ಬಹಳವಾಯಿತು " ಎಂದು ಪಾಟಣ ಕರನು ಗುಣಗುಟ್ಟಿದ. ಏನು ಮಾತಾಡಬೇಕೆಂಬುದೇ ಅವನಿಗೆ ತಿಳಿಯದಾ ಗಿತ್ತು. ಸುಖ-ಸ್ವಪ್ನತರಂಗಗಳ ಮೇಲೆ ಅವನು ತೇಲಾಡುತ್ತಿದ್ದ.

" ಇಂಗ್ಲಂಡಿಗೆ ಹೋಗಿ ನೀವು ಅಲ್ಲಿ ಮದುವೆಯಾಗುವವರೇನು ಮತ್ತೆ ? ಹಾಗೂ ಕೆಲವರು ಮಾಡುತ್ತಾರೆ." ಎಂದು ಕುಮಾರಿಯು ವಿನೋದ ಪೂರ್ವಕವಾಗಿ ಕೇಳಿದಳು.

ಪಾಟಣಕರನ ಧೈರ್ಯವು ಈಗ ಒಮ್ಮೆಲೆ ಜಾಗೃತವಾಯಿತು. " ಛೇ ! ಅದೆಂದಿಗೆ ಸಾಧ್ಯ? ಯಾವ ದೇಶಾಭಿಮಾನಿಯೂ ಹಾಗೆ ಮಾಡಲಾರ. ಹೋಗುವದಕ್ಕಿಂತ ಮೊದಲು ಮದುವೆಯಾದರೆ ಇಬ್ಬರೂ ಕೂಡಿಯೇ ಹೋಗಬೇಕೆಂದಿದ್ದೇನೆ " ಎಂದು ನಿಚ್ಚಳವಾಗಿ ಅವನು ನುಡಿದ. ಹೀಗೆ ನುಡಿ ಯಲು ತನಗೆ ಧೈರ್ಯ ಎಲ್ಲಿಂದ ಬಂತೋ ಎಂದು ಅವನಿಗೇ ಆಶ್ಚರ್ಯ ವಾಯಿತು.

" ಅಡ್ಡಿ ಇಲ್ಲ. ಇದೇ ಪ್ರಶಂಸನೀಯ " ಎಂದು ಕುಮಾರಿ ನುಡಿದಳು. ಬಳಿಕ ಮುಂದೆ " ನಾನು ಮದುವೆ ಮಾಡಿಕೊಂಡರೆ ಎಂಥವರನ್ನು ಮಾಡಿ ಕೊಳ್ಳುವೆನೆಂಬುದು ನಿಮಗೆ ಗೊತ್ತೇ ? " ಎಂದು ಪ್ರಶ್ನೆಮಾಡಿದಳು.

ಪ್ರತ್ಯುತ್ತರವಾಗಿ ಪಾಟಣಕರನು ಉತ್ಸುಕತೆಯಿಂದ ಅವಳ ಮೊಗ ವನ್ನು ನೋಡಿದ.

" ನಾನು ಅಪೇಕ್ಷಿಸಿದ ತರುಣ ಸಾಹಿತಿಯಾಗಿರಬೇಕು, ವಿದ್ವಾಂಸನಾಗಿರ ಬೇಕು. ವಿಲಾಯತಿಯನ್ನು ಮುಟ್ಟಿ ಐ ಸಿ.ಎಸ್. ಆಗಿ ಬರುವ ಯೋಗ್ಯತೆ ಯುವನಾಗಿರಬೇಕು. ಅಂದರೆ ಅವನನ್ನು ಮದುವೆಯಾಗಿ ನಾನೂ ಅವನೊ ಡನೆ ವಿಲಾಯತಿಗೆ ಪ್ರಯಾಣ ಬೆಳೆಸುತ್ತೇನೆ ! " ಎಂದು ಹೇಳಿ ವಿಲಾಸ ತುಂಬಿದ ಕಂಗಳಿಂದ ಕುಮಾರಿಯು ಪಾಟಣಕರನನ್ನು ನೋಡಿದಳು.

ಪಾಟಣಕರನ ಹೃದಯವು ತುಂಬಿಬಂದಿತ್ತು. ಕೃತಜ್ಞತೆಯು ಆರ್ದ್ರ ವಾಗಿಸಿದ ನೋಟದಿಂದ ಅವನು ಕುಮಾರಿಯನ್ನು ನೋಡಿದ.

ಆ ತಿರುಗಾಟದಲ್ಲೆಲ್ಲ ಪಾಟಣಕರನು ಆ ನುಡಿಜೇನನ್ನು ಸವಿದೇ ಸವಿದ. ಸವಿದಷ್ಟೂ ಅದು ಮಧುರವಾಗಿತ್ತು. ಅವನ ಹೃದಯದಲ್ಲಿ ತಾನು ಈಗ ನೇರವಾಗಿ ನುಗ್ಗಿದ್ದೆನೆಂದು ಕುಮಾರಿಗೆ ಗೊತ್ತಿತ್ತು. "ನಿಮ್ಮ ಕವಿತೆಗಳನ್ನು ಒಂದು ಸಲ ಕೇಳಬೇಕು?" ಎಂದು ಕುಮಾರಿಯು ತನ್ನ ಇಚ್ಛೆಯನ್ನು ವ್ಯಕ್ತ ಪಡಿಸಿದಳು.

"ಓದಿ ತೋರಿಸುತ್ತೇನೆ. ಅದರಲ್ಲಿಯೂ ಒಂದು ಕವಿತೆಯನ್ನು ನಿಮಗೆ ಓದಿ ತೋರಿಸಲೇಬೇಕು!" ಎಂದು ಹುರುಪಿನಿಂದ ಹೇಳಿದ ಪಾಟಣಕರನು.

"ಅದಾವುದು?" ಎಂದು ಪ್ರಮಿಳಾಲೆಯು ಕಣ್ಣೆವೆಯೆತ್ತಿದಳು

"'ಅಶ್ವಾರೋಹಿ' ಎಂಬುದು." ಎಂದು ಅವನು ಅಭಿಮಾನದಿಂದ ಹೇಳಿದ

"ಓಹೋ! ನನಗೂ ನಿಮ್ಮ ಕಾವ್ಯಮಂದಿರದಲ್ಲಿ ಸ್ಥಾನವಿದೆಯೇ, ಪಾಟಣಕರ್? ನನ್ನನ್ನು ಅಮರವಾಗಿಸುತ್ತೀರಿ ನೀವು!" ಎಂದು ಸಂತುಷ್ಟ ಳಾಗಿ ಪ್ರಮಿಳಾಲೆಯು ನುಡಿದಳು.

"ಹಾಗಲ್ಲ. ನನ್ನ ಕಾವ್ಯದ ಸ್ಫೂರ್ತಿಯೇ ನೀವು!" ಪಾಟಣಕರನೆಂದ.

ಹೀಗೆ ಮಾತು ತೆರೆದ ಒಲವಿನಲ್ಲಿ ಅವರಿಬ್ಬರೂ ತಮ್ಮ ತಮ್ಮ ಜಾಗಕ್ಕೆ ತೆರಳಿದಾಗ ಕಾಲೇಜಿಗೆ ಹೊರಡುವ ಹೊತ್ತಾಗುತ್ತ ಬಂದಿತ್ತು. ಮತ್ತು ಮರುದಿನ ಮುಂಜಾನೆ ಭೆಟ್ಟಿಯೆಂದು ಪ್ರೇಮಿಗಳಿಬ್ಬರೂ ಅಗಲಿದರು.

ಅಂದು ಕಾಲೇಜಿನಲ್ಲಿ ಪಾಟಣಕರನು ಭೆಟ್ಟಿಯಾದಾಗ ನರಹರಿಯು "ಪಾಟಣಕರ್, ಇನ್ನೂ ಅದು ಕೂಡಿಬಂದಿಲ್ಲ. ಕೆಲವು ದಿನಗಳಲ್ಲಿ ನಾವೆ ಲ್ಲರೂ ಕಲೆಯುವಂತೆ ಮಾಡುತ್ತೇನೆ. ಅದಕ್ಕಿಂತ ಮೊದಲು ಒಂದೆರಡು ಮಾತು ಹೇಳಬೇಕಾಗಿದೆ ನಿಮಗೆ" ಎಂದ.

"ನೀವು ಇನ್ನು ಪ್ರಯತ್ನಮಾಡುವ ಅಗತ್ಯವೇ ಇಲ್ಲ. ಇಂದು ಮುಂಜಾನೆ ನನ್ನ ದೈವ ತೆರೆಯಿತು." ಎಂದು ಆನಂದದ ಭರದಲ್ಲಿ ಪಾಟಣ ಕರನು ಹೇಳಿದ.

ನರಹರಿಗೆ ಆಶ್ಚರ್ಯವಾಯಿತು ಆಗ ಮುಂಜಾನೆ ನಡೆದುದನ್ನು ಪಾಟಣ ಕರನು ಸ್ವಲ್ಪದರಲ್ಲಿ ನರಹರಿಗೆ ಹೇಳಿದ

ಅದನ್ನು ಕೇಳಿ ನರಹರಿಗೆ ತನ್ನ ತಲೆಯ ಮೇಲಿನ ಒಂದು ಭಾರವಿಳಿದಂತಾಯಿತು. ಆದರೆ ಪಾಟಣಕರನ ಭವಿತವ್ಯತೆಯನ್ನು ಒಂದು ಮಂಜು ಬಂದು ನರಹರಿಯ ದೃಷ್ಟಿಯಲ್ಲಿ ಮುಸುಕಿಕೊಂಡಿತು. ಪಾಟಣಕರನ ಪ್ರೇಮವನ್ನು ತಿರುಗಿಸುವದು ಸಾಧ್ಯವಿಲ್ಲೆಂದು ನರಹರಿಗೆ ಗೊತ್ತಿತ್ತು. ಆದರೂ ಒಂದು ಮಾತನ್ನು ಅವನಿಗೆ ಹೇಳುವದು ಅವಶ್ಯವೆಂದು ಹಿಂದಿನ ರಾತ್ರಿ ನರಹರಿಯು ಯೋಚಿಸಿದ್ದ. ಪ್ರಮೀಲೆ ಬಿರಿತು ನಿಂತ ದಾಳಿಂಬದ ಹಣ್ಣು. ಅದರ ಕಣಕಣದಲ್ಲಿ ರಸತುಂಬಿದ್ದರೂ ಇನ್ನು ಮುಂದಕ್ಕೆ ಅದಕ್ಕೆ ಬೆಳವಣಿಗೆ ಇಲ್ಲ. ಬೀಜಕ್ಕಾಗಿ ಬಿಟ್ಟ ಹಣ್ಣಿನಂತೆ ಅದರ ಗತಿ. ಆದರೆ ಪಾಟಣಕರನದು ಬೆಳೆಯುತ್ತಿರುವ ಜೀವ. ಅವನಿಗೆ ಹಿತವಾದುದು ದಾಡಿಮವಲ್ಲ, ಸಕ್ಕರೆ ಬದಾಮಿ; ಮೇಲಿನ ಸಿಹಿ ಆವರಣವನ್ನು ತಿಂದರೂ–ಒಳಗೆ ಅವನಿಗಾಗಿ ಬೀಜಗಳನ್ನು ಕಾಯ್ದಿಟ್ಟ ಫಲ. ಆದಕಾರಣ ದುಡುಕದೆ ಪಾಟಣಕರನು ಇನ್ನೂ ವಿಚಾರಮಾಡಬೇಕೆಂದು ನರಹರಿಯು ಹೇಳುವವನಿದ್ದ.

ಆದರೆ ಒಂದು ರಾತ್ರಿ ಕಳೆದು ಮುಂಜಾವು ಕೊನೆಯುವಷ್ಟರಲ್ಲಿ ದೈವವು ಎಷ್ಟೊಂದು ಬದಲಾವಣೆಯನ್ನು ಮಾಡಿತ್ತು! ತಮ್ಮಿಂದ ಅಗಲಿದ ಮೇಲೆ ಪ್ರಮೀಲೆಯ ಮನೋಧರ್ಮವು ಯಾವ ನಿರ್ಣಯಕ್ಕೆ ಬಂದಿರಬೇಕೆಂಬುದು ಈಗ ನರಹರಿಗೆ ನಿಚ್ಚಳವಾಗಿ ಹೊಳೆಯಿತು. ಆದರೆ ಬೆರೆತ ಹೃದಯಗಳನ್ನು ಅಗಲಿಸಲು ಪ್ರಯತ್ನಿಸುವದು ಧರ್ಮವಲ್ಲವೆಂದು ನರಹರಿಯು ಸುಮ್ಮನಾದ.

"ದೇವರು ನಿಮಗೆ ಎಲ್ಲವನ್ನೂ ಒಳ್ಳೆಯದನ್ನಾಗಿ ಮಾಡಲಿ, ಪಾಟಣಕರ್!" ಎಂದು ಅಂತಃಕರಣವು ತುಂಬಿ ಬಂದು ನರಹರಿ ನುಡಿದ.

## ಪ್ರಕರಣ ೩೪

## ಸಾಗ್ದಾನ

ಗಣೇಶಖಿಂಡಿಯ ರಸ್ತೆಯ ಕಡೆಗೆ ಮುಂಜಾವಿನ ತಿರುಗಾಟ ಎಂದಿನಂತೆ ನಡೆಯಿತು. ಪಾಟಣಕರ–ಪ್ರಮೀಲೆಯರು ಈಗ ಅಗಲದ ಜೊತೆಗಾರರಾಗಿದ್ದರು. ವಿಷ್ಣು (ಪಾಟಣಕರನು) ತಿರುಗಾಟದ ಕೊನೆಗೆ ಪೂರ ಒಂದು ರಮಣೀಯ ಜಾಗದಲ್ಲಿ ಕೂತು ತನ್ನ ಕವಿತೆಗಳನ್ನು ಓದಿ ತೋರಿಸುತ್ತಿದ್ದ.

ಪ್ರಮೀಲೆಯು ಅವನ್ನು ಕೇಳಿ ತನ್ನ ಅಭಿಪ್ರಾಯವನ್ನು ಸೂಚಿಸುತ್ತಿದ್ದಳು. ಅದೆಷ್ಟೋ ಸವಿಮಾತುಗಳನ್ನು ದಿನಾಲು ಮುಂಜಾನೆ ಅವರಾಡುತ್ತಿದ್ದರು. ಅವರ ಪ್ರೀತಿಯ ನಸುಕು ಆಗ ತಾನೆ ಹರಿಯುತ್ತಿತ್ತು.

ಈ ಸಾಮರಸ್ಯವು ತನ್ನ ಜೀವನವನ್ನು ಪ್ರವೇಶಿಸಿದ ಕೆಲವೊಂದು ದಿನಗಳಲ್ಲಿಯೇ ವಿಷ್ಣು ಹೊಸ ಮನುಷ್ಯನೇ ಆಗಿದ್ದ. ಅವನ ಮೊದಲಿನ ನಾಚಿಕೆ–ಸಂಕೋಚಗಳೆಲ್ಲ ತೊಲಗಿ ಒಂದು ಸ್ಪಷ್ಟತೆಯು ಅವನ ನುಡಿಯಲ್ಲಿಯೂ ನಡೆಯಲ್ಲಿಯೂ ನೆಲೆಗೊಂಡಿತ್ತು. ಅವನು ಇಡುತ್ತಿರುವ ಹೆಜ್ಜೆಗಳಲ್ಲಿ ಒಂದು ಸಿರ್ಥಾರವಿತ್ತು. ಅವನ ಆತ್ಮವಿಶ್ವಾಸದಲ್ಲಿ ಒಂದು ಪ್ರಖರತೆಯಿತ್ತು. ವಿಷ್ಣು–ಪ್ರಮೀಲೆಯರ ಪ್ರೇಮದ ವಿಷಯದಲ್ಲಿ ಕಾಲೇಜಿನ ವಿದ್ಯಾರ್ಥಿಗಳಲ್ಲಿ ಗುಜುಗುಜು ನಡೆದಿತ್ತು. ಅದೇ ರಸ್ತೆಗೆ ತಿರುಗಾಡಲು ಹೋಗುವ ಕೆಲವು ವಿದ್ಯಾರ್ಥಿಗಳು ಈ ಸುದ್ದಿಯನ್ನು ವಸತಿಗೃಹದಲ್ಲೆಲ್ಲ ಹಬ್ಬಿಸಿದ್ದರು. ಆದರೆ ವಿಷ್ಣುವು ಯಾವುದಕ್ಕೂ ಅಳುಕಲಿಲ್ಲ. ಬಾಳ ಕಡಲಿನಲ್ಲಿ ದಿಕ್ಕಿಲ್ಲದೆ ತೇಲುತ್ತಿರುವ ಅವನ ದೋಣಿಯು ಈಗ ಒಂದು ಸುಂದರ ದ್ವೀಪದ ಸುತ್ತು ಅಲೆಯುತ್ತಿತ್ತು.

“ವಿಷ್ಣು, ಇನ್ನು ನೀನು ಕುದುರೆ ಏರುವದನ್ನು ಕಲಿಯಲು ಪ್ರಾರಂಭಿಸಬೇಕು. ಈಗಿನಿಂದ ರೂಢಿಯಿದ್ದರೆ ವಿಲಾಯತಿಯಲ್ಲಿ ಹಗುರಾಗುವದು” ಎಂದಳು ಪ್ರಮೀಲೆ. ಈಗ ‘ಪ್ರಮೀಲೆ,’ ‘ವಿಷ್ಣು’ ಎಂದು ಕರೆಯುವದು ಅವರ ದಿನದ ಮಾತಾಗಿಹೋಗಿತ್ತು. ಅಂದು ಮುಂಜಾನೆ ತನ್ನ ಜೊತೆಗೆ ಆಳನ್ನು ಕರೆದುಕೊಂಡು ಬಂದಿದ್ದಳು ಪ್ರಮೀಲೆ,—ವಿಷ್ಣುವಿಗೆ ಪಾಠಗಳು ಆರಂಭವಾಗಬೇಕೆಂದು.

ವಿಷ್ಣು ತುಸು ಸಂಕೋಚಪಟ್ಟುಕೊಂಡ. ಹತ್ತಿರದಲ್ಲಿಯೇ ಜನರು ಹಾಯುತ್ತಿದ್ದರು. “ಇನ್ನೂ ತುಸು ಮುಂದೆ ಹೋಗೋಣ. ಇಲ್ಲಿ ಪ್ರಶಸ್ತವಾಗುವದಿಲ್ಲ” ಎಂದು ಅವನು ಹೇಳಿದ.

ಅದೇ ರಸ್ತೆಯ ಮೇಲೆ ಗವರ್ನರರ ವಾಸಸ್ಥಾನವನ್ನು ದಾಟಿ ಹೋಗಿ ವಿಷ್ಣು ತನ್ನ ಪಾಠಗಳನ್ನು ಕಲಿಯಲಾರಂಭಿಸಿದ. ಅವನನ್ನು ಕುದುರೆಯ ಮೇಲೆ ಕೂಡಿಸಿ ಆಳು ‘ಮುಗದಾಣ’ ವನ್ನು ಹಿಡಿದು ಮುಂದೆ ಸಾಗುತ್ತಿದ್ದ. ಕಡಿವಾಣವನ್ನು ಹೇಗೆ ಹಿಡಿದು ಚಲಿಸಬೇಕೆಂಬುದನ್ನು ಪ್ರಮೀಲೆಯು ಹೇಳಿ

ಕೊಡುತ್ತಿದ್ದಳು. ಹೀಗೇ ಕೆಲವು ದಿನ ಸಾಗಿ ತಾನಾಗಿ ಹತ್ತಿ ಕುದುರೆ ನಡಿಸಲು ವಿಷ್ಣುವಿಗೆ ಬಂದಿತು. ಕಾಲೇಜಿನ ಪುಸ್ತಕಪಾಂಡಿತ್ಯವನ್ನು ಸದ್ಯದ ಮಟ್ಟಿಗೆ ವಿಷ್ಣು ಬದಿಗಿಟ್ಟಿದ್ದ. ಪರೀಕ್ಷೆಗೆ ಇನ್ನೂ ವೇಳೆಯಿತ್ತಲ್ಲ? ಅಶ್ವವಿದ್ಯೆಯೇ ಈಗ ಅವನ ಮನಸ್ಸನ್ನು ಹಿಡಿದಿತ್ತು,—ಸಹವಾಸವಾಧುರ್ಯದ ಮೂಲಕ.

ಒಂದು ದಿನ ಮುಂಜಾನೆ ವಿಷ್ಣು ಕುದುರೆಯನ್ನೇರಿ ಸಾಗಿದ್ದ. ಆಳು ಸಮೀಪದಲ್ಲಿ ಬರುತ್ತಿದ್ದ. ತುಸು ಹಿಂದಿನಿಂದ ಪ್ರಮೀಲೆ "ಇನ್ನೇನು, ನನ್ನಷ್ಟೇ ಇದರಲ್ಲಿ ನೀನು ಪ್ರವೀಣನಾಗುವಿ, ವಿಷ್ಣು!" ಎಂದು ಪ್ರೋತ್ಸಾಹಿಸುತ್ತಿದ್ದಳು. ಅಷ್ಟರಲ್ಲಿ ಹಿಂದಿನಿಂದ "ಏನು! ಪಾಟಣಕರ್! ಕುದುರೆಯ ಸವಾರಿ ನಡೆದಿದೆಯೆ? ಸುದೈವಿಗಳು ನೀವು!" ಎಂದು ಒಂದು ವ್ಯಕ್ತಿಯು ಗಹಗಹಿಸಿ ನಕ್ಕಿತು. ವಿಷ್ಣು–ಪ್ರಮೀಲೆಯರು ಹಿಂತಿರುಗಿ ನೋಡಿದರು. ಕುಡಚಿಯು ಅವರ ಸಮೀಪಕ್ಕೆ ಬರುತ್ತಿದ್ದ.

"ಈ ಹಾದಿಗೆ ಯಾವಾಗ ಬರಹತ್ತಿದಿರಿ ನೀವು? ಬಂದರೂ ನಮ್ಮ ಹಾದಿ ನಿಮಗೇಕೆ?" ಎಂದು ಪ್ರಮೀಲೆಯು ತುಸು ಸಿಟ್ಟಿನಿಂದ ಕೇಳಿದಳು. ವಿಷ್ಣು ಕುಡಚಿಯ ಪ್ರಶ್ನೆಯಿಂದ ತುಸು ಅಧೀರನಾಗಿದ್ದ. ಕುಳಿತಲ್ಲಿಯೇ ಅವನು ಸರಿದಾಡಹತ್ತಿದ. ಸಂಕೋಚವು ಮತ್ತೆ ಅವನನ್ನು ಆವರಿಸಿಕೊಂಡಿತ್ತು.

"ಯಾಕೆ? ಇದು ಎಲ್ಲರ ರಹದಾರಿ, ಮಿಸ್ ಪಂಡಿತ್! ಇಲ್ಲಿ ಬರಲು ಅಡ್ಡಿ ಏನು? ಅಲ್ಲದೆ ನಾನು ತೆಗಳಲು ಬಂದವನಲ್ಲ. ಹೊಗಳಲು ಬಂದವನು!" ಎಂದು ಕುದುರೆಯ ಹತ್ತಿರ ಬಂದು ಕುಡಚಿಯು "ಕುದುರೆಯ ಮೈಕಟ್ಟು ಮೋಹಕವಾಗಿದೆ!" ಎಂದು ಅದರ ಬೆನ್ನಮೇಲೆ ಚಪ್ಪರಿಸಿದ.

ಪರಿಚಯವಿಲ್ಲದ ಯಾವುದೋ ಒಂದು ಕೈ ಬಂದು ಬೆನ್ನು ಚಪ್ಪರಿಸಿರಲು ಏನುಮಾಡುತ್ತೇನೆಂಬುದರ ಅರಿವಿಲ್ಲದೆ ಆ ಕುದುರೆಯು ಒಮ್ಮೆಲೆ ಓಡತೊಡಗಿತು. ಅದನ್ನು ನಿಗ್ರಹಿಸುವ ಪ್ರಸಂಗಾವಧಾನವಿಲ್ಲದೆ ವಿಷ್ಣು ಕುದುರೆಯಿಂದ ಕೆಳಗುರುಳಿದ. ದೂರ ಹೋಗಿ ಕುದುರೆಯು ನಿಂತಿತು. "ಅಯ್ಯೋ! ಘಾತವಾಯಿತು! ಇದೇನು ಮಾಡಿದಿರಿ, ಕುಡಚಿ!" ಎಂದು ಪ್ರಮೀಲೆಯು ಓಡಿ ವಿಷ್ಣುವನ್ನು ಉಪಚರಿಸತೊಡಗಿದಳು.

ಪುಣ್ಯಕ್ಕೆ ವಿಷ್ಣುವಿಗೆ ವಿಶೇಷ ಪೆಟ್ಟು ತಾಕಿರಲಿಲ್ಲ. ಮೊಳಕಾಲಿನ ಹತ್ತಿರ ತುಸು ಕೆತ್ತಿತ್ತು. ಪ್ರಮೀಲೆಯು ಆ ಗಾಯಕ್ಕೆ ತನ್ನ ಕರವಸ್ತ್ರವನ್ನು ಕಟ್ಟಿದಳು. ಎದ್ದು ನಿಂತು ಪಾಟಣಕರನು ತನ್ನ ಅರಿವೆಗಳನ್ನು ಝಾಡಿಸಿ ಕೊಂಡ ಆಳು ಹೋಗಿ ಹೊಡೆಯುತ್ತ ಕುದುರೆಯನ್ನು ತಿರುಗಿ ತಂದ. ಕುಡ ಚಿಯು ಕ್ಷಮೆಯನ್ನು ಯಾಚಿಸುವ ನಗೆಯನ್ನು ಮೊಗದಲ್ಲಿ ತಳೆದು ಅಲ್ಲಿಯೇ ನಿಂತಿದ್ದ.

"ನಿಮ್ಮ ಕೆಲಸವೇ ಹೀಗೆ, ಕುಡಚಿ! ಎಲ್ಲದರಲ್ಲಿಯೂ ಅಧಿಕಪ್ರಸಂಗ ನಿಮ್ಮದು. ಎಲ್ಲಿಯಾದರೂ ಮರ್ಮಕ್ಕೆ ಪೆಟ್ಟು ತಗಲಿದ್ದರೆ?" ಎಂದು ಪ್ರಮೀ ಲೆಯು ಕುಡಚಿಯನ್ನು ಬಯ್ದು ಮುಚ್ಚಿದಳು.

"ಕ್ಷಮಿಸಬೇಕು, ಮಿಸ್. ಪಂಡಿತ್! ಕುದುರೆ ಹೀಗೆ ಅಂಜುವದೆಂದು ನಾನು ತಿಳಿದಿರಲಿಲ್ಲ" ಎಂದು ಕುಡಚಿಯು ಕಿರಚಿದ.

"ನಿಮಗೆ ತಿಳುವಳಿಕೆಯಿದ್ದರೆ,—ತಿಳಿಯಬೇಕು!" ಎಂದು ಪ್ರಮೀ ಲೆಯು ತೀಕ್ಷ್ಣವಾಗಿ ನುಡಿದಳು.

ಪ್ರತ್ಯುತ್ತರವಾಗಿ ಕುಡಚಿಯು ಹುಚ್ಚುಚ್ಚಾರೆ ನಕ್ಕ.

ಮುಂದೆ ಕೆಲವು ದಿನ ಕುದುರೆ ಏರುವ ಕಾರ್ಯಕ್ರಮವು ಹಾಗೆಯೇ ಉಳಿಯಿತು. ವಿಷ್ಣು-ಪ್ರಮೀಲೆಯರು ಫರ್ಗ್ಯುಸನ್ ಬೆಟ್ಟದ ಕಡೆಗೆ ಮುಂಜಾನೆ ತಿರುಗಾಡಿ ಬರುತ್ತಿದ್ದರು.

ಹೀಗೆಯೇ ಅವರ ಪ್ರೀತಿಯು ಬಳ್ಳಿವರಿಯುತ್ತಿರುವಾಗ ಹದಿನೈದು ದಿನ—ತಿಂಗಳಿಗೊಮ್ಮೆ ಬರುವಂತೆ ಪಂಡಿತ ಕೇಶವರಾಯರು ಪುಣೆಗೆ ಬಂದರು. ಅವರು ಈ ಸಲ ಬಂದಾಗ ತನ್ನ ಮನೋಗತವನ್ನೆಲ್ಲ ಪ್ರಮೀಲೆಯು ತಂದೆಗೆ ಹೇಳಿದಳು. ಕೇಶವರಾಯರು ಎಲ್ಲವನ್ನೂ ಕೇಳಿಕೊಂಡರು. ಮಗಳು ಯೋಗ್ಯ ವರನನ್ನೇ ಆರಿಸಿಕೊಂಡಿರುವಳೆಂದು ಅವರಿಗೆ ಒಳಗಿಂದೊಳಗೆ ಹರ್ಷ ವಾಯಿತು. "ಹುಡುಗನೆಲ್ಲಿ?" ಎಂದು ಅವರು ಮಗಳನ್ನು ಕೇಳಿದರು. ಪ್ರಮೀಲೆಯು ಪಾಟಣಕರನನ್ನು ಕರೆದುಕೊಂಡು ಬಂದಾಗ,—ಮದುವಣಿ ಗನಲ್ಲ, ಮದುವಣಿಗಳಂತೆ ಅವನು ತುಂಬ ನಾಚಿಕೊಂಡಿದ್ದ. ಅವನ ವಿಷಯ ವನ್ನೆಲ್ಲ ರಾಯರು ಆಗಲೆ ಮಗಳಿಂದ ತಿಳಿದಿದ್ದರು. ಅವನನ್ನು ನೋಡಿದಾಗ ರಾಯರಿಗೆ ಯಾವ ಅನಿಶ್ಚಿತತೆಯೂ ಉಳಿಯಲಿಲ್ಲ. ಮಗಳನ್ನು ಪಾಟಣಕರ

ನಿಗೆ ಕೊಡಲು ರಾಯರು ಒಪ್ಪಿಕೊಂಡರು. "ನಮ್ಮದು ಬಹಳ ಪುರಾತನ ಮನೆತನ ಮತ್ತೆ! ಅದರ ಗೌರವವನ್ನು ಕಾಯ್ದು ನೀವು ಕುಲದೀಪಕರಾಗ ಬೇಕು." ಎಂದರು ಕೇಶವರಾಯರು. ವಿನಯದಿಂದ ನಕ್ಕು ಪಾಟಣಕರನು ಸುಮ್ಮನಿದ್ದ.

ಇನ್ನು ಮೋಡಕರ ಮನಸ್ಸನ್ನಷ್ಟು ಈ ಮಂಗಲಕಾರ್ಯಕ್ಕೆ ಸಿದ್ಧ ಗೊಳಿಸಬೇಕಲ್ಲ? ವಿಷ್ಣುನೇ ಅದನ್ನು ಮಾಡಬೇಕಾಗಿತ್ತು. ಅವನು ಮೊದಲು ರಂಗೂತಾಯಿಯವರಿಗೆ ತನ್ನ ಒಳಗುಟ್ಟನ್ನು ತಿಳಿಸಿದ. ಅಕ್ಕನ ಪ್ರೀತಿ ತನ್ನನ್ನು ಕಾಯುವದೆಂದು ಅವನಿಗೆ ಗೊತ್ತಿತ್ತು. ಒಂದು ದಿನ ಅಡಿಗೆಮನೆಗೆ ಹೋಗಿ ರಂಗೂತಾಯಿಯವರೆದುರಿಗೆ "ಮದುವೆ....ಮದುವೆ" ಎಂದು ವಿಷ್ಣು ಗೊಣಗುಟ್ಟಿದ.

"ಮದುವೆ? ಯಾರ ಮದುವೆ?" ಎಂದು ಆಶ್ಚರ್ಯದಿಂದ ಕೆಲಸ ದೊಳಗಿಂದ ಕೈ ತೆಗೆದು ರಂಗೂತಾಯಿಯವರು ಕೇಳಿದರು.

"ನನ್ನ ಮದುವೆ...." ಎಂದು ವಿಷ್ಣು ತುಂಟನಗೆಯಿಂದ ಉತ್ತರ ಕೊಟ್ಟ. "ಯಾವಾಗ? ಯಾರೊಡನೆ? ಏನು ಮಾಡಿದ್ದೀ ವಿಷ್ಣು?" ಎಂದು ರಂಗೂತಾಯಿ ಗಾಬರಿಯಾಗಿ ಕೇಳಿದರು.

ಬಳಿಕ ಎಲ್ಲ ವಿವರಗಳನ್ನು ವಿಷ್ಣು ಅಕ್ಕನೆದುರಿಗೆ ಹೇಳಿದ. ದೇಶಮುಖ ಮನೆತನದ ಇತಿಹಾಸವನ್ನು ಕೇಶವರಾಯರು ಹೇಳಿದಂತೆ ಚಾಚೂ ತಪ್ಪದೆ ಬಣ್ಣಿಸಿದ ರಾಯರಿಗೆ ಪ್ರಮಿಲೆಯೊಬ್ಬಳೇ ಮಗಳು,—ಉಳಿದ ಯಾರೂ ಇಲ್ಲವೆಂದು ತಿಳಿಸಿದ ಇದನ್ನೆಲ್ಲ ಕೇಳಿ ರಂಗೂತಾಯಿಯವರ ಬಾಯಲ್ಲಿ ನೀರೊಡೆಯಿತು. "ವಿಷ್ಣು, ನೀನು ಭಾಗ್ಯಶಾಲಿ! ನಮ್ಮ ಮನೆ ಮುಂದೆ ಬರು ವದು ನಿನ್ನಿಂದ." ಎಂದು ಒಂದು ಕ್ಷಣ ಅವರು ಭಾವನಾಪರವಶರಾದರು. ಆಮೇಲೆ "ಆ ಹುಡಿಗಿಯ ತಂದೆ ಒಪ್ಪಿದ್ದಾರೆಯೆ?" ಎಂದು ಕೇಳಿದರು.

ಪಾಟಣಕರನು ಹುರುಪಿನಿಂದ ತಲೆಯಲ್ಲಾಡಿಸಿದ.

ರಂಗೂತಾಯಿಯವರಿಗೆ ಹುಡಿಗಿಯನ್ನು ನೋಡುವ ಲವಲವಿಕೆಯಾ ಯಿತು. ಮೇಲಾಗಿ ಮೋಡಕರನ್ನು ಒಪ್ಪಿಸುವ ಭಾಗವೂ ಉಳಿದಿತ್ತು. ತುಸು ಹೊತ್ತು ಯೋಚಿಸಿ ಒಂದು ಯೋಜನೆಯನ್ನು ಅವರು ವಿಷ್ಣುವಿನೆದುರು

ಹೇಳಿದರು. ವಿಷ್ಣು ಅದನ್ನು ಒಪ್ಪಿಕೊಂಡು ಕುಣಿಯುತ್ತ ಮುಂದೆ ನಡೆದ. ಮರುದಿನ ಅವನು ಪ್ರಮೀಲೆಯನ್ನು ಕರೆದುಕೊಂಡು ಬಂದು ತನ್ನ ಮನೆ ಮುಟ್ಟಿಸಿದಾಗ ನಾಲ್ಕು ಹೊಡೆಯಲು ಬಂದಿತ್ತು. ಮುಟ್ಟಿಸಿ ಅಕ್ಕನನ್ನು ನೋಡಿ ನಗುತ್ತ ಅವನು ತಿರುಗಿ ಹೊರಟುಹೋದ.

ರಂಗೂತಾಯಿಯವರು ಪ್ರಮೀಲೆಯನ್ನು ಕಣ್ತುಂಬ ನೋಡಿದರು. ಅವಳ ರೂಪ ಅವರನ್ನು ಮೋಹಿಸಿತು. ತಕ್ಕ ರೂಪ, ಸಂಪತ್ತು, ವಿದ್ಯೆ.— ಇನ್ನೇನು ಬೇಕು? ಈಕೆ ವಿಷ್ಣುನಿಗೆ ತಕ್ಕ ವಧುವೆಂಬ ಬಗ್ಗೆ ಅವರ ಮನಸ್ಸಿನಲ್ಲಿ ಸಂಶಯವೇ ಉಳಿಯಲಿಲ್ಲ. "ಬಾ, ಕುಳಿತುಕೊ" ಎಂದು ಅವರು ತುಂಬ ವಿಶ್ವಾಸದಿಂದ ಪ್ರಮೀಲೆಯನ್ನು ಸ್ವಾಗತಿಸಿದರು.

ಪ್ರಮೀಲೆಯು ಕುಳಿತುಕೊಂಡಳು.

"ನಮ್ಮ ವಿಷ್ಣು ಬಲು ಬುದ್ಧಿವಂತ. ಯಾವಾಗಲೂ ಕಾಲೇಜಿನಲ್ಲಿ ಒಂದನೆ ನಂಬರು ಈ ಕಾಲೇಜು ಸುರುವಾದ ಮೇಲೆ ಅವನಷ್ಟು ಮಾರ್ಕ್ಸ್ನ ಯಾರೂ ತೊಗೊಂಡಿಲ್ಲವೆಂದು ಮನೆಯಲ್ಲಿ ಹೇಳುತ್ತಾರೆ" ಎಂದು ರಂಗೂತಾಯಿಯವರು ದನಿ ತೆಗೆದರು. ಪ್ರಮೀಲೆಯ ಪ್ರತಿಷ್ಠೆ, ಸಂಪತ್ತು, ವಿದ್ಯೆ,— ಇವನ್ನೆಲ್ಲ ಸರಿಗಟ್ಟಲು ತಮ್ಮ ಮನೆಯಲ್ಲಿ ಏನಿದೆ? ರತ್ನದಂಥ ತಮ್ಮನೊಬ್ಬ. ಅವನ ವಿಷಯವನ್ನೇ ರಂಗೂತಾಯಿಯವರು ಬಣ್ಣಿಸಿದರು

ಪ್ರಮೀಲೆಯು ಸಂತೋಷದ ನಗೆಯೊಂದನ್ನು ಸೂಚಿಸಿ ಸುಮ್ಮನಿದ್ದಳು.

"ನಿಮ್ಮ ತೋಟಗಳಿವೆಯೆಂದು ವಿಷ್ಣು ಹೇಳಿದ. ಎಷ್ಟು ತೋಟಗಳಿವೆ?" ಎಂದು ರಂಗೂತಾಯಿಯವರು ಕೇಳಿದರು.

"ಒಂದೆರಡು ತೋಟಗಳಿವೆ. ಖಾಸಗಾಂವಿಯ ಸುತ್ತಲೂ ಹೊಲಗಳಿವೆ" ಎಂದಳು ಪ್ರಮೀಲೆ.

"ನಾನು ತೋಟ-ಪಟ್ಟಿಯನ್ನು ಮಾಡಿಲ್ಲ, ನಮ್ಮವ್ವ. ಎಲ್ಲ ದುಡ್ಡನ್ನು ಕೂಡಿಸಿ ನಮ್ಮವರು ಬ್ಯಾಂಕಿನಲ್ಲಿ ಇಟ್ಟಿದ್ದಾರೆ." ಎಂದು ತಮ್ಮ ಪಕ್ಷವನ್ನು ರಂಗೂತಾಯಿಯವರು ಸಮರ್ಥಿಸಿಕೊಂಡರು. ಬಳಿಕ "ಇವರು ಮನೆಗೆ ಬರುವ ಹೊತ್ತಾಯಿತು. ಚಹಕ್ಕಿಡುತ್ತೇನೆ" ಎಂದು ಏಳುವದರಲ್ಲಿದ್ದರು.

"ನೀವು ಕುಳಿತುಕೊಳ್ಳಿರಿ. ನಾನು ಚಹ ಮಾಡುತ್ತೇನೆ." ಎಂದು ಪ್ರಮೀಲೆಯು ತಾನೇ ಎದ್ದಳು.

“ಅಗ ಬಾಯಿ! ಅದೇಕಾಯಿತು? ಶ್ರೀಮಂತರ ಹುಡಿಗಿ ನೀನು. ನಿನಗೆ ಚಹ ಮಾಡಲು ಬರುತ್ತಿದೆಯೇ?” ಎಂದು ಹರ್ಷಭರಿತರಾಗಿ ರಂಗೂತಾಯಿಯವರು ಕೇಳಿದರು.

“ಬರುತ್ತದೆ ಆಗೀಗ ನನ್ನ ಕೋಣೆಯಲ್ಲಿ ನಾನೇ ನನ್ನ ಚಹ ಮಾಡಿಕೊಳ್ಳುತ್ತೇನೆ” ಎಂದು ಪ್ರಮೀಲೆಯು ನಗುತ್ತ ಹೇಳಿದಳು.

ಮೋಡಕರು ಮನೆಗೆ ಬಂದಾಗ ಐದು ಹೊಡೆಯಲು ಬಂದಿತ್ತು. ಉಶ್ಶೆಂದು ಅವರು ತಮ್ಮ ಮುಂಚೆಯ ಕೋಣೆಯಲ್ಲಿ ಕೋಟು-ರುಮಾಲುಗಳನ್ನು ತೆಗೆದಿಟ್ಟು ಕುಳಿತು “ಅಗ! ಚಹಾ ಘಿವುನ್ ಏ!” ಎಂದು ಒದರಿಕೊಂಡರು.

ಪ್ರತ್ಯುತ್ತರವಾಗಿ ಚಹದ ಕಪ್ಪು ಅವರ ಸನಿಯಕ್ಕೆ ಬರಹತ್ತಿತು. ಕುಳಿತಲ್ಲಿಂದಲೇ ಕಿಟಕಿಯೊಳಗಿಂದ ನೋಡುತ್ತ, “ಇಷ್ಟೇಯೇನು ಚಹ ಮಾಡಲಿಕ್ಕೆ?” ಎಂದು ದಣಿದ ದನಿಯಲ್ಲಿ ಒದರಿಕೊಂಡರು ಹೊರಳಿ ನೋಡಿದಾಗ,—ಅಲ್ಲಿ ಪ್ರಮೀಲೆಯು ಚಹದ ಕಪ್ಪನ್ನು ಹಿಡಿದುಕೊಂಡು ನಿಂತಿದ್ದಳು.

ಮೋಡಕರು ಗಾಬರಿಯಾದರು ಮಾತನಾಡಲು ಅವರ ದನಿಯೇ ಏಳಲಿಲ್ಲ. ದಾರಿತಪ್ಪಿ ತಮ್ಮ ಮನೆಯನ್ನು ಬಿಟ್ಟು ಇನ್ನೊಂದು ಮನೆಯನ್ನು ಪ್ರವೇಶಿಸಿರುವೆವೋ ಏನೆಂದು ಅವರಿಗೆ ಸಂಶಯ ಬಂತು ಇನ್ನೊಮ್ಮೆ ತಮ್ಮ ಕೋಣೆಯ ಗೂಟ-ಗೋಡೆಗಳನ್ನೆಲ್ಲ ನೋಡಿಕೊಂಡರು. ಆಮೇಲೆ “ನೀವಾರು? ಈಕೆಯಲ್ಲಿ?” ಎಂದು ಅವರು ಪ್ರಮೀಲೆಯನ್ನು ಪ್ರಶ್ನಿಸಿದರು.

ಪ್ರತ್ಯುತ್ತರವಾಗಿ,—ಖೊಳ್ಳೆಂದು ಕೋಣೆಯ ಹೊರಗಿನಿಂದ ರಂಗೂತಾಯಿಯವರ ನಗೆ ಬಂದಿತು. ಅಲ್ಲಿ ನಿಂತುಕೊಂಡು ಮೋಜನ್ನೆಲ್ಲ ಅವರು ನೋಡುತ್ತಿದ್ದರು. ಪ್ರಮೀಲೆಗೂ ಬಾಯಿತುಂಬ ನಗೆ ಬಂದಿತ್ತು. ಅತಿ ಪ್ರಯಾಸದಿಂದ ನಗೆಯನ್ನು ಬಿಗಿಹಿಡಿದು ಕಪ್ಪನ್ನು ಮೋಡಕರೆದುರಿಗಿಟ್ಟು ಆಕೆಯು ಅಡಿಗೆಮನೆಯೊಳಕ್ಕೆ ಓಡಿದಳು.

ಮೋಡಕರಿಗೆ ದಿಗ್ಭ್ರಮೆಯಾಗಿತ್ತು. ಚಹವನ್ನು ಕುಡಿಯುತ್ತ, ರಂಗೂಬಾಯರು ಹೇಳಿದ ಎಲ್ಲ ಮಾತುಗಳನ್ನು ಕೇಳಿದಾಗ ಅವರಿಗೆ ಅರ್ಥವಾಯಿತು. ಉಳಿದದ್ದೇನನ್ನೂ ರಂಗೂತಾಯಿಯವರು ಹೇಳಿರಲಿಲ್ಲ. ಖಾಸ್

ಗಾಂವಿಯ ದೇಶಮುಖರು ವಿಷ್ಣುನಿಗೆ ಮಗಳನ್ನು ಕೊಡಬೇಕೆಂದು ಮಾಡಿದ್ದಾರೆ; ಒಬ್ಬಳೇ ಮಗಳು; ಅವರ ಎಲ್ಲ ಉತ್ಪನ್ನಿಗೆ ಬಾಧ್ಯಸ್ಥಳು; ಜು ಬಿ ಏ. ದಲ್ಲಿ ಇದ್ದಾಳೆ; ನಾವು ನೋಡಲೆಂದು ನಮ್ಮ ಮನೆಗೆ ಕಳಿಸಿದ್ದಾರೆ: ಇತ್ಯಾದಿ, ಇತ್ಯಾದಿ.

"ಅವರಿಗೆ ನಮ್ಮ ಮನೆ ಹೇಗೆ ಗೊತ್ತಾಯಿತು?" ಎಂದು ಮೋಡಕರು ಕೇಳಿದರು.

"ಏಕೆ ? ಗೊತ್ತಾಗದೆ ಏನು? ಪುಣೆಯಲ್ಲಿ ನೀವು ಅಷ್ಟು ಅಪ್ರಸಿದ್ಧರೋ ಏನು?" ಎಂದು ರಂಗೂಬಾಯರು ಗರ್ಜಿಸಿದರು.

ಇಂಥ ಗರ್ಜನೆಗಳಾದವೆಂದರೆ ಮೋಡಕರ ಬಾಯಿಂದ ಉತ್ತರವೇ ಹೊರಡುತ್ತಿರಲಿಲ್ಲ. ಸುಮ್ಮನಾಗಿ "ದೇಶಮುಖರೆಲ್ಲಿದ್ದಾರೆ?" ಎಂದು ಅವರು ಕೇಳಿದರು.

"ಇದು ಬರಿ ವಧೂಪರೀಕ್ಷೆ ಹುಡಿಗೆ ಪಾಸಾದರೆ ಮುಂದೆ ಮಾತು. ವರೋಪಚಾರದ ಮಾತಿಗೆಲ್ಲ ತಂದೆ ಬರದೆ ಎಲ್ಲಿ ಹೋಗುತ್ತಾರೆ?" ಎಂದು ರಂಗೂಬಾಯರು ನಕ್ಕರು.

"ವಿಷ್ಣು ಹುಡಿಗಿಯನ್ನು ನೋಡಿರುವನೆ?" ಎಂದು ಮೋಡಕರು ಕೇಳಿದರು.

"ನೀವಂತೂ ತೀರಿಯೇ ಹೋಯಿತು! ದಿನ ಬೆಳಗಾದರೆ ಒಂದೇ ಕ್ಲಾಸಿನಲ್ಲಿ! ಅಂದಮೇಲೆ ನೋಡದೆ ಏನು ಮಾಡಿಯಾನು?" ಎಂದು ರಂಗೂಬಾಯರು ನಕ್ಕರು. ಆಮೇಲೆ ಮೋಡಕರ ಕಿವಿಯಲ್ಲಿ: "ನೋಡಿದನೆಂದೇ ಮಾತು ಇಲ್ಲಿಯ ವರೆಗೆ ಬಂದಿದೆ. ಇದು ಪ್ರೇಮವಿವಾಹವಿದೆ, ಪ್ರೇಮ ವಿವಾಹ!" ಎಂದು ಉಸುರಿದರು.

ಪ್ರೇಮವಿವಾಹವೆಂದೊಡನೆ ಮೋಡಕರ ಕಣ್ಣು ಅಗಲವಾದವು ಆದರೆ ಮರುಕ್ಷಣಕ್ಕೆ ಅವು ಮತ್ತೆ ಮೊದಲಿನ ಆಕಾರವನ್ನು ತಳೆದವು ಪ್ರೇಮ ವಿವಾಹವಿರಲಿ, ಏನೇ ಇರಲಿ, ಇದರಲ್ಲಿ ವಿದ್ಯೆ-ಬುದ್ಧಿ-ಸಂಪತ್ತು,—ಎಲ್ಲವೂ ಇದೆಯಲ್ಲ? ಇದಕ್ಕೂ ಹೆಚ್ಚಿನದೇನು ಬೇಕು? ಒಳ್ಳೆಯ ಮನೆತನ, ಒಳ್ಳೆಯ ಹೆಣ್ಣು, ಹೊಸ ರೀತಿ, ಹೊಸ ಮಾತು,—ಎಲ್ಲವೂ ಮೋಡಕರ ಮನಸ್ಸಿಗೆ ಬಂತು. ಇನ್ನು ದೇಶಮುಖರು ಬಂದ ಮೇಲೆ ಇದು ಹೀಗಿರುವದು

ನಿಜವೆಂದು ಮನಗಾಣುವದೊಂದುಳಿದಿತ್ತು. "ಹುಡಿಗೆ ಅಡ್ಡಿ ಇಲ್ಲ. ತಂದೆ ಬರಲಿ" ಎಂದು ಮೋಡಕರು ಅಪ್ಪಣೆ ಕೊಡಸಿದರು.

ಕೇಶವರಾಯರಿಗೆ ದುಡ್ಡು ಬೇಕಾಗಿರಲಿಲ್ಲ; ಉನ್ನತ ಪದವಿಗೇರಬಲ್ಲ ಯೋಗ್ಯತೆಯುಳ್ಳ ಅಳಿಯ ಬೇಕಾಗಿತ್ತು. ಇಂಥ ಅಳಿಯನನ್ನು ಪಾಟಣಕರನಲ್ಲಿ ಕಂಡದ್ದರಿಂದ ಸಂಬಂಧಕ್ಕೆ ಸಂತೋಷದಿಂದ ಅವರು ಒಪ್ಪಿಕೊಂಡಿದ್ದರು ಮೋಡಕರು ತಮ್ಮ ಬೀಗನು ಐ ಸಿ ಎಸ್. ಆಗುವದು ನಿಸರ್ಗಸಿದ್ಧವೆಂದು ನಿಶ್ಚಯಿಸಿದ್ದರು. ಮನೆತನ, ಗೌರವ, ದುಡ್ಡು,—ಇವು ಅವರಿಗೆ ಬೇಕಾಗಿದ್ದವು ಪ್ರಮಿಲೆಯ ಸಂಬಂಧದಲ್ಲಿ ಇವೆಲ್ಲವನ್ನೂ ಅವರು ಕಂಡಿದ್ದರು. ಅಂತೇ ಮೋಡಕ—ಕೇಶವರಾಯರು ಭೆಟ್ಟಿಯಾಗುವದೊಂದು ಈಗ ಉಳಿದಿತ್ತು. ವಿಷ್ಣುನ ಅಣ್ಣನ ಒಪ್ಪಿಗೆಯನ್ನು ಪಡೆಯುವ ಪ್ರಶ್ನೆಯೇ ಇರಲಿಲ್ಲ. ಮೋಡಕರು ವಿಷ್ಣುನನ್ನು ಈಗಾಗಲೆ ತಮ್ಮ ಮಗನಂತೆ ಕಾಣುತ್ತಿದ್ದರು. ಇದರಿಂದ ತನಗೇ ಕ್ಷೇಮವೆಂದು ಆ ಅಣ್ಣ ಸುಮ್ಮನಿದ್ದ. ಲಗ್ನವು ಗೊತ್ತಾದ ಮೇಲೆ ಅಣ್ಣನಿಗೆ ತಿಳಿಸಿದರೆ ಸಾಕಾಗಿತ್ತು.

ಮುಂದೆ ಒಂದೆರಡು ದಿನಗಳ ಮೇಲೆ ಕೇಶವರಾಯರು ಬಂದು ಭೆಟ್ಟಿಯಾದಾಗ ಮೋಡಕರು ಎಲ್ಲ ವಿಷಯಗಳನ್ನು ಕೂಲಂಕಷವಾಗಿ ಚರ್ಚಿಸಿದರು. ಇಷ್ಟರಲ್ಲಿ ಅವರು ಕೇಶವರಾಯರ ಬಗ್ಗೆ ತಮ್ಮ ಪರಿಚಿತರಿಂದ ಮಾಹಿತಿ ದೊರೆಕಿಸಿದ್ದರು. ಅವರು ಮೊಗ್ಗಾವಿಯ ಗಣಪತರಾಯರ ಸ್ನೇಹಿತರೆಂದು ತಿಳಿದಾಗಂತೂ ಮೋಡಕರು ಹುರುಪುಗೊಂಡರು. ಯಥಾಪ್ರಕಾರ ಒಂದು ಉದ್ದ ಪತ್ರವು ಮೋಡಕರಿಂದ ಗಣಪತರಾಯರಿಗೆ ಹೋಯಿತು. ಗಣಪತರಾಯರಿಂದ ಅದಕ್ಕೂ ಉದ್ದವಾದ ಪತ್ರವು ಉತ್ತರರೂಪವಾಗಿ ಬಂದಿತು ಕೇಶವರಾಯರು ತಮ್ಮ ಮಾನ್ಯ ಸ್ನೇಹಿತರೆಂದು ಅವರು ತಿಳಿಸಿದ್ದಲ್ಲದೆ ಅವರಂತಹ ಸಜ್ಜನ ಶ್ರೀಮಂತರು ಸಿಗುವದು ವಿರಳವೆಂದು ಅವರು ಬರೆದಿದ್ದರು. ಎಲ್ಲದರ ನಿಷ್ಕರ್ಷೆಯಾದ ಮೇಲೆ ವಾಗ್‌ನಿಶ್ಚಯಕ್ಕೆಂದು ಶುಭದಿನವೊಂದನ್ನು ನೋಡಿ ಗೊತ್ತುಪಡಿಸಲಾಯಿತು.

ವಾಗ್‌ನಿಶ್ಚಯದ ಸಮಯಕ್ಕೆ ಮೊಗ್ಗಾವಿಯಿಂದ ಗಣಪತರಾಯರು ಬರುವಹಾಗಿರಲಿಲ್ಲ. ಹಾಗೆ ಬರುವ ಆವಶ್ಯಕತೆಯೂ ಇರಲಿಲ್ಲ. ಮದುವೆಯನ್ನು ತಪ್ಪಿಸಿದರೆ ಮಾತ್ರ ಕ್ಷಮಿಸುವದು ಸಾಧ್ಯವಿಲ್ಲವೆಂದು ಮೋಡಕರು

ತಿಳಿಸಿದ್ದರು. ಗಣಪತರಾಯರ ಸ್ನೇಹಿತರಿಂದು ಆ ಸಮಯಕ್ಕೆ ಮೋಡಕರು ದೇಸಾಯರನ್ನು ಬರಮಾಡಿಕೊಂಡಿದ್ದರು.

ಮೋಡಕರ ಕೋಣೆಯಲ್ಲಿ ಒಬ್ಬ ವೈದಿಕಬ್ರಾಹ್ಮಣ, ಮೋಡಕರು ಕೇಶವರಾಯರು, ದೇಸಾಯರು,—ಹೀಗೆ ಒಂದು ರವಿವಾರ ಮುಂಜಾನೆ ಸಭೆ ಕೂಡಿತು ವರದಕ್ಷಿಣೆ, ವರೋಪಚಾರ,—ಯಾವ ವಿಷಯದಲ್ಲಿಯೂ ಮೋಡಕರು ಬಿಗಿ ಹಿಡಿಯಲಿಲ್ಲ ಆಸ್ತಿಯೆಲ್ಲ ನಾಳೆ ವಿಷ್ಣುನದಾಗುವದೆಂದ ಮೇಲೆ ಇನ್ನೇನು ಬೇಕು? ಮೇಲಾಗಿ ಕೇಶವರಾಯರೂ ಎಲ್ಲ ವಿಷಯಗಳಲ್ಲಿ 'ದೇಶಮುಖ' ರಂತೆ ನಡೆದರು. ಮೋಡಕರ ಎಣಿಕೆ ಮೀರಿ ಅವರ ಅಂಕಿ ಬಿದ್ದವು ಮೇ ತಿಂಗಳಲ್ಲಿ ಮದುವೆಯನ್ನು ಮಾಡಬೇಕೆಂದು ಗೊತ್ತಾಯಿತು.

ಮೋಡಕರ ಆತ್ಮಪೌರುಷಕ್ಕೆ ದೇಸಾಯರ ಸನ್ನಿಧಿಯು ಪುಟ ಕೊಟ್ಟಿತು. "ನೋಡ್ರಿ, ದೇಸಾಯಿ ಸಾಹೇಬ್, ನಮ್ಮ ಮೋಹುಣ್ಯಾ ನಮಗ ಸಾಕ್ಷಾತ್ ಮುಲಗಾ ಇದ್ದಾಂಗ! ದೇವರು ನಮಗ ಮಕ್ಕಳನ್ನು ಕೊಡಲಿಲ್ಲ. ಪಣ್ ಡೋಕೆವಾನ್ ಮೋಹಣ್ಯಾನ್ನ ಕೊಟ್ಟ! ಇವನಂಥಾ ಬುದ್ಧಿವಾನ್ ಹುಡುಗ ಸಬಂದ ಕಾಲೇಜದಾಗ ಇಲ್ಲ, ದೇಸಾಯಿ ಸಾಹೇಬ್! ಸಬಂದ ಕಾಲೇಜದಾಗ! ಅರೇರೆ! ಮೀ ವಿಸರಲೋ! ನರಹರಿ ಒಬ್ಬಾತ ಹಾನ! ನರಹರಿಗೆ ನಿಮ್ಮ ಮಗಳನ್ನ ಜುಳಾಯಿಸತೀರಂತ. ಹೌದೇನು ದೇಸಾಯಿ ಸಾಹೇಬ್? ನಮ್ಮ ವಿಷ್ಣು ಹೇಳತಿದ್ದ!" ಎಂದರು ಮೋಡಕರು.

"ಹೌದು." ದೇಸಾಯರು ವಿನಯದಿಂದ ಹೇಳಿದರು.

"ಯಾರು? ನರಹರಿ ಮುನವಳ್ಳಿ ಏನು? ಖಾಸ್‌ಗಾಂವಿಗೆ ಅವರು ಬಂದಿದ್ದರು ನಮ್ಮದೆಲ್ಲಾ ಅವರಿಗೆ ಪೂರ್ಣ ಗೊತ್ತು. ಬಹಳ ಒಳ್ಳೆಯ ಹುಡುಗ!" ಎಂದು ಕೇಶವರಾಯರು ಸಂಭಾಷಣೆಯಲ್ಲಿ ಭಾಗವಹಿಸಿದರು

"ಹೌದು. ಗಣಪತರಾಯರು ಹೇಳುತ್ತಿದ್ದರು" ಎಂದು ದೇಸಾಯರು ಕೇಶವರಾಯರನ್ನು ಸಂಬೋಧಿಸಿದರು.

ಇದಾಗುವವರೆಗೆ ಮಾತು ಬಿಗಿ ಹಿಡಿದಿದ್ದ ಮೋಡಕರು ಮುಂದೆ ಸಾಗಿದರು: "ಓಹೋ! ಅಲಬತ್! ನಮ್ಮ ವಿಷ್ಣು, ನಿಮ್ಮ ನರಹರಿ; ಇವರಿಂದ ಈ ಕಾಲೇಜಿನ ಇತಿಹಾಸ! ಟಿಳಕ್-ಗೋಖಲೆ ಇದ್ದಾಂಗ!"

"ದೇಶಮುಖರಿಗೆ ಒಬ್ಬಾಕಿ ಮಗಳು. ನಿಮಗ ಪುತ್ರಸಮಾನ ಬೀಗ. ಒಳ್ಳೇ ಶರೀರಸಂಬಂಧ ಇದು!" ಎಂದು ದೇಸಾಯರು ಮಾತು ತಿರುಗಿಸಲು ಹವಣಿಸಿದರು.

ಆದರೆ ಮೋಡಕರು ಕೇಳುವರೆ? "ನಾಳೆ ವಿಷ್ಣು ಬಿ. ಏ. ಆದ ಮ್ಯಾಲ ವಿಲಾಯತಿಗೆ ಹೋಗಲಿಕ್ಕೆ ಪೈಸೆ ಗೋಳ್ಯಾಯಿ.ಸಿ ಇಟ್ಟೇನಿ ಬ್ಯಾಂಕಿನಾಗ, ದೇಸಾಯಿ ಸಾಹೇಬ್! ಹೋದ ಝಟಕ್ಕಿಗೆ ಐ ಸಿ. ಎಸ್ ಪಾಸು ಆಗೋ ಹುಡ.ಗಾ ಅಂತ ರ‍್ಯಾಂಗ್ಲರ್ ಪರಾಂಜಪೆ ಶಿಫಾರಸು ಮಾಡ್ಯಾರ! ಕಲೆಕ್ಟರ್ ಆಗೋ ತಲಿ ಆದಽ ಅದು, ಕಲೆಕ್ಟರ್ ಆಗೋದು!" ಎಂದು ಮತ್ತೆ ಅವರು ತಮ್ಮ ವಿಮಾನ ಹಾರಿಬಿಟ್ಟರು. ಇಲ್ಲಿ ಮಾತು ಮರಾಠಿಯಲ್ಲಿಯೇ ಆಗುತ್ತಿದ್ದವು. ದೇಸಾಯರೂ ಮರಾಠಿಯನ್ನು ಅನಾಯಾಸವಾಗಿ ಮಾತಾಡುತ್ತಿದ್ದರು ಆದರೆ ದೇಸಾಯರನ್ನು ನೋಡಿದೊಡನೆ ಮೋಡಕರ ಸತ್ವಶಾಲಿ ಕನ್ನಡದ ಸ್ಫೂರ್ತಿಯೆಲ್ಲ ಉಕ್ಕಿ ಬರುತ್ತಿತ್ತು.

"ನಿಮ್ಮ ಮಗಳು ಒಮ್ಮೆ ನಮ್ಮ ಮನೆಗೆ ಬಂದಿದ್ದಳು ಬಹಳ ಬುದ್ಧಿವಂತೆಯೆಂದು ನನ್ನ ಮಗಳು ಕುಸುಮಾ ಹೇಳುತ್ತಿದ್ದಳು. ಜ್ಯೂನಿಯರ್ ಬಿ ಏ ದಲ್ಲಿ ಇದ್ದಾಳಂತೆ, ಕುದುರೆ ಹತ್ತಲು ಬರುತ್ತದಂತೆ........" ಎಂದು ಕೇಶವರಾಯರಿಗೆ ದೇಸಾಯರು ಹೇಳುತ್ತಿದ್ದರು.

"ಹೌದು. ಮತ್ತ ಕಲೆಕ್ಟರನ ಹೇಣತಿ ಆಗೋ ಹುಡಗೀಗೆ ಘೋಡಾ ಚಢಾಯಿಸಲಿಕ್ಕೆ ಬರದಿದ್ದರ ಮತ್ ಯಾರಿಗೆ ಬರಬೇಕು, ದೇಸಾಯಿ ಸಾಹೇಬ್!" ಎಂದು ಮೋಡಕರು ಆಗ ನಡುವೆ ಬಾಯಿಹಾಕಿದರು.

ಮೋಡಕರ ವೈಚಿತ್ರ್ಯವೆಲ್ಲ ಕೇಶವರಾಯರಿಗೆ ವಿದಿತವಾಯಿತು ಆದರೆ ಅವರನ್ನು ತೆಗೆದುಕೊಂಡು ಏನು ಮಾಡುವದು? ಪಾಟಣಕರನೊಂದಿಗೆ ಅವರ ಸಂಬಂಧ. ಅಲ್ಲಲ್ಲಿ ನಗುತ್ತ ಮೋಡಕರ ಮಾತನ್ನು ಕೇಶವರಾಯರು ಕೇಳುತ್ತಿದ್ದರು.

ಅಂತೂ ಒಮ್ಮೆ ವಾಗ್ದಾನವು ಮುಗಿದಿತ್ತು. ಪ್ರಮಿಲೆ-ಪಾಟಣಕರರು ಈಗ 'ವಾಗ್ದತ್ತ'ರಾದರು.

---

ಪ್ರಕರಣ ೬೫

## ಶೀನೂನ ದೈವನಾದ

ಕುಸುಮಾನೊಡನೆ ಮಾತನಾಡಿದಂದಿನಿಂದ ಶೀನೂನ ದಿನಚರ್ಯೆಯಲ್ಲಿಯೂ ಮುಖಚರ್ಯೆಯಲ್ಲಿಯೂ ಕೆಲವು ಸೂಕ್ಷ್ಮ ಬದಲಾವಣೆಗಳಾಗಿದ್ದವು ಯಾವಾಗಲೂ ಉಲ್ಲಸಿತ ವೃತ್ತಿಯುವನಾದ ಅವನು ಈಗ ದಿವಸಕ್ಕೊಮ್ಮೆಯಾದರೂ ನಗುತ್ತಿದ್ದನೋ ಇಲ್ಲೋ! ಏನು ತಪ್ಪಿಸಿದರೂ ಶೀನು ಟೆನಿಸ್ ಆಟವನ್ನು ತಪ್ಪಿಸುತ್ತಿರಲಿಲ್ಲ ಚ್ಯಾಂಪಿಯನ್ ಶೀನು, ಆಟಗಾರ ಶೀನು,—ಶೀನು ಇರದಿದ್ದರೆ ಕಾಲೇಜಿನ ಟೆನಿಸ್ ಕೋರ್ಟಿಗೆ ಜೀವಕಳೆಯೇ ಇರುತ್ತಿರಲಿಲ್ಲ. ಆದರೆ ಅನೇಕ ದಿನಗಳ ವರೆಗೆ ಶೀನು ಟೆನಿಸ್ ಕೋರ್ಟಿನ ಮೇಲೆ ಕಾಣಿಸಲಿಲ್ಲ. ಅವನ ಟೆನಿಸ್ ಸ್ನೇಹಿತರಿಗೆ ಇದೊಂದು ದಿಗಿಲು ಬಿತ್ತು.

ಇದೇ ಸುಮಾರಿಗೆ ನರಹರಿ-ಪಾಟಣಕರರು ತಮ್ಮ ಒಳತೋಟಿಯಲ್ಲಿಯೇ ಸಿಕ್ಕ ಕಾರಣ ಶೀನು ಸ್ತಿಮಿತನೆಂದು ಗೊತ್ತಾದರೂ ಅಸಹಾಯರಾಗಿ ಸುಮ್ಮನಿದ್ದರು.

ಕುಸುಮಾನನ್ನು ಭೆಟ್ಟಿಯಾದಂದಿನಿಂದ ಅವನ ಒಳಗಂಟಲು ಒಣಗಿತ್ತಷ್ಟೆ. ತಿರುಗಿ ಅವನು ದೇಸಾಯರ ಮನೆಗೆ ಹೋಗಿದ್ದಿಲ್ಲ. ಅಲ್ಲಲ್ಲಿ ಭೆಟ್ಟಿಯಾದಾಗ ದೇಸಾಯರು ಮನೆಗೆ ಬರಬೇಕೆಂದು ಅನೇಕ ಸಲ ಅವನಿಗೆ ದುಂಬಾಲು ಬಿದ್ದು ಹೇಳಿದ್ದರು. ಅದು ಅವನ ಕರ್ತವ್ಯವೆಂದು ಸಹ ಅವರು ಶೀನೂನನ್ನು ಎಚ್ಚರಿಸಿದ್ದರು. ಆದರೆ ಶೀನು ತನ್ನ ಸಂಕಲ್ಪದಂತೆ ನಡೆದ. ಚಾಚೂ ತಪ್ಪಲಿಲ್ಲ.

ಕುಸುಮಾ ಅವನ ಕ್ಷಿತಿಜದಿಂದ ಅಸ್ತಂಗತಳಾದ ಮೇಲೆ ಜೀವನವೇ ಅವನ ದೃಷ್ಟಿಯಲ್ಲಿ ಅರ್ಥಹೀನವಾಗಿತ್ತು. ಕುಸುಮಾ ಪೂರ್ಣವಾಗಿ ಅಸ್ತವಾಗಿದ್ದಿಲ್ಲ. ಅವನ ಕ್ಷಿತಿಜದ ಮೇಲೆ ವಸಿಷ್ಠನಂತೆ ಹೊಳೆಯುವ ನರಹರಿಯ ಜೊತೆಗೆ ಅರುಂಧತಿಯಂತೆ ಮಿನುಗುತ್ತಿದ್ದಳು. ಆದರೆ ಆಕೆ ವಸಿಷ್ಠನ ಅರುಂಧತಿ ಏಕಾಗಬೇಕಿತ್ತು. ವಸಿಷ್ಠನಿಗೆ ತನ್ನ ಅಂತರಂಗದಲ್ಲಿಯೇ ಸುಖ

ವನ್ನು ಕಂಡುಕೊಳ್ಳಲು ಅನೇಕ ಸೆಲೆಗಳಿದ್ದವು. ಆದರೆ ಶೀನೂನಿಗೆ? ಅವನನ್ನು ಊರ್ಧ್ವಮುಖವಾಗಿ ಮಾಡಬಲ್ಲ ಒಂದೇ ಶಕ್ತಿಯೆಂದರೆ,—ನಕ್ಷತ್ರದಂತೆ ಹೊಳೆಯುವ ಕುಸುಮಾ! ತಾನು ಜೀವನದಲ್ಲಿ ವಿಲಾಸಿ; ಫಲ ಭಾರವನ್ನು ತಳೆದ ಬಳ್ಳಿಯಂತೆ ನೆಲದ ಮೇಲೆಲ್ಲ ಹರಹಿಕೊಂಡಿದ್ದ. ಕುಸುಮಾ ನೆರವಾಗಿದ್ದರೆ ಅವನು ಊರ್ಧ್ವಾರೋಹಣದ ವಿಚಾರವನ್ನು ಮಾಡಬಹು ದಾಗಿತ್ತು. ಆದರೆ ಈಗ ಅವನ ಆಕಾಂಕ್ಷೆಗಳಿಗೆ ಗುರಿಯೇ ಇಲ್ಲ. ಯಾರ ಸಲುವಾಗಿ ಈ ಪ್ರಗತಿ? ಎಲ್ಲರಂತೆ ಇದ್ದು ಒಂದು ದಿನ ಎಲ್ಲರಂತೆ ಮುಗಿದು ಮುಂದೆ ವಿಶ್ವದ ಗರ್ಭದಲ್ಲಿ ಲೀನನಾಗಿ ಹೋದರಾಯಿತು. ಆದರೆ ಕುಸುಮಾ........ಕುಸುಮಾ ತನ್ನ ಕುಸುಮಾ ಆಗಿ ಲಭಿಸಿದ್ದರೆ!

ಹೀಗೆ ವಿಚಾರಮಾಡುವದು ಸ್ವಾರ್ಥವೆಂದು ಒಮ್ಮೊಮ್ಮೆ ಶೀನು ಎಂದುಕೊಂಡ. ನಕ್ಷತ್ರದಂತೆ ಇನ್ನೊಬ್ಬರ ನಾರಿಯ ಮೇಲೆ ಬೆಳಕು ಬೀರುವದೊಂದೇ ಕುಸುಮಾನ ಕೆಲಸವೇ? ಆ ನಕ್ಷತ್ರ ತನ್ನ ಆಕಾಶಪಥವನ್ನು ತುಳಿಯಬೇಡವೆ? ತನ್ನ ಮಾರ್ಗದಲ್ಲಿ ದೊರೆಯುವ ಪಥಿಕನನ್ನು ಹುಡುಕಿ ಬೆರೆತು ಇನ್ನಿಷ್ಟು ತೇಜಃಪುಂಜವಾಗಬೇಡವೆ? ಸ್ತ್ರೀಯೆಂದರೆ ಬರಿ ಹೂವು, ನಕ್ಷತ್ರ, ಎಂದು ತಿಳಿಯುವದು ಮಂಕುತನವೆಂದು ಶೀನು ನೆನೆಸಿದ. ಸ್ತ್ರೀಯೂ ಒಂದು ಜೀವ. ಆ ಜೀವ ತನ್ನ ನೆಳಲು–ಬೆಳಕನ್ನು ಕಂಡುಕೊಳ್ಳಬೇಕು; ತನ್ನ ಹಿಗ್ಗು–ತಗ್ಗುಗಳನ್ನು ಅರಿಯಬೇಕಲ್ಲವೆ?

ನರಹರಿಯ ವಿಷಯದಲ್ಲಿ ಮಾತ್ರ ತಾನು ಅಪರಾಧಿಯೆಂಬುವ ನೋವು ಶೀನೂನನ್ನು ಮೇಲಿಂದ ಮೇಲೆ ಚುಚ್ಚುತ್ತಿತ್ತು. ತನ್ನ ಅಂತರಂಗವನ್ನು ನರಹರಿಗೆ ತಾನು ತೆರೆದು ತೋರಿಸಬೇಕಿತ್ತು. ಕುಸುಮಾ ನರಹರಿಯಲ್ಲಿ ಅನುರಕ್ತಳೆಂದು ತನಗೆ ಹೊಳೆಯದಿದ್ದರೂ ನರಹರಿಯು ಅನುರಕ್ತನಾಗಿರ ಬಹುದೆಂಬ ಊಹೆಯು ಅವನ ಮನದೆದುರು ಹೊಳೆದು ಹೋಗಿತ್ತು. ಜನ್ಮಾಂತರದ ತನ್ನ ಪಿಪಾಸೆಗೆ ಹೆದರಿ ಶೀನು ನರಹರಿಯನ್ನು ಕೇಳುವ ಸಾಹಸ ಮಾಡಿದ್ದಿಲ್ಲ ಆದರೆ ಕೇಳುವದು ಅವನ ಕರ್ತವ್ಯವಾಗಿತ್ತಲ್ಲವೆ? ಕರ್ತವ್ಯ ಚ್ಯುತನಾಗಿಯೂ ತಾನು ನರಹರಿಯ ಗೆಳೆಯನೆಂದುಕೊಳ್ಳುವದು ಹೇಗೆ?

ಈ ಎಲ್ಲ ವಿಚಾರಗಳಲ್ಲಿ ಶೀನೂನಿಗೆ ನಿದ್ದೆಯೇ ಹತ್ತುತ್ತಿರಲಿಲ್ಲ. ಬೆಳ ಗಾಗುವವರೆಗೆ ಹಾಸಿಗೆಯ ಮೇಲೆ ಸಿಗರೇಟು ಸೇದುತ್ತ ಬಿದ್ದುಕೊಳ್ಳುತ್ತಿದ್ದ.

ಬೆಳಗಿನಲ್ಲಿ ಅವನಿಗೆ ತುಸು ಜಂಪು ಹತ್ತುತ್ತಿತ್ತು. ತಡವಾಗಿ ಹೇಳುತ್ತಿದ್ದ. ಹೀಗಾಗಿ ಮುಂಜಾನೆ ನರಹರಿ-ಶೀನರು ಒಂದು ಕಡೆಗೆ ಸೇರಿ ಚಹ ಕುಡಿಯುವ ಕಾರ್ಯಕ್ರಮವು ಸಹ ತಪ್ಪುತ್ತಿತ್ತು. ನರಹರಿಯು ತನ್ನ ಚಹವನ್ನು ತಾನೇ ಮಾಡಿಕೊಂಡು ಕುಡಿಯುತ್ತಿದ್ದ.

ಶೀನೂನಿಗೆ ವಿಚಿತ್ರವೆನಿಸಿದ್ದೆಂದರೆ,—ತನಗೆ ಜೀವನವು ಶೂನ್ಯವಾಗುತ್ತ ನಡೆದಾಗ ನರಹರಿಯ ಮುಖವು ಪ್ರಫುಲ್ಲವಾಗುತ್ತ ನಡೆದಿರುವದು. ಯಾವ ವಿಷಯವನ್ನೂ ತಿಳಿಯದ ಅವನಿಗೆ ಇದು ಅರ್ಥವಾಗಲಿಲ್ಲ ಅದರಿಂದ ಅವನ ವೇದನೆಯು ಮಾತ್ರ ಹೆಚ್ಚಾಯಿತು. ನರಹರಿಯು ತಪ್ಪಿಸಿಕೊಂಡ ಹೃದಯರೋಗವು ತನಗಂಟಿಕೊಂಡಂತೆ ಶೀನೂಗೆನಿಸಿತು. ಈ ದಾರುಣ ವೇದನೆಯನ್ನು ತಡೆಯದೆ ಅವನು ತೊಳಲಾಡಿದ. ಒಂದು ರಾತ್ರಿ ಎರಡು ಹೊಡೆಯಲು ಬಂದಿತ್ತು. ಶೀನೂನ ಕಣ್ಣಿಗೆ ಕಣ್ಣು ಹತ್ತಿರಲಿಲ್ಲ. ಹಾಗೆಯೇ ಕಣ್ಣುಬಿಡುತ್ತ ಮಲಗಿಕೊಂಡಿದ್ದ. ಅದೇ ವಿಚಾರವನ್ನು ಮಾಡಿ ಮಾಡಿ ಅವನ ಚಿತ್ತವು ಭ್ರಮೆಗೊಂಡಿತು. ಆ ಭ್ರಮೆಯ ಉನ್ಮಾದದಲ್ಲಿಯೇ ಶೀನು ಎದ್ದುಹೋಗಿ ಪಕ್ಕದಲ್ಲಿಯ ನರಹರಿಯ ಕೋಣೆಯ ಬಾಗಿಲು ಬಡಿದ. ಒಂದೆರಡು ಸಲ ಗಟ್ಟಿಯಾಗಿ ಸಪ್ಪಳ ಮಾಡಿದಾಗ ನರಹರಿಯು ನಿದ್ದೆಯಿಂದೆಚ್ಚತ್ತು 'ಯಾರು?' ಎಂದು ಮಲಗಿಕೊಂಡಲ್ಲಿಂದ ಕೇಳಿದ. 'ನಾನು, ಶೀನು!' ಎಂದು ಉತ್ತರ ಬಂತು. 'ಏಕೆ, ಶೀನು? ಈ ಅಪರಾತ್ರಿಯಲ್ಲಿ ಏಕೆ ಎಚ್ಚತ್ತಿದ್ದೀಯೆ?' ಎಂದು ಕೇಳುತ್ತ ದೀಪ ಹಚ್ಚಿ ನರಹರಿಯು ಬಾಗಿಲು ತೆರೆದ. ಶೀನೂನ ಮುಖವನ್ನು ನೋಡಿ ಅವನಿಗೆ ಗಾಬರಿಯಾಯಿತು. ಕೈಹಿಡಿದು ಅವನನ್ನು ಕರೆದುಕೊಂಡು ಹೋಗಿ, "ಏಕೆ, ಶೀನು? ಏನಾಯಿತು?" ಎಂದು ಪಲ್ಲಂಗದ ಮೇಲೆ ಕೂಡಿಸುತ್ತ ಮಾತನಾಡಿಸಿದ.

ಶೀನು ಉದ್ವಿಗ್ನನಾಗಿರಲಿಲ್ಲ ಶಾಂತನಾಗಿ ಹೇಳಿದ: "ನಿನ್ನೊಡನೆ ಮಾತನಾಡಲು ಬಂದಿದ್ದೇನೆ, ನರಹರಿ."

"ಈ ಅಪರಾತ್ರಿಯಲ್ಲೇಕೆ? ಅಂಥದೇನಾಗಿದೆ?" ಎಂದು ನರಹರಿ ಗಾಬರಿಯ ದನಿಯಲ್ಲಿ ಕೇಳಿದ

"ಅದು ನನ್ನ ತಪ್ಪು. ಈ ಮೊದಲೆ ನಾನು ಬಾಯಿ ಬಿಚ್ಚಬೇಕಾಗಿತ್ತು. ಈಗ ಹೃದಯವು ತಳಮುಳಿಸಿ ತಾನೆ ಹೊರಚೆಲ್ಲುತ್ತಿದೆ." ಎಂದ ಶೀನು.

ನರಹರಿಯ ಬಾಯಿಂದ ಮಾತೇ ಹೊರಡಲಿಲ್ಲ. ಶೀನೂನ ಬದಿಗೆ ಪಲ್ಲಂಗದ ಮೇಲೆ ಕೂತು ಕೇಳತೊಡಗಿದ.

"ನನ್ನದು ತಪ್ಪಾಯಿತು, ನರಹರಿ ನಾನು ಆಕೆಯನ್ನು ಪ್ರೀತಿಸುವದಕ್ಕಿಂತ ಮೊದಲು ನಿನ್ನನ್ನು ಕೇಳಬೇಕಾಗಿತ್ತು." ಶೀನು ನುಡಿದ

"ಯಾರನ್ನು ?" ಪಕ್ಕಡಿಯಲ್ಲಿ ಹೃದಯವು ಒಂದೇ ಸಮನೆ ಬಡಿದುಕೊಳ್ಳುತ್ತಿರಲು ನರಹರಿಯೆಂದ.

"ಕುಸುಮಾ !" ಎಂದು ನುಡಿದವನೆ ಶೀನು ಬಿಕ್ಕಿಬಿಕ್ಕಿ ಅಳಹತ್ತಿದ. ಅವನ ಸಂಯಮವನ್ನು ಮೀರಿ ಹೃದಯವು ಈಗ ಉಕ್ಕಿಬಂದಿತ್ತು.

ನರಹರಿಗೆ ಏನು ಮಾಡಬೇಕೆಂಬುದು ತಿಳಿಯಲಿಲ್ಲ ತನ್ನ ಧೋತರದ ಚುಂಗಿನಿಂದ ಶೀನೂನ ಕಣ್ಣೊರಿಸುತ್ತ ಅವನನ್ನು ಸಂತವಿಸಲು ಪ್ರಯತ್ನಿಸಿದ

"ನೀನು ಆಕೆಯನ್ನು ಪ್ರೀತಿಸುವಿಯೆಂದು ಸಂಶಯ ಬಂದಿತ್ತು. ಅದನ್ನು ಕೇಳಿ ನಾನು ಸ್ಪಷ್ಟಗೊಳಿಸಲಿಲ್ಲ. ಕೊನೆಗೆ ಕುಸುಮಾನ ಬಾಯಿಂದ ಕೇಳಬೇಕಾಯಿತು " ಎಂದು ಮತ್ತೆ ಉಕ್ಕು ಇಳಿಯಲು ಶೀನು ಹೇಳಿದ.

"ಏನೆಂದು ?" ಎಂದ ನರಹರಿ. ಇದು ಇನ್ನೊಂದು ಕನಸೆಂದು ಅವನಿಗೆ ಭಾಸವಾಗಹತ್ತಿತ್ತು.

"ನನಗೆ ನಿನ್ನ ಸ್ನೇಹಿತನೆಂದು ಮಾತ್ರ ತಮ್ಮ ಮನೆಯಲ್ಲಿ ಸ್ವಾಗತವಿದೆಯೆಂದು" ಎಂದ ಶೀನು

ಎಂಥ ವಿಚಿತ್ರಸನ್ನಿವೇಶದಲ್ಲಿ ತಾನು ಮಾತಾಡುತ್ತಿದ್ದೇನೆಂಬುದರ ಅರಿವು ಈಗ ಶೀನೂನಿಗೆ ಸಹ ಉಂಟಾಯಿತು. ಅವನು ಸುಮ್ಮನಾದ. ನರಹರಿಯಂತೂ ಸ್ತಂಭಿತನಾಗಿ ಕುಳಿತಿದ್ದ.

"ಇದನ್ನು ಮೊದಲೇ ತಿಳಿದಿದ್ದರೆ ನನ್ನ ಹೃದಯವನ್ನು ಹೀಗೆ ನಾನು ಹರಿಬಿಡುತ್ತಿರಲಿಲ್ಲ, ನರಹರಿ! ನನ್ನನ್ನು ಕ್ಷಮಿಸು!" ಎಂದು ದನಿ ನಡುಗುತ್ತಿರಲು ಶೀನು ಹೇಳಿದ. ಬಳಿಕ "ನನ್ನ ದೈವವನ್ನು ನಾನು ಕಂಡುಕೊಳ್ಳುತ್ತೇನೆ, ನರಹರಿ! ನಿಮ್ಮಿಬ್ಬರ ಪುಣ್ಯ, ಭಾಗ್ಯ,—ಎಲ್ಲವೂ ನಿಮ್ಮನ್ನು ಕೂಡಿಸಿವೆ. ಅದರಲ್ಲಿ ನನಗೆ ಹೆಚ್ಚಿನ ಸಂತೋಷವಿದೆ" ಎಂದು ಅವನು ನಿರ್ವಿಕಾರವಾಗಿ ನುಡಿದ.

ನರಹರಿಯು ಕೆಲವು ಹೊತ್ತು ಸುಮ್ಮನಿದ್ದ. ಆಮೇಲೆ "ನಿರ್ಭಾಗ್ಯನಾದ ನನಗೆ ಕುಸುಮಾ ಒಬ್ಬಳೆ ಒಂದು ಭಾಗ್ಯ, ಶೀನು! ಅವಳಿಲ್ಲದೆ ನನ್ನ ಜೀವನಕ್ಕೆ ಅರ್ಥವಿಲ್ಲ." ಎಂದು ನರಹರಿಯು ಕರಗಿದ ಹೃದಯದಿಂದ ಹೇಳಿದ

ಒಬ್ಬ ಯೋಗಸ್ಥನಂತೆ ಶೀನೂನ ಮನಸ್ಸು ಈಗ ತಿಳಿಯಾಗಿತ್ತು. ಆಡದ ಮಾತಿನಿಂದ ಮನಸ್ಸು ಹಗುರಾಗಿತ್ತು. ನಿರಾಶೆಯನ್ನು ಧೈರ್ಯವಾಗಿ ಎದುರಿಸಿ ಜಯ ಹೊಂದಿದ್ದರಿಂದ ಒಂದು ಅನುಪಮವಾದ ಸಮಾಧಾನವು ಅಂತರಂಗದಲ್ಲಿ ನೆಲಸಿತ್ತು. "ಅನೇಕ ದಿನಗಳಿಂದ ಈ ಮಾತಿನ ಬಗ್ಗೆ ಮಾತಾಡುವದೆಂದು ನಾನು ಎಣಿಕೆ ಹಾಕಿದ್ದೆ. ಅದು ಈಗ ಸಾಧಿಸಿತು. ಪ್ರತ್ಯಕ್ಷ ಮಾತನಾಡುವ ಧೈರ್ಯವಿಲ್ಲದೆ ನಿನಗೆ ಕೊಡುವದೆಂದು ಒಂದು ಪತ್ರವನ್ನು ಸಹ ಬರೆದಿಟ್ಟಿದ್ದೆ. ಆದರೆ ಅದೂ ನನ್ನೆಡೆಗೆ ಹಾಗೆಯೇ ಉಳಿಯಿತು. ಈಗಾದರೂ ಅದನ್ನು ನಿನ್ನ ಕೈಯ್ಯಲ್ಲಿಡುತ್ತೇನೆ" ಎಂದು ಎದ್ದು ಶೀನು ಪತ್ರವನ್ನು ಹುಡುಕಾಡಹತ್ತಿದ.

ಅನೇಕ ವಾರಗಳ ವರೆಗೆ ಶೀನೂನ ಸೆಲ್ಫಿನ ಮೇಲೆ ಪುಸ್ತಕಗಳೂ ವಹಿಗಳೂ ಕಾಗದಗಳೂ ಅಸ್ತವ್ಯಸ್ತವಾಗಿ ಬಿದ್ದಿದ್ದವು. ಓರಣಪ್ರಿಯನಾದರೂ ಶೀನು ಎಂದಿಗೂ ತಾನೇ ಓರಣವನ್ನು ತನ್ನ ಜೀವಿತದಲ್ಲಿ ತಂದುಕೊಂಡವನಲ್ಲ. ಈ ಅವಧಿಯಲ್ಲಂತೂ ಇದ್ದುಬಿದ್ದ ಅಚ್ಚುಕಟ್ಟುತನವು ಮಾಯವಾಗಿತ್ತು. ಆ ಪತ್ರದ ಬದಲು ದಂತಹಣಿಗೆಯ ಪುಡಿಕೆಯೊಂದು ಶೀನೂನ ಕೈಗೆ ಸಿಕ್ಕಿತು. ಅದನ್ನು ಎತ್ತಿ ಹಿಡಿದು "ಇದು ನನ್ನ ವ್ಯವಸ್ಥಿತ ರೀತಿ ನೋಡು, ನರಹರಿ! ನಮ್ಮ ವೈನಿ—ಶ್ರೀಪಾದರಾಯನ ಹೆಂಡತಿ–ಪುಣೆಯಿಂದ ಒಂದು ದಂತಹಣಿಗೆಯನ್ನು ತರಲು ಹೇಳಿದ್ದರು. ಒಯ್ಯಬೇಕೆಂದು ಅದನ್ನು ಕೊಂಡಿಟ್ಟೆ,–ಇಲ್ಲಿಯೇ ಮರೆತುಬಿಟ್ಟೆ!" ಎಂದು ಅವನು ವಿಷಾದದ ನಗೆ ನಕ್ಕು ನುಡಿದ

ನರಹರಿಗೆ ಒಳಗಿಂದೊಳಗೇ ತನ್ನ ಅಪರಾಧದ ಕಲ್ಪನೆ ಬಂತು. ಆ ದಂತಹಣಿಗೆಯ ಮೇಲೆ ತಾನು ಎಷ್ಟೊಂದು ದಂತಕಥೆಗಳನ್ನು ಕಟ್ಟಿದ್ದೆನಲ್ಲ! ಶೀನೂನ ಬಗ್ಗೆ ಏನು ತಿಳಿದುಕೊಂಡೆ! ಕುಸುಮಾನ ಅಚಲತೆಯ ಬಗ್ಗೆ ಹೇಗೆ ಅವಿಶ್ವಾಸ ತಾಳಿದೆ! ಶೀನೂನ ದೊಡ್ಡಿತೆಯೆಲ್ಲಿ! ತನ್ನ ಸಣ್ಣ ಮನ

ಸ್ಸೆಲ್ಲಿ! ಎಂದು ಮನಸ್ಸಿನಲ್ಲಿಯೇ ಅವನು ಮಿಡುಕಿದ. ಆದರೆ ಬಹಿರಂಗವಾಗಿ "ಇರಲಿ ಬಿಡು ಆ ಪತ್ರ, ಶೀನು. ಹಿಂದುಗಡೆ ನೋಡೋಣವಂತೆ. ಮೊದಲು ನಿನ್ನ ಪ್ರಕೃತಿ ಸುಧಾರಿಸಲಿ. ನೀನು ಬಹಳ ಸೊರಗಿದ್ದೀಯೆ!" ಎಂದು ಅಂತಃಕರಣಪೂರ್ವಕವಾಗಿ ಹೇಳಿದ.

ನಿಜವಾಗಿ ಶೀನು ಬಹಳ ಸೊರಗಿದ್ದ; ಕಮರಿದ ಬಾಳೆಯೆಲೆಯ ಸುಳಿಯು ಹಾಗೆ ಒಣಗಿದ್ದ.

"ಅದೇನೂ ಇಲ್ಲ, ನರಹರಿ! ಈಗ ಮಾತನಾಡಿದ ಮೇಲೆ ನನಗೆ ಬಹಳ ಹಗುರೆನಿಸಿದೆ ಇನ್ನು ನೀನು ಮಲಗಿಕೋ. ನಾನೂ ಅಡ್ಡಾಗುತ್ತೇನೆ ಜಂಪು ಬಂದ ಹಾಗಾಗಿದೆ" ಎಂದು ಶೀನು ಎದ್ದು ನಿಂತ.

ಶೀನೂನಿಗೆ ಈಗ ನಿದ್ರೆಯೇ ವಿಹಿತವೆಂದು ನರಹರಿಯು ಅವನನ್ನು ಕೋಣೆಯ ವರೆಗೆ ಕಳಿಸಿ ಬಂದ. ಮುಂದೆ ತಸು ಹೊತ್ತಿನಲ್ಲಿಯೇ ಶೀನೂನಿಗೆ ಜಂಪು ಹತ್ತಿತು. ಮೆಲ್ಲಗೆ ಶೀನೂನ ಕೋಣೆಯ ಬಾಗಿಲಕ್ಕೆ ಕಿವಿಯಿಟ್ಟು ಶೀನು ಸಾವಕಾಶವಾಗಿ ಎಳೆಯುತ್ತಿದ್ದ ನಿದ್ರೆಯುಸಿರನ್ನು ನರಹರಿಯು ಕೇಳಿದ. ಆದರೆ ಅಲ್ಲಿಂದ ಅವನಿಗೇ ನಿದ್ರೆ ಬರಲಿಲ್ಲ ದೈವದ ನಿರ್ದಯೆಯು ಒಡೆದುಕಾಣುವ ಈ ವಿಚಿತ್ರ ಸನ್ನಿವೇಶ, ನೇಹ-ನಲುಮೆಗಳ ತಾಕಲಾಟ, ಶೀನೂನ ನಿರಾಶೆ, ಅವನ ದೊಡ್ಡಿತೆ, ತನ್ನ ಮನಸ್ಸು ಗ್ರಹಿಸಲಾರದಷ್ಟು ಆಳವಾದ ಕುಸುಮಾನ ನಲುಮೆ,—ಇವೆಲ್ಲ ಅವನ ಚಿದಾಕಾಶದಲ್ಲಿ ಸ್ವಚ್ಛಂದವಾಗಿ ಅಲೆಯತೊಡಗಿದವು.

ಮರುದಿನ ಸಂಜೆಗೆ ನರಹರಿಯು ದೇಸಾಯರ ಮನೆಗೆ ಹೋದಾಗ ಅವನು ಕುಸುಮಾನನ್ನು ಕೇಳಿದ: "ನೀನು ಒಂದು ಮಾತನ್ನು ನನ್ನಿಂದ ಬಚ್ಚಿಟ್ಟಿದ್ದೀ!"

"ಯಾವುದು?" ಎಂದಳು ಕುಸುಮಾ.

"ನನ್ನ ಸ್ನೇಹಿತನೆಂದು ಮಾತ್ರ ನಿಮ್ಮ ಮನೆಯಲ್ಲಿ ಸ್ವಾಗತವಿದೆಯೆಂದು ನೀನು ಒಬ್ಬರಿಗೆ ಹೇಳಿದ್ದು."

"ಆ ವಿಷಯವನ್ನು ನಿನಗೆ ಹೇಳಿದ್ದೇನಲ್ಲ! ಆ ಪ್ರಸಂಗವನ್ನು ಹೇಳುವ ಅವಶ್ಯಕತೆ ಬಂದಿರಲಿಲ್ಲ. ನಿನಗೆ ಯಾರು ಹೇಳಿದರು?" ಎಂದು ಕುಸುಮಾ ನಗುತ್ತ ಕೇಳಿದಳು.

“ ಶೀನೂ.” ಎಂದು ಕರುಣಾಪೂರಿತ ದೃಷ್ಟಿಯಿಂದ ನರಹರಿ ಹೇಳಿದ.

ನರಹರಿಯನ್ನು ನೇರವಾಗಿ ದಿಟ್ಟಿಸಿ ನೋಡಿ ಕುಸುಮಾ ಸುಮ್ಮನಿದ್ದಳು.

ಮುಂದೆ ಶೀನು-ನರಹರಿಯರ ವಸತಿಗೃಹದಲ್ಲಿಯ ಜೀವಿತವು ಮೊದಲಿನ ಸ್ನೇಹ-ಮಮತೆಯ ಮಟ್ಟಕ್ಕೆ ಬಂದು ನಿಂತಿತು. ಅವರ ಚಹ, ಊಟ, ಕಾಲೇಜು,—ಎಲ್ಲ ಮತ್ತೆ ಕೂಡಿಯೇ ನಡೆಯಿತು ಕುಸುಮಾನ ವಿಷಯದ ಮೇಲೆ ಅವರು ಇಳಬಿಟ್ಟಿದ್ದ ತೆರೆಯನ್ನು ಅಪ್ಪಿತಪ್ಪಿ ಸಹ ಅವರಿಬ್ಬರಲ್ಲಿಯಾರೂ ಎತ್ತಲಿಲ್ಲ.

ದಿನದ ಜೀವನದಲ್ಲಿ ಹೀಗೆ ಶೀನು ಆಸಕ್ತಿಯನ್ನು ವಹಿಸಿದಂತೆ ತೋರಿದರೂ ಅವನ ಹೃದಯದ ಪರದೇಶಿತನವು ಭೀಕರವಾಗಿತ್ತು. ಅದೊಂದು ಸಹರಾ ಅರಣ್ಯ. ಮಳಲನ್ನುಳಿದು ಮತ್ತೇನೂ ಅಲ್ಲಿ ಕಾಣದಾಗಿತ್ತು. ನರಹರಿಯೊಬ್ಬನೇ ನೀರಿನಂತೆ—ನೆಳಲಿನಂತೆ—ಅಲ್ಲಿ ಗೋಚರವಾಗುತ್ತಿದ್ದ. ಆದರೆ ಅವನೂ ಈಗ ಶೀನೂನನ್ನು ಒಮ್ಮೆ ಸೆಳೆದಿದ್ದ ಕನಸಿನ ಭಾಗವಾಗಿ ಹೋಗಿದ್ದ. ಅವನಿಂದ ಈ ಅನುತಾಪದಲ್ಲಿ ಬೇಕಾದ ಶಾಂತಿ ಸಿಗುವದು ಸಾಧ್ಯವಿರಲಿಲ್ಲ ಈ ಅರಣ್ಯದಲ್ಲಿ ಸಿಲುಕಿ ಶೀನು ವಿಲಿವಿಲಿ ಒದ್ದಾಡಿದ. ಕುಸುಮದಂತೆ ಕೋಮಲವಾದ ಅವನ ಹೃದಯ ಪಕಳೆ-ಪಕಳೆಯಾಗಿ ಉದುರಬಹುದೆಂಬ ಹೆದರಿಕೆಯು ಅವನಿಗಿದ್ದಿತು. ತಂದೆ, ತಾಯಿ, ಅಣ್ಣ, ಗೆಳೆಯ,-ಯಾರೂ ಇಲ್ಲಿ ಅವನಿಗೆ ನೆರವಾಗುವ ಆಸೆಯಿಲ್ಲ ಶೀನೂನೊಬ್ಬನೆ ಅದನ್ನು ಎದುರಿಸಬೇಕು

ಈಗೇನು ಮಾಡಬೇಕು? ಆತ್ಮನಾಶ—ಮದುವೆಗಳ ನಡುವೆ ಶೀನು ತೂಗಾಡಹತ್ತಿದ. ದೈವ ಕರೆದು ತಂದ ಹೆಣ್ಣಿನ ಕೈಹಿಡಿಯಬೇಕು ಅಪರಿಚಿತ ಹೃದಯವನ್ನು ಸ್ವಾಗತಿಸಬೇಕು. ಅಲ್ಲೇನಿದೆಯೋ ಹೇಗೆ ಹೇಳಬಹುದು? ಅಲ್ಲಿ ಸಪ್ತ ಸ್ವರ್ಗಗಳ ಸುಖವಿರಬಹುದು; ಇಲ್ಲವೆ ನರಕವೇ ಇರಬಹುದು. ಆದರೆ ಈಗ ಶೀನು ಅನುಭೋಗಿಸುತ್ತಿರುವದು ನರಕಯಾತನೆಯಲ್ಲದೆ ಮತ್ತೇನು? ಇದಕ್ಕಿಂತ ಆಳವಾದ ಸಮುದ್ರವಿರುವ ಸಂಭವವೇ ಇಲ್ಲ. ಇದೊಂದು ದೈವಪರೀಕ್ಷೆಯನ್ನು ಮಾಡಿಬಿಡಬೇಕೆಂದು ಶೀನೂನಿಗೆನಿಸಿತು.

ಅವನಿಗೆ ಈಗೊಂದು ವರ್ಷದೀದ ಅನೇಕ ಹೆಣ್ಣು ಬಂದು ಹೋಗಿದ್ದವು.

ಶೀನೂನೇ ತಾನು ಕಲಿಯುವದು ಮುಗಿಯುವವರೆಗೆ ಮದುವೆ ಬೇಡವೆಂದು ತಂದೆಯವರಿಗೆ ಹೇಳಿದ್ದ. "ಅದಕ್ಕೇನು, ಶೀನಣ್ಣ! ಮದುವಿ ಆಗಿಬಿಡು. ವರ್ಷಕ್ಕೊಂದೊಂದು ಪರೀಕ್ಷಾ ಪಾಸು ಆಗತೀದಿ ವರ್ಷಕ್ಕೊಂದೊಂದು ತೊಟ್ಟಿಲ ಕಟ್ಟತಾವ ಮನ್ಯಾಗ! ಎರಡೂ ಕೂಡೇ ನಡೀಲಿ!" ಎಂದು ಒಂದು ವರ್ಷದ ಹಿಂದೆ ಒಬ್ಬ ವರಾರ್ಥಿಯನ್ನು ಗಣಪತರಾಯರ ಕಡೆಗೆ ಕರೆದುಕೊಂಡು ಬಂದಿದ್ದ ಸುಬ್ಬಣಾಚಾರ್ಯರು ಉಪ್ಪಣೆಕೊಡಿಸಿದ್ದರು. ಅದಕ್ಕೆ ಶೀನು "ನೀವೇನು ವಿಶ್ವದ ಜ್ಞಾನಕೋಶೇನು, ಸುಬ್ಬಣಾಚಾರ? ಪ್ರತಿಯೊಂದು ವಿಷಯದಾಗ ನಿಮ್ಮ ಮೂರು ಆಕ್ಕಿಕಾಳು ಇರಲಿಕ್ಕೇಬೇಕು!" ಎಂದು ಅವರನ್ನು ವಿಡುಬಿಸಿದ್ದ. ಆದರೆ ಇವತ್ತು ಆ ಪ್ರಶ್ನೆಯೆದ್ದರೆ ತನ್ನ ನಿಶ್ಚಯವು ಬುಡಮೇಲಾದರೂ ಆಗಬಹುದೆಂದು ಶೀನೂನಿಗೆನಿಸಿತು ಗಣಪತರಾಯರು ಎಲ್ಲವನ್ನೂ ಶೀನೂನಿಗೆ ಬಿಟ್ಟುಕೊಟ್ಟಿದ್ದರು. ಅವನು ಹೇಳಿದಾಗ ಲಗ್ನ, ಹೇಳಿದವರೊಡನೆ ಲಗ್ನ; ಬರಿ ನಾಲ್ಕು ಹಿತವಚನಗಳನ್ನು ಹೇಳುವದು ತಮ್ಮ ಅಧಿಕಾರವೆಂದು ಅವರು ನಂಬಿದ್ದರು.

ಶೀನೂನ ಮನಃಸ್ಥಿತಿಯು ಹೀಗಿರುವಾಗ ಒಂದು ಸನ್ನಿವೇಶವು ತನ್ನಷ್ಟಕ್ಕೆ ತಾನೆ ರೂಪಗೊಳ್ಳುತ್ತಿತ್ತು. ರಾಮಗಿರಿಯು ಒಂದೆರಡು ಸಲ ಶೀನೂನ ಕೋಣೆಗೆ ಬಂದು ಗಣಪತರಾಯರ ವಿಳಾಸವನ್ನು ತೆಗೆದುಕೊಂಡು ಹೋಗಿದ್ದ. ಅಲ್ಲದೆ ಶೀನು ಭೆಟ್ಟಿಯಾದಾಗ ಅವನನ್ನು ವಿಶೇಷ ಆಸ್ಥೆಯಿಂದ ಮಾತನಾಡಿಸುತ್ತಿದ್ದ. ಮುಂದೆ ಕೆಲವು ವಾರಗಳು ಕಳೆಯಲು ಗಣಪತರಾಯರ ಪತ್ರ ಬಂದಿತ್ತು: ಡೆಪ್ಯುಟಿ ಕಲೆಕ್ಟರ್ ರಾಮಗಿರಿಯವರು ಸೊಲ್ಲಾಪುರದಲ್ಲಿದ್ದಾರೆ; ಅವರು ತಮ್ಮ ಮಗಳನ್ನು ತೋರಿಸಲು ಬರಬೇಕೆಂದಿದ್ದಾರೆ; ನಿನ್ನ ಅಭಿಪ್ರಾಯವೇನೆಂದು ಅನೇಕ ದಿನಗಳವರೆಗೆ ಶೀನು ಉತ್ತರ ಹಾಕಿದ್ದಿಲ್ಲ. ಆದರೆ ಒಂದು ರಾತ್ರಿ—ನಿದ್ರೆಯ ಲೋಕವನ್ನು ಸೇರುವದರ ಬದಲು ಈ ಸಹರಾ ಅರಣ್ಯವನ್ನು ಸೇರಿದಾಗ—ಶೀನು ತಂದೆಗೆ ಉತ್ತರ ಬರೆದ. 'ಟರ್ಮು ತುಂಬಿದೊಡನೆ ಊರಿಗೆ ಬರುತ್ತೇನೆ; ಆಗ ಕರೆಯಿಸಬಹುದೆ'ಂದು

ಗಣಪತರಾಯರಿಗೆ ಈ ಪತ್ರದಿಂದ ತುಸು ಆಶ್ಚರ್ಯವಾಗಿತ್ತು. ಮಗನನ್ನು ವಿಲಾಯತಿಗೆ ಕಳಿಸುವ ವಿಚಾರದಲ್ಲಿದ್ದ ಅವರು ಶೀನೂನ ಈ

ಮೊಪಾರ್ಟನ್ನು ಸ್ವಾಗತಿಸಿದರು. ಪರದೇಶಕ್ಕೆ ಹೋಗುವ ಪೂರ್ವದಲ್ಲಂತೂ ಶೀನೂನ ವಿವಾಹವಾಗಲೇಬೇಕೆಂದು ಅವರು ಎಣಿಕೆ ಹಾಕಿದ್ದರು. ಈಗ ಅದು ಅನಾಯಾಸವಾಗಿ ಸಾಧಿಸುವ ಚಿನ್ಹಗಳು ತೋರಿದವು ಮನೆಯಲ್ಲಿ ಎಲ್ಲರಿಗೂ ಹಿಗ್ಗಾಯಿತು. ಗಣಪತರಾಯರು ಅದರಂತೆ ರಾಮಗಿರಿಯವರಿಗೆ ತಿಳಿಸಿ ಫೆಬ್ರುವರಿಯ ಮಧ್ಯಕ್ಕೆ ಶೀನೂನ ಹಾದಿ ನೋಡುವದಾಗಿ ಅವನಿಗೆ ಬರೆದರು.

ಫೆಬ್ರುವರಿಯಲ್ಲಿ ಶೀನು ಊರಿಗೆ ಹೋದ. ಶೀನು ಈ ಸಲ ಜ್ಯು.ಬಿ.ಎ.ದಲ್ಲಿದ್ದ. ಟರ್ಮು ತುಂಬಿದೊಡನೆ ಅವನು ಊರಿಗೆ ಹೋಗುವದು ಸಹಜವಾದ ವಿಷಯ. ಹೀಗಾಗಿ ಗಣಪತರಾಯರಿಗೂ ಅದರಲ್ಲಿ ಅನಿರೀಕ್ಷಿತವಾದುದೇನೂ ಇರಲಿಲ್ಲ ಶೀನು ಹೃದಯದ ಶೂನ್ಯತೆಯನ್ನು ತಾಳಲಾರದೆ ಪುಣೆಯಿಂದ ಹೊರಟುಬಂದಿದ್ದು ಗಣಪತರಾಯರಿಗೆ ಹೇಗೆ ಗೊತ್ತಾಗಬೇಕು?

ಮೊಗ್ಗಾವಿಗೆ ಬಂದ ಮೇಲೆ ಶೀನು ಒಂದೆರಡು ದಿನಗಳನ್ನು ಹಿತವಾಗಿ ಕಳೆದ. ಮನೆಯಲ್ಲಿಯ ಪ್ರೀತಿಯ ವಾತಾವರಣ, ಊರಲ್ಲಿಯ ರಮಣೀಯ ಹಾಗು ಪರಿಚಿತ ದೃಶ್ಯಗಳು,—ಇವೆಲ್ಲ ಅವನ ಹೃದಯದ ವೇದನೆಯನ್ನು ತುಸುವೆ ಕಡಿಮೆಯಾಗಿಸಿದವು. ರಾಮಗಿರಿಯವರು ತಮ್ಮ ಮಗಳನ್ನು ತೋರಿಸಲು ಕರೆದುಕೊಂಡು ಬರುವ ದಿನಗಳು ಸಮೀಪಿಸಿದವು ಒಂದು ದಿನ ಅವರು ಮೊಗ್ಗಾವಿಗೆ ಒಂದೇಬಿಟ್ಟರು.

ರಾಮಗಿರಿ ಕೃಷ್ಣರಾಯರ ಮನೆಯಲ್ಲಿ ಭಾಗವತ ಸಂಪ್ರದಾಯ ನಡೆಯುತ್ತಿತ್ತು. ಅವರ ವಯಸ್ಸು ಸುಮಾರು ನಲವತ್ತೈದರೊಳಗಿರಬಹುದು. ಜ್ಯು. ಬಿ ಎ ದಲ್ಲಿದ್ದ ರಾಮಗಿರಿ ಪಾಂಡುರಂಗನು ಅವರ ಮಗ. ಹದಿನಾಲ್ಕು ಹದಿನೈದು ವರ್ಷದವಳಾದ ಸುಶೀಲೆಯು ಅವರ ಮಗಳು.

ಕೃಷ್ಣರಾಯರು ತಮ್ಮ ಹೆಂಡತಿ ಹಾಗೂ ಸುಶೀಲೆಯೊಡನೆ ಮೊಗ್ಗಾವಿಯಲ್ಲಿ ಪರಿಚಿತರೊಬ್ಬರ ಮನೆಯಲ್ಲಿ ಇಳಿದುಕೊಂಡರು. ಬಂದ ದಿನ ಗಣಪತರಾಯರಿಗೆ ನಿರೋಪ ತಿಳಿಸಿ ಮೊದಲು ಗೊತ್ತುಮಾಡಿದಂತೆ ಮರುದಿನ ಮುಂಜಾನೆ ಅವರ ಮನೆಗೆ ಕೃಷ್ಣರಾಯರು ಹೆಂಡತಿಯನ್ನೂ ಸುಶೀಲೆಯನ್ನೂ ಕರೆದುಕೊಂಡು ನಡೆದರು. ಯಥಾಪ್ರಕಾರ ವಧೂಪರೀಕ್ಷೆಯಾಯಿತು.

ಗಣಪತರಾಯರ ಮನೆತನದೊಡನೆ ತಮ್ಮ ಸಂಬಂಧವನ್ನು ಬೆಳೆಸುವ ಬಲವಾದ ಇಚ್ಛೆಯನ್ನು ಕೃಷ್ಣರಾಯರು ಪ್ರಕಟಮಾಡಿದರು. ಅವರ ಸರಳ ತನ, ನೂತನ ವಿಚಾರಪದ್ಧತಿ, ದೊಡ್ಡ ಜಾಗದಲ್ಲಿದ್ದರೂ ಅಚ್ಚಳಿಯದಿದ್ದ ವಿನಯ ಮುಂತಾದುದಕ್ಕೆಲ್ಲ ಗಣಪತರಾಯರು ಮೆಚ್ಚಿದರು. ಸುಶೀಲೆಯೂ ಅವರ ಮನಸ್ಸಿಗೆ ಬಂದಳು. ಮನೆಯಲ್ಲಿ ಎಲ್ಲರೂ ಒಳ್ಳೆಯ ವಧುವೆಂದು ತಲೆ ಹಾಕಿದರು. ಆದರೆ ಶೀನೂನ ವಿಚಾರವೇನು? ಅವನು ಹೂಂ ಕೊಟ್ಟ ಮೇಲೆ ಮಾತ್ರ ಮುಂದಿನ ವಿಚಾರ. ಕಾರಣ ಹಿಂದಿನಿಂದ ತಿಳಿಸುವೆನೆಂದು ಹೇಳಿ ಗಣಪತರಾಯರು ರಾಮಗಿರಿಯವರನ್ನು ಆದರದಿಂದ ಬೀಳ್ಕೊಟ್ಟರು.

ಸುಶೀಲೆಯು ನಾಲ್ಕೈದು ಇಯತ್ತೆ ಇಂಗ್ಲೀಷು ಕಲಿತಿದ್ದಳು. ದೊಡ್ಡ ಹುದ್ದೆದಾರರ ಮನೆಯಲ್ಲಿ ಬೆಳೆದ ಹುಡಿಗಿಗೆ ಇರಬೇಕಾದ ನಯ, ವಿನಯ, ಸಂಸ್ಕೃತಿ ಮೊದಲಾದ ಎಲ್ಲ ಗುಣಗಳಿಗೆ ಆಕೆ ಮಾದರಿಯಾಗಿದ್ದಳು. ಅವಳ ವ್ಯಕ್ತಿತ್ವವನ್ನೇ ಬಣ್ಣಿಸುವದಾದರೆ,—ದ್ರೌಪದಿಗಿಂತ ಸೀತಾದೇವಿಯ ಮೋಡಿಯು ಆಕೆಯದು. ಸುಶೀಲೆ ಬಹು ಸೌಮ್ಯಸ್ವಭಾವದ ಹುಡಿಗೆ. ನರಹರಿಯ ಅಕ್ಕನಾದ ಪದ್ಮಾವತಿಯ ಮಾಲಿಕೆಗೆ ಆಕೆ ಸೇರುತ್ತಿದ್ದಳು. ಅಂತರವಿಷ್ಟೆ; ಅಪ್ರಿಯ ವಾತಾವರಣದಲ್ಲಿ ಬೆಳೆದ ಪದ್ಮಾವತಿಯಲ್ಲಿ ಸಹನ ಶೀಲತೆಯು ಬರಿ ಒಂದು ಸಾಮಾಜಿಕ ಗುಣವಾಗಿರದೆ ಆತ್ಮದ ಕವಚವಾಗಿ ಬೆಳೆದಿತ್ತು. ಸುಶೀಲೆಯು ಸುಖದಲ್ಲಿ ಬೆಳೆದವಳು; ಆಕೆಯೂ ಸಹನಶೀಲಳಾ ಗಿದ್ದಳು. ಆದರೆ ಆಕೆಯ ಕೋಮಲ ಅಂತರಂಗವನ್ನು ಕಾಲನು ಮನಸ್ಸು ಮಾಡಿದರೆ ಬಲು ಬೇಗ ಮುರಿದುಬಿಡಬಹುದಾಗಿತ್ತು. ಲೋಕೋತ್ತರ ಚೇತಸ್ಸಿನಲ್ಲಿ ಕೋಮಲತೆಯೊಡನೆ ಇರಬೇಕಾದ ವಜ್ರಸಮ ಕಾಠಿನ್ಯವು ಇಲ್ಲಿ ಇರಲಿಲ್ಲ.

ಸುಶೀಲೆಯು ರೂಪದಿಂದ ಬಲು ಚೆಲುವೆ. ಒಂದು ರೀತಿಯಿಂದ ಕುಸುಮಾ ಸಿಗಿಂತ ಹೆಚ್ಚು ಚೆಲುವೆಯೆಂದರೂ ಸಲ್ಲುವದು. ಕುಸುಮಾನ ಬಣ್ಣ ಇಷ್ಟು ಕೆಂಪಿರಲಿಲ್ಲ. ಆಕೆಯ ಕಣ್ಣುಗಳಲ್ಲಿಯೂ ಮೊಗದಲ್ಲಿಯೂ ಇರುವ ಕಾಂತಿಯು ಅನುಪಮವಾದುವು ಅವಳ ಉಳಿದ ಚೆಲುವಿಕೆಯೆಲ್ಲ ಈ ಕಾಂತಿಯು ವಜ್ರಕ್ಕೆ ಬಂಗಾರದುಂಗುರದ ಪ್ರಚೋದನೆಯನ್ನು ಕಲ್ಪಿಸಿಕೊಟ್ಟಿತ್ತು. ಆದರೆ ಸುಶೀಲೆಯು ಒಂದು ಹೊನ್ನ ಪುತ್ಥಳಿಯಂತೆ ಶೋಭಿಸುತ್ತಿದ್ದಳು. ಅವಳ

ಕಣ್ಣುಗಳಲ್ಲಿ ಒಂದು ಮುಗ್ಧಮನೋಹರತೆಯು ಮನೆಮಾಡಿಕೊಂಡಿತ್ತು. ಒಮ್ಮೆ ನಂಬಿದವೆಂದರೆ ಕಡೆತನಕ ನಂಬುವ ಕಣ್ಣುಗಳವು. ಒಮ್ಮೆ ಅರ್ಪಣ ಭಾವವನ್ನು ತಂದರೆ, ಕೃಷ್ಣಾರ್ಪಣವೆನ್ನುವ ತನಕ ಬದಲಿಸದ ಹೃದಯವದು. ಈ ಭಾವವೇ ಅವಳ ಶಕ್ತಿ-ಅಶಕ್ತಿಗಳ ಮೂಲವಾಗಿತ್ತು.

ಸುಶೀಲೆಯನ್ನು ನೋಡಿದಾಗ ಶೀನು,—ಹೆಣ್ಣೆಂದರೆ ಇದಕ್ಕೂ ಹೆಚ್ಚೇ ನಿರಬೇಕೆಂದುಕೊಂಡ ಹೆಣ್ಣಿನ ಪರಿಪೂರ್ಣ ಸೌಂದರ್ಯ, ಹೆಣ್ಣಿನಲ್ಲಿರಬೇಕಾದ ನಯ, ವಿನಯ, ಹೆಣ್ಣಿನ ಜೊತೆಗೆ ಬರಬೇಕಾದ ಸಂಪತ್ತು-ಸಂಸ್ಕೃತಿ,—ಎಲ್ಲ ಇಲ್ಲಿದ್ದವು. ಶೀನೂನಿಗೆ ಸುಶೀಲೆಯು ಹಾರಾಡುವ ಜೀವವಿಹಂಗಮವಾಗಿ ಕಾಣಲಿಲ್ಲ,—ಹೆಣ್ಣಾಗಿ ಕಂಡಳು. ಒಂದೇ ಒಂದು ಹುಡಿಗಿಯಲ್ಲಿ ಶೀನು ಈ ವಿಹಂಗಮತೆಯನ್ನು ಕಂಡಿದ್ದ. ಆದರೆ ಆ ಹುಡಿಗೆ............ಹೋಗಲಿ ಆ ಮಾತು! ಆ ಭಾಗ್ಯ ತನ್ನ ಗೆಳೆಯನಾದ ನರಹರಿಗಾದರೂ ಲಭಿಸಿತಲ್ಲ! ಈಗ ಬೇಕಾದ್ದು ಕ್ಷುಬ್ಧ ಆತ್ಮಕ್ಕೆ ಶಾಂತಿ. ನೀರಡಿಸಿದ ದೇವಕಂಠಕ್ಕೆ,—ಅಮೃತ ವಾಗದಿದ್ದರೂ ತನಿರಸ ಈ ತನಿರಸವನ್ನು ಸುಶೀಲೆಯು ತನ್ನ ಮೇಲೆ ಕರೆಯ ಬಲ್ಲಳೆಂದು ಶೀನೂಗೆ ಅವಳನ್ನು ನೋಡಿದಾಗ ಮನದಟ್ಟಾಗಿತ್ತು. ಹೃದ್ರೋಗದ ಉಪಶಮನಕ್ಕೆ ಈ ಸಂಜೀವಿನಿ-ಕುಮಾರಿಯನ್ನು ಮೊರೆಹೋಗುವದೊಂದು ಶೀನು ಎಣಿಸಿದ. ಇವಳೇ ತನ್ನ ಧನ್ವಂತರಿಯಾಗಬಾರದೇಕೆ? ಸುಶೀಲೆಯನ್ನು ನೋಡಿದ ದಿನ ಸಂಜೆ ರಾಮತೀರ್ಥದ ಕಡೆ ತಿರುಗಾಡಲು ಹೋದಾಗ, ರಾತ್ರಿ ಹಾಸಿಗೆಯ ಮೇಲೆ ಮಲಗಿಕೊಂಡು ಧೇನಿಸಿದಾಗ,—ಶೀನೂಗೆ ಬಂದದ್ದು ಇದೇ ಉತ್ತರ. ಮರುದಿನ ಗಣಪತರಾಯರು ಕೇಳಿದಾಗ,—ಶೀನು ಆ ಹುಡಿಗಿ ಯನ್ನು ತಾನು ಮದುವೆಯಾಗಬಹುದೆಂದ.

ಗಣಪತರಾಯರಿಗೆ ಬಹಳ ಹರ್ಷವಾಯಿತು. ಎಲ್ಲ ರೀತಿಯಿಂದ ಈ ಸಂಬಂಧ ಬೆಳಸುವದು ಅವರ ಮನಸ್ಸಿನಲ್ಲಿತ್ತು. ದೈವವು ಅವರ ಎಣಿಕೆಯನ್ನು ಈಗ ಸಫಲಗೊಳಿಸಹತ್ತಿತ್ತು.; ಕೂಡಲೆ ಗಣಪತರಾಯರು ಈ ಶುಭವಾರ್ತೆ ಯನ್ನು ರಾಮಗಿರಿಯವರಿಗೆ ತಿಳಿಸಿ ಎಲ್ಲ ವಿಷಯವನ್ನು ನಿಶ್ಚಯ ಮಾಡಿ ಕೊಂಡು ಹೋಗಲು ಬರೆದರು. ರಾಮಗಿರಿಯವರು ಹಿಗ್ಗುತ್ತ ಮೊಗ್ಗಾವಿಗೆ ಬಂದು ಎಲ್ಲವನ್ನೂ ಗೊತ್ತುಮಾಡಿದರು. ವೈ ತಿಂಗಳಲ್ಲಿ—ಲಗ್ನಮಾಸ ದಲ್ಲಿ—ವಿವಾಹ ಜರುಗಬೇಕೆಂದು ನಿಶ್ಚಯವಾಯಿತು. ಅಂತೂ ಪಾಟಣಕರ

ನೊಬ್ಬನೇ ಅಲ್ಲ, ಶೀನೂ ಸಹ ಮೇ ತಿಂಗಳಲ್ಲಿ ಚತುರ್ಭುಜನಾಗುವವನಿದ್ದ.

ಇದಾದ ಮೇಲೆ ಎಲ್ಲ ಸ್ನೇಹಿತರಿಗೂ ಗಣಪತರಾಯರಿಂದ ಪತ್ರಗಳು ಹೋದವು ಎಲ್ಲ ವಿವರವನ್ನು ತಿಳಿಸಿ ರಾಯರು ದೇಸಾಯರಿಗೆ ಒಂದು ಉದ್ದ ಪತ್ರವನ್ನು ಬರೆದು ಲಗ್ನಕ್ಕಾಗಿ ಬರಬೇಕೆಂದು ಬಿನ್ನವಿಸಿದರು. ಶೀನು ನರಹರಿಗೆ ಒಂದು ಪತ್ರ ಬರೆದ:

“ಪ್ರಿಯ [redacted],

ಈ ಪತ್ರವನ್ನೋದಿ ನಿನಗೆ ಆಶ್ಚರ್ಯವಾಗಬಹುದು. ಆದರೆ ಇದು ಸತ್ಯ. ಮೇ ತಿಂಗಳಲ್ಲಿ ನನ್ನ ಮದುವೆಯೆಂದು ಗೊತ್ತಾಗಿದೆ ಜ್ಯು. ಬಿ. ಎ. ದಲ್ಲಿದ್ದ ರಾಮಗಿರಿಯರ ತಂಗಿಯೇ ವಧು. ಇದು ತಂದೆಯವರ ಆಗ್ರಹದಿಂದ ಆದುದಲ್ಲ ನಾನೇ ಮಾಡಿದ ಮನೋನಿಶ್ಚಯ ಇದು.

ಎಲ್ಲ ಗೆಳೆಯರಿಗೆ ತಿಳಿಸ. ಮದುವೆಗೆ ನೀನೂ ಎಲ್ಲ ಗೆಳೆಯರೂ ಬರಬೇಕು.

ನಿನ್ನೊಲವಿನ
—ಶ್ರೀನಿವಾಸ”

ಪತ್ರವನ್ನೋದಿ ನರಹರಿಗೆ ಆಶ್ಚರ್ಯವಾಗಲಿಲ್ಲ; ಹಗುರಾಯಿತು. ಶೀನೂನ ಭವಿತವ್ಯದ ಚಿಂತೆಯು ಮೇಲಿಂದ ಮೇಲೆ ನರಹರಿಯನ್ನು ಕಾಡುತ್ತಿತ್ತು. ಇನ್ನು ಕ್ರಮೇಣ ಜೀವನದಲ್ಲಿ ಶೀನು ನಿಶ್ಚಿಂತನಾಗುವನೆಂದು ನರಹರಿಗೆನಿಸಿತು. ಆ ಸುದ್ದಿಯನ್ನು ದೇಸಾಯರಿಗೆ ತಿಳಿಸಲು ಅಂದು ಸಂಜೆಗೆ ನರಹರಿಯು ಅವರ ಮನೆಗೆ ನಡೆದ ದೇಸಾಯರಿಗೆ ಅಷ್ಟರಲ್ಲಿ ಗಣಪತರಾಯರ ಪತ್ರವು ಬಂದಿತ್ತು.

“ಅಲ್ಲೋ, ನರಹರಿ! ನಿನ್ನ ಸರಿಜೋಡಿಯವರೆಲ್ಲ ಮದುವೆಯಾಗ ಹತ್ತಿದರು. ಪಾಟಣಕರ, ಶೀನು,—ಇಬ್ಬರೂ ಮೇ ತಿಂಗಳಲ್ಲಿ ವಿವಾಹಿತರು. ನಿನ್ನ—ಕುಸುಮಾನ ಮದುವೆಯನ್ನು ಅದೇ ಸುಮಾರಿಗೆ ಮಾಡಿಬಿಟ್ಟರೆ ಹೇಗೆ?” ಎಂದು ದೇಸಾಯರು ನಗುತ್ತ ಕೇಳಿದರು

ನರಹರಿಯು ಕುಸುಮಾನನ್ನು ನೋಡಿದ. ಅಲ್ಲಿಯೇ ನಿಂತಿದ್ದ ಕುಸುಮಾ ಮೋರೆ ಕೆಳಗೆ ಹಾಕಿ ಸುಮ್ಮನಿದ್ದಳು.

"ನೋಡೋಣ. ಅದರಲ್ಲಿ ಅವಸರವೇನು?" ಎಂದು ನರಹರಿಯು ಅನಿಶ್ಚಿತನಾಗಿ ಹೇಳಿದ. ಇನ್ನೊಮ್ಮೆ ಮಾತನಾಡಿದರಾಯಿತೆಂದು ದೇಸಾಯರು ವಿಷಯವನ್ನು ಬದಲಿಸಿದರು.

## ಪ್ರಕರಣ ೬೬

## ರಮಾಬಾಯರ ಕಿಟ್ಟು

ಗದುಗಿಗೆ ಹೋದ ಜಾನಕಿಬಾಯರು ತಮ್ಮ ಉದ್ದೇಶವನ್ನು ಸಾಧಿಸದೆ ಬಿಡಲಿಲ್ಲ. ಸುಬ್ಬಣಾಚಾರ್ಯರೇನೋ 'ಲಂಚ' ತಿಂದು ಮೋನಕೆಯ ಮುದ್ರಾ ಧಾರಣವನ್ನು ತಪ್ಪಿಸಿದ್ದರು. ಈ ವಿಷಯವು ತಿಳಿದಾಗ,—ಸೊಸೆಯ ಧರ್ಮ ಲಂಡತನಕ್ಕೆ ಜಾನಕಿಬಾಯರಿಗೆ ಇನ್ನೊಂದು ದೊಡ್ಡ ಉದಾಹರಣೆಯು ದೊರೆಯಿತು. "ಸ್ವಾಮಿಗೋಳ ಕಡಿಂದ ಮುದ್ರಾ ತಗೊಳ್ಳಲಿಕ್ಕೆ ಒಲ್ಲೆ ಅಂತಾಳ ಈ ಊರ್ವಸಿ! ನಾಳೆ ಬಚ್ಚಲವನ್ಯಾಗ ಮೈ ಸುಟಕೊಂಡು ಸಾಯುತಾಳ ವಿಲಿವಿಲಿ ಒದ್ದಾಡಿ!" ಎಂದು ಶಪಿಸಲು ಅವರು ಪ್ರಾರಂಭಿಸಿದ್ದರು.

ಅವರು ಸಾಧಿಸಿದ ಉದ್ದೇಶ,—ಆರ್ಥಿಕ ಸ್ವಾತಂತ್ರ್ಯ. ಗಂಡ ತನ್ನನ್ನು ಬಿಟ್ಟು ಪುಣೆಗೆ ನಡೆದ. ಮಗ ಹೆಂಡತಿಯ ಮಾತಿನಂತೆ ಕುಣಿಯುತ್ತ 'ಬಾಯಕೊ ಬ್ರಹ್ಮ'ದ ಉಪಾಸಕನಾಗಿದ್ದ. ಅಂದ ಮೇಲೆ ಇಳಿವಯಸ್ಸಿನಲ್ಲಿ ತಮ್ಮನ್ನು ಯಾರು ನೋಡಿಕೊಳ್ಳುವರು? ತಮ್ಮಷ್ಟಕ್ಕೆ ತಾವು ಸ್ವತಂತ್ರರಾಗಿರಲು ಅನುವು ದೊರೆಯಬೇಕೆಂದು ಗದುಗಿನಲ್ಲಿಯ ತಮ್ಮ ಆಪ್ತರಿದ್ದರಿಗೆ ಜಾನಕಿಬಾಯರು ಸಾಧಿಸಿದರು. ಆ ಆಪ್ತರನ್ನು ಸಂಧಾನಕ್ಕಾಗಿ ಗಣಪತರಾಯರೆಡೆಗೆ ಕಳಿಸಿದರು. ಗಣಪತರಾಯರು ಕೇಶವನನ್ನು ಕರೆಯಿಸಿ ಎಲ್ಲ ಸಮಾಚಾರವನ್ನು ತಿಳಿದುಕೊಂಡರು; ದೇಸಾಯರಿಗೂ ಪತ್ರ ಬರೆದರು. ಕೊನೆಗೆ—ಈ ಎಲ್ಲ ಮಂತ್ರಾಲೋಚನೆಯ ಫಲವಾಗಿ—ಮೊಗ್ಗಾವಿಯಲ್ಲಿಯ ಒಂದು ಸಣ್ಣ ತೋಟವನ್ನು ಜಾನಕಿಬಾಯರಿಗೆ ಬಿಟ್ಟುಕೊಡಬೇಕೆಂದೂ ಅವರ ಜೀವಮಾನವಿರುವ ತನಕ ಅದನ್ನು ಸಾಗ ಗೊಳಿಸಿ ಅದರ ಉತ್ಪನ್ನವನ್ನು ಜಾನಕಿಬಾಯರೇ ಪಡೆಯಬೇಕೆಂದೂ ತೀರ್ಮಾನವಾಯಿತು. ಕೇಶವನಿದ್ದ ಮನೆಯಲ್ಲಿ ಜಾನಕಿಬಾಯರಿರಲು ಒಂದು ಸ್ವತಂತ್ರ ಸಣ್ಣ ಮನೆಯಾಗುವಂತೆ ಅಡ್ಡ ಗೋಡೆ ಹಾಕಲಾಯಿತು. ಇಷ್ಟೆಲ್ಲ ತಯಾರಿಯಾದ ಮೇಲೆ ಜಾನಕಿ

ಬಾಯರು ಗದುಗಿನಿಂದ ಒಂದು ತಮಗಾಗಿ ಸಿದ್ಧಪಡಿಸಿದ ಈ ಮನೆಯಲ್ಲಿ ತಳ ವೂರಿದರು. ಮನೆಯಲ್ಲಿ ದೊರಕದಿದ್ದ ಅಧಿಕಾರ 'ಅಮಲು ಬಜಾವಣೆ'ಯು ಈಗ ಅವರ ಅಂಕಿತಕ್ಕೆ ಬಂದ ತೋಟದಲ್ಲಿಯ ಕೆಲಸದವರ ಮೇಲೆ ದೊರೆಯಿತು

ಇತ್ತ ಸ್ವಾಮಿಗಳು ಮೊಗ್ಗಾವಿಗೆ ಬಂದಾಗಿನಿಂದ ರಮಾಬಾಯರ ಭಕ್ತಿಯೆಲ್ಲ ಉಕ್ಕಿ ಬಂದಿತ್ತು. ತನ್ನ ಪಾಪಗಳನ್ನೆಲ್ಲ ತೊಳೆದುಕೊಳ್ಳಲು ಇದೇ ಸಮಯವೆಂದು ರಮಾಬಾಯರು ಹಾತೊರೆದರು. ಪಾಪವೆಲ್ಲಿಯ ಪಾಪ? ಮುದುಕ ಗಂಡನನ್ನು ಮದುವೆಯಾದ ಎಳೆಯ ಹೆಣ್ಣು ಅನಾಥೆಯಾದಾಗ ಮಾಡುವದೇನು? ಒಬ್ಬ ಗಂಡುಸನ್ನು ನಂಬಿಕೊಂಡಿದ್ದರೆ ಅದು ಕ್ಷಮ್ಯವಲ್ಲವೆ? ಆದರೆ ಸುತ್ತಲಿನ ಸಮಾಜವು ರಮಾಬಾಯರಲ್ಲಿ ಜಾಗೃತವಾಗಿಸಿದ ದನಿಯೊಂದು,—"ಅದೇನೇ ಇರಲಿ. ನೀನು ಮಾಡಿದ್ದು ಪಾಪ. ಅದರ ಕಲಂಕ ಸತ್ತಮೇಲಾದರೂ ಕಳೆಯುವಂತೆ ಈಗ ಪುಣ್ಯ ಮಾಡು. ದೇಹದ ಪಾಪ ದೇಹದೊಡನೆ ಸುಟ್ಟುಹೋಗಲಿ" ಎಂದು ಹೇಳುತ್ತಿತ್ತು. ಅದಕ್ಕೆ ಕಿವಿಗೊಟ್ಟು ರಮಾಬಾಯರು ಮುದ್ರಾಧಾರಣ ಮಾಡಿಕೊಂಡಿದ್ದರು. ಸ್ವಾಮಿಗಳು ಮೊಗ್ಗಾವಿಯಲ್ಲಿರುವ ತನಕ ದಿನಾಲು 'ಪ್ರಸಾದ' ವೆಲ್ಲಿಯೇ ಆಗಲಿ, ಅಲ್ಲಿ ಹೋಗಿ ಊಟಮಾಡಿ ಬರುತ್ತಿದ್ದರು. ಅವರು ಹೊರಗೆ ಬಂದಾಗ ಊರಲ್ಲಿಯ ಉಳಿದ ವಿಧವೆಯರೂ ಮುತ್ತೈದೆಯರೂ ಎಷ್ಟೇ ಗುಜುಗುಜು ಮಾಡಲಿ, ರಮಾಬಾಯರು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುತ್ತಿದ್ದಿಲ್ಲ. ಸುಮ್ಮನೆ ಎಲೆಯ ಮೇಲೆ ಕುಳಿತು ಪ್ರಸಾದ ತೆಗೆದುಕೊಂಡು ಬರುತ್ತಿದ್ದರು.

ಅವರ ಮನಸ್ಸಿನಲ್ಲಿ ಮೇಲಿಂದ ಮೇಲೆ ಅಳುಕುತ್ತಿದ್ದ ಇನ್ನೊಂದು ವಿಚಾರವೆಂದರೆ.. ..ನರಹರಿಯೊಡನೆ ಅವರ ವರ್ತನೆ. ಎಂತಹ ಮುತ್ತಿನಂತಹ ಮಲಮಗ, ಅವನಿಗೆ ಇದೇನು ಅನ್ಯಾಯ ಮಾಡಿದೆ! ಎಂಬ ಮಾತು ಮೇಲಿಂದ ಮೇಲೆ ಅವರ ಮನದೊಳಗನ್ನು ಕೊರೆಯುತ್ತಿತ್ತು. ಅದೊಂದು ಕಾಮಾತುರತೆಯಲ್ಲಿ ರಮಾಬಾಯರು ಇಂಥ ಸಲ್ಲದ ಕೆಲಸಕ್ಕೆ ಕೈಹಾಕಿದ್ದರು. ಮೊದಲಿನಿಂದ ಹುದುಗಿಸಿಟ್ಟ ಕಾಮ, ನರಹರಿಯಂತಹ ತರುಣನ ಸಾನ್ನಿಧ್ಯ, ದಿನ ಬೆಳಗಾದರೆ ಅವನೊಡನೆ ಮಾತನಾಡಲು, ನಗಲು, ಕೆಲೆಯಲು ಅವರಿಗೆ ಅನಿರ್ಬಂಧವಾಗಿ ಸಿಕ್ಕ ಸಮಯಗಳು,—ಇವೆಲ್ಲವುಗಳ ಮೂಲಕ ರಮಾಬಾಯರಿಗೆ ಈ ವಿಷಯದಲ್ಲಿ ವಿಶಾಲವಾಗಿ ವಿಚಾರಮಾಡುವದು ಆಗಿರಲಿಲ್ಲ.

ಕಾಮದ ಸೆಳೆತಕ್ಕೆ ಸಿಕ್ಕು ಅವರ ಬುದ್ಧಿ ವಿಕಾರ ಹೊಂದಿತ್ತು. ನರಹರಿಯ ಸಹವಾಸವೊಂದನ್ನು ಬಿಟ್ಟು ಉಳಿದ ಯಾವ ಕಲ್ಪನೆಯೂ ಅವರ ತಲೆಯನ್ನು ಸೇರಲಿಲ್ಲ. ಆ ಕಲ್ಪನೆಯ ಭರದಿಂದಲೇ ಅವರಿಂದ ಅಂತಹ ಪ್ರಮಾದವಾಗಿತ್ತು. ಈಗ—ಎಲ್ಲವೂ ಮುಗಿದು ಅನೇಕ ತಿಂಗಳು ಕಳೆದು ಹೋದಾಗ—ತಮ್ಮ ಅನ್ಯಾಯದ ವಾಸ್ತವ ಚಿತ್ರವು ಅವರ ಕಣ್ಣೆದುರಿಗೆ ಬಂದಿತ್ತು. ನರಹರಿ ಇದ್ದಿದ್ದರೆ ಎಷ್ಟು ಸಹಾಯವಾಗುತ್ತಿತ್ತು! ಕಿಟ್ಟೂನ ಶಿಕ್ಷಣಕ್ಕೆ ಎಂತಹ ಪುಟ ಸಿಗುತ್ತಿತ್ತು! ಅದೆಲ್ಲ ಈಗ ಹೊಳೆಯಲ್ಲಿ ಹುಣಸಿಹಣ್ಣು ತೊಳೆದಂತಾಯಿತಲ್ಲವೇ! ಎಂದು ರಮಾಬಾಯರು ಚಿಂತಿಸಿದರು.

ಉನ್ಮಾದಕ್ಕಿಟ್ಟಿದ್ದ ಕಾಮಕ್ಷುಧೆಯೆಲ್ಲ ಶಾಂತವಾಗುತ್ತ ನಡೆದಾಗ ಅವರ ತಲೆಯಲ್ಲಿ ಬಂದ ವಿಚಾರಗಳಿವು. ಸುಬ್ಬಣಾಚಾರ್ಯರ ವಜ್ರಬಾಹುಪಾಶದಲ್ಲಿ ಅವರು ತಾರುಣ್ಯಕ್ಕೆ ಬಂದಂದಿನಿಂದ ತಣಿಯದೆ ಇದ್ದ ಕಾಮವೆಲ್ಲ ಪೂರ್ತಿಯನ್ನು ಕಂಡಾಗ ರಮಾಬಾಯರಿಗೆ ಹೊಳೆದಿತ್ತು,—ಕಾಮವು ಜೀವನದ ಸರ್ವಸ್ವವಲ್ಲವೆಂದು. ಕಾಮದ ತೃಪ್ತಿಯೊಂದಕ್ಕಾಗಿ ನಾನು ಎಷ್ಟು ಹದಗೆಟ್ಟೆನಲ್ಲ! ಎಂದು ರಮಾಬಾಯರು ಮನದಲ್ಲಿಯೇ ಮರುಗಿದರು. ನಿತ್ಯವೂ ಸುಬ್ಬಣಾಚಾರ್ಯರು ಅವರ ಮನೆಗೆ ಬರುತ್ತಿದ್ದರು. ದೇವರ ಪೂಜೆ ಕಾಯಿ-ಪಲ್ಯ, ಹರಟೆ, ಕಥೆ, ಪುರಾಣ,—ಎಲ್ಲವೂ ಸಾಗಿತ್ತು. ತಿಂಗಳೆರಡು ತಿಂಗಳು ರಮಾಬಾಯರು ಆಚಾರ್ಯರ ಸಾನ್ನಿಧ್ಯದಲ್ಲಿ ಸುಖಪಟ್ಟರು ಆದರೆ ಮುಂದೆ ರಮಾಬಾಯರ ಆಸೆಗಿಂತ ಸುಬ್ಬಣಾಚಾರ್ಯರ ವಿಷಯವಾಸನೆಗೇ ಅವರ ಸಮಾಜಬಾಹಿರವಾದ ಈ ಸಂಬಂಧದಲ್ಲಿ ಆಸ್ಪದ ಸಿಕ್ಕಿತ್ತು. ಸುಬ್ಬಣಾಚಾರ್ಯರು ಬಂದು ಅವರನ್ನು ಮೋಹಗೊಳಿಸುತ್ತಿದ್ದರು. ಆ ಮೋಹವನ್ನು ತಡೆದು ನಿಲ್ಲುವ ಶಕ್ತಿಯು ಅದಕ್ಕೆ ಒಮ್ಮೆ ಆಧೀನರಾದ ರಮಾಬಾಯಿಯವರಲ್ಲಿರಲಿಲ್ಲ. ಹೀಗಾಗಿ ಪಕ್ಷಕ್ಕೊಮ್ಮೆ ತಿಂಗಳಿಗೊಮ್ಮೆ ಎಡವಿ ಬೀಳಬಹುದಾದ ಅವರು ಸುಬ್ಬಣಾಚಾರ್ಯರ ಪ್ರಚೋದನದಿಂದ ಪ್ರತಿ ನಿತ್ಯ ಎಡವುತ್ತಿದ್ದರು. ಒಂದು ಆಳವಾದ ದೀನತನವು ಅವರ ಕಣ್ಣುಗಳಲ್ಲಿ ವಾಸಿಸಿತ್ತು. ಒಂದು ಹಿರಿಯ ಜುಗುಪ್ಸೆಯು ಅವರ ಹೃದಯದ ಅಂತರಾಳದಲ್ಲಿ ಮನೆಮಾಡಿಕೊಂಡಿತ್ತು. ಅವರ ಕಾಮವೇ ಈಗ ಮೂರ್ತಿಮಂತವಾಗಿ—ಸುಬ್ಬಣಾಚಾರ್ಯರಾಗಿ ಎದುರಿಗೆ ಬಂದು ತಮ್ಮನ್ನು ಕೆಣಕುತ್ತಿರುವಂತೆ ರಮಾಬಾಯ

ರಿಗೆ ಭಾಸವಾಯಿತು. ಆ ಕೆಣಕುವ ಕಾಮದೆದುರು ಅವರು ಅಸಹಾಯ ರಾಗಿದ್ದರು.

ಈ ಎಲ್ಲ ವಿಷಮತೆಯಲ್ಲಿ ಕಿಟ್ಟ್ಯಾ ಒಬ್ಬನೆ ರಮಾಬಾಯರ ಕಣ್ಣ ಗೊಂಬೆಯಾಗಿದ್ದ. ಕಿಟ್ಟ್ಯಾನನ್ನು ನೋಡುತ್ತ ಅವರು ತಮ್ಮ ಎಲ್ಲ ದುಃಖ ಗಳನ್ನು ಮರೆಯುತ್ತಿದ್ದರು. ಕಿಟ್ಟು ಅ-ಆ ಕಲಿಯುವದೇ ಅವರಿಗೊಂದು ಸಂಭ್ರಮ. ಕಿಟ್ಟ್ಯಾ ಮನೆಗೆ ಬಂದು ತನ್ನ ಗೆಳೆಯರೊಡನೆ ಅಂದು ಆಡಿದ ಆಟಗಳ ವಿಷಯವನ್ನೆಲ್ಲ ಪುಟ್ಟಪುಟ್ಟ ಮಾತಿನಲ್ಲಿ ಹೇಳುವದನ್ನು ಕೇಳುವದೇ ಅವರಿಗೊಂದು ಹಿಗ್ಗು. ಕಿಟ್ಟ್ಯಾ ದಿನಾಲು ಸಾಲೆಗೆ ಹೋಗಹತ್ತಿದಾಗ,— ಅದು ಅವರಿಗೊಂದು ಹಬ್ಬವಾಯಿತು. ನರಹರಿಯೇ ಸಾಲೆಗೆ ಹೋಗಲು ಕಿಟ್ಟ್ಯಾನ ಮನವೊಲಿಸಿದ್ದ. ಆದರೆ ಕಿಟ್ಟು ತಪ್ಪದೆ ಹೋಗುವದು,— ನರಹರಿಯು ಊರು ಬಿಟ್ಟ ಮೇಲೆ ಮಾತ್ರ ಸಾಧ್ಯವಾಗಿತ್ತು. ಸಾಲೆಗೆ ಹೋಗಹತ್ತಿದ ಮೇಲೆ ಕಿಟ್ಟು ಒಮ್ಮೆ ತಾಯಿಯನ್ನು ಕೇಳಿದ್ದ: "ಅವ್ವಾ, ನಾರಣ್ಣ ಬರತಾನ, ಬರತಾನಂತ ಅಂತ ಹೇಳತೀದಿ ಇನ್ನೂ ಬಂದೇ ಇಲ್ಲಲ್ಲಾ?"

"ಇನ್ನೂ ಬಂದಿಲ್ಲಪಾ! ಇನ್ನಮ್ಯಾಲ ಬರಬಹುದು." ಎಂದು ರಮಾಬಾಯರು ಅವನನ್ನು ಸಮಾಧಾನಗೊಳಿಸಲು ಯತ್ನಿಸಿದರು.

"ದಿನಾ ಹೀಂಗಂತ ಹೇಳತೀದಿ! ನಾರಣ್ಣ ಊರಿಗೆ ಬಂದಮ್ಯಾಲ ಹೇಳತೇನಿ,—ನೀ ಸುಳ್ಳ ಸುಳ್ಳ ಮಾತಾಡತೀದಿ ಅಂತ! ಅ-ಆದಿಂದ ಕ್ಷ-ಜ್ಞ ತನಕಾ ಎಲ್ಲಾ ಅಕ್ಷರಾ ಅವಗ ಬರದು ತೋರಸತೇನಿ!" ಎಂದು ಕಿಟ್ಟ್ಯಾ ನುಡಿದ.

ರಮಾಬಾಯರು ಮರುಮಾತಾಡಲಿಲ್ಲ. ಕಿಟ್ಟ್ಯಾನಿಗೆ ಕಾಣದ ಹಾಗೆ ಮರೆಗೆ ನಿಂತು ಅವರು ಕಂಬನಿ ಮಿಡಿದರು. ತಾವು ಒಬ್ಬ ಮಗನ ವಿರುದ್ಧ ವಾಗಿಷ್ಟೇ ಅಪರಾಧವನ್ನು ಮಾಡಿಲ್ಲ, ಇನ್ನೊಬ್ಬ ಮಗನು ತನಗಿದ್ದ ಅಣ್ಣ ನನ್ನು ಕಳೆದುಕೊಳ್ಳುವಂತೆ ಮಾಡಿದೆ! ಎಂದು ಅವರ ಹೃದಯವು ಬೆಂದಿತು.

ಕಿಟ್ಟ್ಯಾನಿಗೆ ನೆಗಡಿ ಹಾಯ್ದರೆ ರಮಾಬಾಯರ ಜೀವದಲ್ಲಿ ಜೀವವಿರು ತ್ತಿರಲಿಲ್ಲ. ಆಗ ತಿಪ್ಪನಿಗೆ ಬಿಟ್ಟ್ಯಾ ಬಿಡದೆ ದವಾಖಾನೆಗೆ ಎಡತಾಕಬೇಕಾಗು ತ್ತಿತ್ತು. ಕಿಟ್ಟ್ಯಾನ ಸಲುವಾಗಿ ಊರಲ್ಲಿಯ ಎಲ್ಲ ಅಂಗಡಿಗಳಲ್ಲಿಯ ಪೆಪ್ಪರುಮಿಂಟು—ಲೆಮನ್‌ಡ್ರಾಪುಗಳು ಖರ್ಚಾಗುತ್ತಿದ್ದವು. ಕಿಟ್ಟ್ಯಾ

ಹಾಸಿಗೆಯಿಂದೆದ್ದು ಓಡಾಡುವ ವರೆಗೆ ರಮಾಬಾಯಿಯರನ್ನು ನಿರುತ್ಸಾಹವು ಆವರಿಸುತ್ತಿತ್ತು. ಗಿಡಗವು ಬಂದು ಮನೆಯಲ್ಲಿ ಬೆಳಗುತ್ತಿರುವ, ಸಂಗೀತಿಸುತ್ತಿರುವ ಈ ಪಾರಿವಾಳವನ್ನು ಎತ್ತಿಕೊಂಡೊಯ್ಯದಿರಲೆಂದು ರಮಾಬಾಯಿಯರು ಅದನ್ನು ಹಗಲೆನ್ನದೆ ರಾತ್ರಿಯೆನ್ನದೆ ಅವಿಶ್ರಾಂತವಾಗಿ ಸಂರಕ್ಷಿಸುತ್ತಿದ್ದರು.

ಆದರೆ ಯಮನ ಪಕ್ಷಿಯಾದ ಮರಣವೆಂಬ ಗಿಡಗವು ಬರಬೇಕಾದರೆ ಅದು ಮೇಲಿನಿಂದಲೂ ಬರುವದಿಲ್ಲ; ಹೊರಗಿನಿಂದಲೂ ಬರುವದಿಲ್ಲ: ಕೆಳಗಿನಿಂದ—ಪಾತಾಳದಿಂದ-ಹಾರಿ ಬರುತ್ತದೆ. ನೆಲದೊಳಗಿಂದ ಹಾಯ್ದು ಬರುವ ವಿಧಿಯನ್ನು ಮನೆಯ ಗೋಡೆಗಳೆಂತು ತಡೆದಾವು?

ಸ್ವಾಮಿಗಳು ಮೊಗ್ಗಾವಿಗೆ ಬಂದಾಗಲೇ ಊಟ-ತಿನಿಸಿನಲ್ಲಿ ಕಿಟ್ಟೋನಿಗೆ ಅತಿರೇಕವಾಗಿತ್ತು ಸ್ವಾಮಿಗಳು ಊರು ಬಿಡುವ ಸುಮಾರಿಗೆ ಅವನಿಗೆ ಜ್ವರ ಬಂದವು. ಒಂದೆರಡು ದಿನ ನೆಗಡಿ-ಕೆಮ್ಮಿನ ಜ್ವರವೆಂದು ಡಾಕ್ಟರು ಉಪಚಾರಮಾಡಿದರು ಆದರೆ ನಾಲ್ಕೈದು ದಿನಗಳಾದರೂ ಜ್ವರ ನಿಲ್ಲಲಿಲ್ಲ. ಡಾಕ್ಟರು ಬಂದು ನೋಡಿ ಹೇಳಿದರು: "ಈ ಜ್ವರ ನಿಲ್ಲುವವರೆಗೆ ಚಹ–ಹಣ್ಣಿನ ರಸದ ಹೊರತು ಬೇರೆ ಏನೂ ಹುಡುಗನಿಗೆ ಕೊಡಕೂಡದು" ಎಂದು. ರಮಾಬಾಯಿಯರು ಗಾಬರಿಯಾದರು. ಸುಬ್ಬಣಾಚಾರ್ಯರು ಹುಬ್ಬಳ್ಳಿಗೆ ಹೋಗಿ ತರತರದ ಹಣ್ಣು ತಂದರು. ಶೂಶ್ರೂಷೆಗೆಂದು ತಿಪ್ಪನು ಹಗಲೂ ರಾತ್ರಿ ರಮಾಬಾಯಿಯರ ಮನೆಯಲ್ಲಿಯೇ ಇರುತ್ತಿದ್ದ. ಒಂದು ವಾರವಾಗಿ ಹೋದರೂ ಜ್ವರ ಇಳಿಯಲಿಲ್ಲ. ದಿನಾಲು ಪರೀಕ್ಷಿಸಲು ಬರುತ್ತಿದ್ದ ಡಾಕ್ಟರು ಹೇಳಿದರು: "ಇದು ವಿಷಮಜ್ವರ; ಇನ್ನೂ ಹನ್ನೆರಡು–ಹದಿಮೂರು ದಿನ ಹೀಗೆಯೇ ಶುಶ್ರೂಷೆ ನಡೆಯಬೇಕು" ಎಂದು.

ವಿಷಮಜ್ವರವೆಂದೊಡನೆ ರಮಾಬಾಯಿಯರು ಸೆರಗಿನಿಂದ ಕಣ್ಣೀರೊರಸಿಕೊಂಡು ಅಳಹತ್ತಿದರು.

"ಅಳಬೇಡಿ, ತಾಯಿ. ಇದರಿಂದ ಪ್ರಾಣಕ್ಕೆ ಅಪಾಯವೇನೂ ಆಗಲಾರದು. ಆದರೆ ಶುಶ್ರೂಷೆ ಮಾತ್ರ ಜಾಗ್ರತೆಯಾಗಿ ನಡೆಯಬೇಕು. ಮಗುವು ಮಲಗಿದ ಹಾಗೆ ಮಲಗಲಿ; ಅತ್ತಿತ್ತ ಸರಿಯಗೊಡಬೇಡಿ. ಎದ್ದು ಕೂಡುವದಂತೂ ಬೇಡವೇಬೇಡ" ಎಂದು ಸಮಾಧಾನ ಹೇಳಿ ಡಾಕ್ಟರು ಹೋದರು.

ಕಿಟ್ಟ್ಯಾನಿಗೆ ವಿಷಮಜ್ವರವೆಂಬ ಸುದ್ದಿ ಓಣಿಯಲ್ಲೆಲ್ಲ ಹಬ್ಬಿತು. ಮೊಗ್ಗಾವಿಗೆ ಬಂದ ಮೇಲೆ ಒಮ್ಮೆ ಸಹ ರಮಾಬಾಯರನ್ನು ಮಾತನಾಡಿಸದ ವೆಂಕಮ್ಮನವರು ಅವರನ್ನು ಕಂಡು ಕಿಟ್ಟ್ಯಾನ ಕ್ಷೇಮವನ್ನು ತಿಳಿದುಕೊಳ್ಳಲು ಬಂದರು ರಮಾಬಾಯರಿಗೆ ದಿಕ್ಕೇ ತಪ್ಪಿದಂತಾಗಿತ್ತು. ವೆಂಕಮ್ಮನವರು ಹೇಳಿ-ಕೇಳಿದ ಮಾತಿಗೆ 'ಹಾಂ-ಹೂಂ' ಎಂದು ರಮಾಬಾಯರು ಅವರನ್ನು ತಿರುಗಿ ಕಳಿಸಿದರು.

ಈ ವೇಳೆಯಲ್ಲಿ ಕಿಟ್ಟ್ಯಾನನ್ನು ರಮಾಬಾಯರು ಉಪಚರಿಸಿದ ರೀತಿಯು ಎದೆ ಕರಗಿಸುವಂತಿತ್ತು. ಅವರಿಗೆ ಊಟದ ಪರಿವೆಯಿರಲಿಲ್ಲ; ನಿದ್ದೆಯ ಸಂಪರ್ಕವಿರಲಿಲ್ಲ ಹೈಗ್ರೀವಾಚಾರ್ಯರ ಪಲ್ಲಂಗದ ಮೇಲೆ ಕಿಟ್ಟ್ಯಾನನ್ನು ಮಲಗಿಸಿ ಹತ್ತಿರ ಕುಳಿತಲ್ಲಿಂದ ಅವರು ಅತ್ತಿತ್ತ ಕದಲುತ್ತಿರಲಿಲ್ಲ. ಯಾವಾಗಲೂ ಅವನ ಸೇವೆಯಲ್ಲಿಯೇ ನಿರತರಾಗಿರುತ್ತಿದ್ದರು. ಅವನಿಗೆ ಹೊತ್ತಿಗೆ ಸರಿಯಾಗಿ ಔಷಧ ಕೊಡುವದು, ಹಣ್ಣಿನ ರಸ ಕೊಡುವದು,—ಭಕ್ತನು ದೇವನನ್ನು ಸೇವಿಸಿದಂತೆ ರಮಾಬಾಯರು ಕಿಟ್ಟ್ಯಾನನ್ನು ಸೇವಿಸಿದರು. ಕಿಟ್ಟ್ಯಾನ ಜ್ವರದ ಸುದ್ದಿಯನ್ನು ಡಾಕ್ಟರಿಂದ ಕೇಳಿ ತಿಳಿದ ಗಣಪತರಾಯರು ಒಂದೆರಡು ಸಲ ಅವರ ಜೊತೆಗೆ ಒಂದು ಹುಡುಗನನ್ನು ನೋಡಿ ಏನಾದರೂ ಸಹಾಯ ಬೇಕಾಗಿದ್ದರೆ ತಮಗೆ ಸಂಕೋಚವಿಲ್ಲದೆ ತಿಳಿಸಬೇಕೆಂದು ರಮಾಬಾಯರಿಗೆ ಹೇಳಿದರು. ಯಾರ ಸಹಾಯದಿಂದೇನಾಗುವದು? ಆದರೆ ದೇವರು ರಮಾಬಾಯರಿಗೆ ನೆರವಾಗಬೇಕು ನೆನಪಿದ್ದ ಎಲ್ಲ ದೇವರುಗಳಿಗೆ ರಮಾಬಾಯರು ಬೇಡಿಕೊಂಡರು. ಹೊರಲಾರದ ಹರಕೆಗಳನ್ನೆಲ್ಲ ಹೊತ್ತರು.

ಜ್ವರದ ಒಂದು ಪಕ್ಷ ಕಳೆಯಿತು. ಅದೇ ಕಿಟ್ಟ್ಯಾನಿಗೆ ಕೃಷ್ಣಪಕ್ಷ, ಇನ್ನು ಬರುವದು ಶುಕ್ಲಪಕ್ಷವೆಂದು ರಮಾಬಾಯರು ಭಾವಿಸಿದರು. ಆದರೆ ಅವರ ದೈವವು ಹಾಗೆ ಹೊಂಚುಹಾಕಿರಲಿಲ್ಲ. ಜ್ವರದ ಹದಿನೇಳು-ಹದಿನೆಂಟನೆಯ ದಿನ ಕಿಟ್ಟ್ಯಾ ಬಡಬಡಿಸಹತ್ತಿದ. ಅವನ ಮೈಮೇಲೆ ಎಚ್ಚರ ಉಳಿಯಲಿಲ್ಲ. ಆಗೀಗ ಪ್ರಜ್ಞೆಯಿದ್ದಾಗ ಅತ್ತಿತ್ತ ಕಣ್ದೆರೆದು ನೋಡಿ 'ಅವ್ವಾ!' ಎಂದು ನರಳಿ ಮತ್ತೆ ಕಣ್ಣುಮುಚ್ಚುತ್ತಿದ್ದ. ಪುಟಚೆಂಡಿನಂತೆ ಉಬ್ಬಿದ ಹುಡುಗ ಈಗ ಬರಿ ಎಲುಬಿನ ಹಂದರವಾಗಿದ್ದ. ಆ ವಿನೋದ, ಆ ಉಲ್ಲಾಸ, ಆ ಆನಂದ,—ಎಲ್ಲವೂ ಮಾಯವಾಗಿದ್ದವು. ಹೊಟ್ಟೆಯಲ್ಲಿ

ಅವರಿಗೆ ಅದೆಷ್ಟು ಸಂಕಟವಾಯಿತೋ ರಮಾಬಾಯರಿಗೆ ಗೊತ್ತು. ಸಾವು ಕಚ್ಚಿಕೊಂಡುಹೋದೀತೆಂದು ಹೆದರಿ ಜಪ್ಪಿಸಿ ಕುಳಿತಂತೆ ರಮಾಬಾಯರು ಹಗಲೂ ರಾತ್ರಿ ಕಿಟ್ಟೂನ ಕಣ್ಣಲ್ಲಿ ಕಣ್ಣಿಟ್ಟು ಕುಳಿತುಬಿಟ್ಟರು.

ಆ ಸುಂದರ ತರುಣ ವಿಧವೆ,—ಬಾಳಿನಲ್ಲಿ ನಲಿಯಬೇಕಾದ ಅವಳಿಗೆ ಸಮಾಜವು ಒಂದು ಕೆಂಪು ಸೀರೆಯನ್ನುಡಿಸಿ: "ಜಗತ್ತಿನಲ್ಲಿದ್ದೂ ನಿನಗೆ ಜಗತ್ತಿನ ಸುಖಗಳಿಲ್ಲ ಜೀವವಿದ್ದೂ ನೀನು ಜೀವನ್ಮೃತಳು" ಎಂದು ಹೇಳಿತ್ತು. ತಪ್ಪಿ ಕಾಲು ಜಾರಿದಾಗ ಸಮಾಜದ ಕ್ರೌರ್ಯವೆಲ್ಲ ತಿರುಳು ಗೊಂಡು ಜನಿಸಿದ ಧರ್ಮ: "ಇದಕ್ಕಾಗಿ ನಿನಗೆ ರವರವ ನರಕ!" ಎಂದು ಗುಜುಗುಜುಮಾಡುತ್ತಿತ್ತು. ಅದೇನೇ ಇರಲಿ, ಇದ್ದ ಮಗುವನ್ನು ಸಾಕಿ ಸಲುಹಿ ಎಲ್ಲ ದುಃಖವನ್ನು ಮರೆಯಬೇಕೆಂದರೆ,—ದೈವವು ಈಗ ಆ ಮಗು ವನ್ನು ಮರಣಶಯ್ಯೆಯ ಮೇಲಿರಿಸಿತ್ತು. ಕೆಂಪು ಸೀರೆಯ ಅಮಂಗಲತೆಯ ನ್ನೆಲ್ಲ ಹೀಯಾಳಿಸಿ ಮೆರೆಯುತ್ತಿರುವ ಆ ಸುಂದರ ಮುಖ, ಆ ಮುಖದ ಸೌಂದರ್ಯಕ್ಕೆ ರಾಹುವಿನಂತೆ ಬಡಿದುಕೊಂಡಿದ್ದ ಅಸಹಾಯತೆ-ದೀನತೆಗಳು,—ಇವುಗಳಿಗೆ ಸಮಾಜವೂ ಧರ್ಮವೂ ದೇವರೂ ಏನೆಂದು ಉತ್ತರ ಕೊಡ ಬಹುದು? ಕುಂಕುಮದ ಸಿಂಗಾರವಿರಬೇಕಾದ ಹಣೆಯ ಮೇಲೆ ಅಂಗಾರವೆ? ಕರುಣೆ ತೋರಿಸುವಲ್ಲಿ ಹೀಗೆ ಪೆಟ್ಟಿನ ಮೇಲೆ ಪೆಟ್ಟೆ? ಇದು ಯಾವ ನ್ಯಾಯ? ಈ ನ್ಯಾಯಶಾಸ್ತ್ರದ ಸೂತ್ರಗಳೇನು?

ಹೀಗೆ ಕುಳಿತ ಒಂದು ರಾತ್ರಿ ರಮಾಬಾಯರ ಕಣ್ಣಿಗೆ ಅಸಾಧ್ಯವಾದ ಮಬ್ಬು ಬಂತು. ಅವರ ಹೃದಯದ ಹಾಗು ಮನಸ್ಸಿನ ಕಾವಲಿಗೆ ದೇಹವು ಶಕ್ತಿ ಮೀರಿ ಸಹಾಯಮಾಡಿ ಈಗ ದಣಿದುಹೋಗಿತ್ತು. ಕಿಟ್ಟೂನಿಗೆ ಜಂಪುಹತ್ತಿದ ಹಾಗಾಗಿತ್ತು. ಕೆಳಗೆ ಒಂದು ಕಡೆಗೆ ತಿಪ್ಪನು ಮಲಗಿಕೊಂಡಿದ್ದ. ಪಲ್ಲಂಗದ ಮೇಲೆಯೇ ಕುಳಿತು ತೂಕಡಿಸುವದೆಂದರೆ ಕಿಟ್ಟೂನಿಗೆ ಎಚ್ಚರವಾಗ ಬಹುದೆಂದು ರಮಾಬಾಯರು ಮೆಲ್ಲನೆ ಸರಿದು ಪಲ್ಲಂಗದಡಿಗೆ ಅಡ್ಡಾದರು. ಒಂದು ಕ್ಷಣ ಅವರಿಗೆ ನಿದ್ದೆಹತ್ತಿತು. ಇದೇ ಸುಮಾರಿಗೆ ಎಚ್ಚರಾದ ಕಿಟ್ಟು ಸಂಕಟದಿಂದ 'ಅವ್ವಾ!' ಎಂದು ನರಳಿ ಕಣ್ತೆರೆದು ನೋಡಿದ ಅವ್ವ ಕಾಣಲಿಲ್ಲ. ಇನ್ನೊಮ್ಮೆ 'ಅವ್ವಾ!" ಎಂದು ಸಂಕಟಪಟ್ಟ. ಅತ್ತಿತ್ತ ಕಣ್ಣು ಹೊರಳಿಸಿ ನೋಡಿದ. ಅವ್ವ ಪಲ್ಲಂಗದಡಿಗೆ ಒರಗಿದಂತೆ ಕಂಡಿತು.

ಉನ್ಮಾದದ ಭರದಲ್ಲಿ 'ಅವ್ವಾ!' ಎಂದು ಎದ್ದು ಕಿಟ್ಟೂ ರಮಾಬಾಯಿಯರು ಮಲಗಿಕೊಂಡೆಡೆಗೆ ಧುಮುಕಿದ. ಗಡಬಡಿಸಿಕೊಂಡು ರಮಾಬಾಯಿಯರು ಎದ್ದು ಕುಳಿತರು.

ಅವರ ಎದೆಯು ಝಲ್ಲೆಂದಿತು. "ಅಯ್ಯೋ! ಇದೇನು ಘಾತ! ಇಷ್ಟು ದಿನ ತಡೆದ ನಿದ್ದೆ ಈಗ ಬರಬೇಕೆ?" ಎಂದು ರಮಾಬಾಯಿಯರು ಒರಲಿದರು. ಮೆಲ್ಲನೆ ಎತ್ತಿ ಮಗನನ್ನು ಪಲ್ಲಂಗದ ಮೇಲೆ ಒರಗಿಸಿದರು. ಆದರೆ ಆಗುಪ ಪ್ರಮಾದ ಆಗಿಹೋಗಿತ್ತು. ವಿಧಿಯು ರಮಾಬಾಯಿಯರ ತಪ್ಪನ್ನು ಅವರ ಕೊರಳಿಗೆ ಕಟ್ಟಿ, ತಾನು ವಿಧಿಯಲ್ಲ, ಅವರು ವಿಧಿಯೆಂಬಂತೆ, ಘಟನೆಯನ್ನು ಜರುಗಿಸಿ ತಾನು ಸುರಕ್ಷಿತವಾಗಿ ಪಾರಾಗಿ ಹೋಗಿತ್ತು.

ಯಾಕಂದರೆ ಮುಂದೆ ಅಲ್ಪಾವಧಿಯಲ್ಲಿಯೇ ಕಿಟ್ಟು ಮಿತಿಮೀರಿ ಸಂಕಟಪಟ್ಟು ಹೊರಳಾಡಲು ಪ್ರಾರಂಭಿಸಿದ. ಯಾವ ಆರೈಕೆಯೂ ಅವನನ್ನು ಶಾಂತಗೊಳಿಸಲು ಸಮರ್ಥವಾಗಲಿಲ್ಲ. ಗಾಬರಿಯಾಗಿ ರಮಾಬಾಯಿಯರು ಡಾಕ್ಟರನ್ನು ಕರೆತರಲು ತಿಪ್ಪನನ್ನು ಕಳಿಸಿದರು. ಡಾಕ್ಟರು ಬಂದು ನಡೆದುದನ್ನೆಲ್ಲ ಕೇಳಿದಾಗ,–ಅವರೂ ಸಹ ಗಾಬರಿಯಾದಂತೆ ಕಂಡಿತು. "ಹೊಟ್ಟೆಯಲ್ಲಿ ನೋವು! ನೋವು!" ಎಂದು ಒಂದು ನಿಮಿಷ ಸಹ ಸುಮ್ಮನಿರದೆ ಕಿಟ್ಟು ಒರಲುತ್ತಿದ್ದ. ಈ ನರಳಾಟದಲ್ಲಿಯೇ ಮರುದಿನ ನಸುಕಿನಲ್ಲಿ ಅವನ ಆಯುಷ್ಯವು ಮುಗಿದುಹೋಯಿತು. ಡಾಕ್ಟರು ಕೊಟ್ಟ ಯಾವ ಸೂಜಿಮದ್ದೂ ಅವನನ್ನು ಉಳಿಸಲು ಸಮರ್ಥವಾಗಲಿಲ್ಲ.

ತೀರಿಕೊಂಡ ಮಗನ ಹಾಸಿಗೆಯ ಬಳಿಗೆ ಕುಳಿತ ರಮಾಬಾಯಿಯರು ಹಾಗೆಯೇ ಕುಳಿತುಬಿಟ್ಟರು. ತಾಯಿ, ಮಗ, ಜೀವನ, ಮರಣ, ಸುಖ, ದುಃಖ,—ಎಲ್ಲವೂ ಅವರಿಗೆ ಕನಸಾದವು. ಸಿಡಿಲು ಬಂದು ತಾಕಿದಂಥ ಮನಸ್ಸಿನಂತೆ ಅವರ ಪ್ರಜ್ಞೆಯೆಲ್ಲ ಹಾರಿಹೋಗಿತ್ತು. ಅವರ ಎದೆಯಲ್ಲಾದ ದಾಹಕ್ಕೆ ಅವರ ಕಣ್ಣೀರಿನ ಸೆಲೆಯು ಸಹ ಬತ್ತಿಹೋಗಿತ್ತು. ತಿಪ್ಪನೇ ಹೋಗಿ ಸುಬ್ಬಣಾಚಾರ್ಯರಿಗೆ ಆದುದನ್ನೆಲ್ಲ ಹೇಳಿದ್ದ. ಅವರೇ ಮುಂದಿನ ಎಲ್ಲ ವ್ಯವಸ್ಥೆಯ ಸಿದ್ಧತೆಯನ್ನು ನಡೆಸಿದ್ದರು. ಈಗ ರಮಾಬಾಯಿಯರು ಒಂದು ಚಿತ್ರದಂತೆ ನಿಶ್ಚಲರಾಗಿದ್ದರು. ಸ್ಮಶಾನವನ್ನು ಕಾಯುತ್ತ ಕುಳಿತ ಹರಿಶ್ಚಂದ್ರನ ಕಾಠಿನ್ಯವು ಅವರಲ್ಲಿ ಬಂದಿತ್ತು. ರುಂಡಗಳ ಹಾರವನ್ನು

ಹಾಕಿಕೊಂಡ ರುದ್ರನ ಭೀಷಣತೆಯು ಅವರ ಹೃದಯದಲ್ಲಿ ಮೂಡಿತ್ತು. ಮಗನ ಶವದ ಬಳಿಗೆ ಕುಳಿತ ಅವರು ಅತ್ತಿತ್ತ ಹೊರಳಲಿಲ್ಲ. ಸಹೋದ್ಯೋಗಿಗಳನ್ನು ಕರೆದುಕೊಂಡು ಎಲ್ಲವನ್ನು ಸಿದ್ಧಪಡಿಸಿ ಕಿಟ್ಟನನ್ನೊಯ್ಯಲು ಸುಬ್ಬಣಾಚಾರ್ಯರು ಬಂದಾಗ ಮಾತ್ರ ರಮಾಬಾಯರು: "ನನ್ನ ಕಿಟ್ಟೋನ ಎಲ್ಲಿ ಒಯ್ಯುತೀರಿ! ಅವನ ಸಂಗತೀಲೆ ನನ್ನೂ ಒಯ್ಯಿರಿ! ಸುಡರಿ! ಅವನ್ನ ಬಿಟ್ಟು ನಾ ಇನ್ನ ಹ್ಯಾಂಗಿರಲಿ!" ಎಂದು ರೋದಿಸಿ ನೆಲದ ಮೇಲೆ ಬಿದ್ದು ಹೊರಳಾಡಹತ್ತಿದರು.

---